

# ಹೊಸತು




## ನಿಮ್ಮದಿಯು ನಾಳೆ ನಮ್ಮದು

ಮಾರ್ಚ್ ೨೦೦೦
ಬೆಲೆ : ರೂ. ೧೦

## ಮಾರ್ಚ್ - ೮ ಅಂತರರಾಷ್ಟ್ರೀಯ ಮಹಿಳಾ ದಿನ

## ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ಬಿಡುಗಡೆ !

ಕನ್ನಡದಲ್ಲಿ ಮೊದಲ ಪ್ರಯತ್ನ, ಪ್ರತಿಯೊಂದು ಶಾಲೆಯ, ಪ್ರತಿಯೊಂದು
ಮನೆಯ ಗ್ರಂಥ ಭಂಡಾರದಲ್ಲಿ ಇರಲೇಬೇಕಾದ ಕೃತಿ

# ದೇಶ-ವಿದೇಶಗಳ ಪರಿಚಯ

ಡೆಮ್ಮಿ 1/4 ಆಕಾರದ
ಸುಮಾರು 160 ಪುಟಗಳು
ಬೆಲೆ : ರೂ. 135

ಪ್ರಕಟಣ ಪೂರ್ವ
ವಿಶೇಷ ರಿಯಾಯಿತಿ
ರೂಪಾಯಿ 45/-

ಉತ್ತಮ ಮುದ್ರಣ!
ಅಚ್ಚುಕಟ್ಟಾದ ಬೈಂಡಿಂಗ್!

ನಿಮ್ಮ ಬೇಡಿಕೆಯನ್ನು
ಇಂದೇ ಸಲ್ಲಿಸಿ

ಸುಮಾರು 190 ದೇಶಗಳ ಭೌಗೋಳಿಕ ನೆಲೆ, ಇತಿಹಾಸ, ರಾಜಕೀಯ ವ್ಯವಸ್ಥೆ, ಜನಸಂಖ್ಯೆ, ವಿಸ್ತೀರ್ಣ ಇತ್ಯಾದಿಗಳ ಸಂಕ್ಷಿಪ್ತ ಪರಿಚಯ - ನಕ್ಷೆಗಳ ಸಹಿತ. ವರ್ಣದಲ್ಲಿ ಎಲ್ಲ ದೇಶಗಳ ಬಾವುಟಗಳು. ಅಲ್ಲದೆ ಆರು ಖಂಡಗಳು, ಸಾಗರಗಳು, ಎತ್ತರದ ಪರ್ವತಗಳು, ದೊಡ್ಡ ನದಿಗಳು ಹಾಗೂ ಇತರ ಉಪಯುಕ್ತ ಮಾಹಿತಿಗಳು

ಮಾರ್ಚ್ 25ನೇ ತಾರೀಖಿನೊಳಗಡೆ ಪೂರ್ತಿ ಮುಂಗಡ ಹಣ ಕಳುಹಿಸಿ ನೋಂದಾಯಿಸಿಕೊಳ್ಳುವವರಿಗೆ
ವಿಶೇಷ ರಿಯಾಯಿತಿ ಬೆಲೆ ರೂ. 90, ಅಂಚೆ ವೆಚ್ಚ ರೂ. 10 ಪ್ರತ್ಯೇಕ



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು-560 001
ದೂರವಾಣಿ / ಫ್ಯಾಕ್ಸ್ : 2203580 / 81 / 82 email : nkp@bgl.vsnl.net.in
441016 :: 444094 :: ಗುಲ್ಬರ್ಗಾ ☏ 24032

# ಹೊಸತು

## ಒಳಗೇನಿದೆ.....



ಚಿತ್ರಗಳು : ಗುಜ್ಜಾರ್, ಮೋಹನ, ಹಾದಿಮನಿ, ರವಿಕುಮಾರ್ ಅಜ್ಜೀಪುರ
ಛಾಯಾಚಿತ್ರಗಳು : ಕೆ. ಪಿ. ಸ್ವಾಮಿ, ಬೈಫ್, ತಿಪಟೂರು
ಮುಖಪುಟ ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

ಅಮೆರಿಕದ ಅಧ್ಯಕ್ಷರು ಭಾರತಕ್ಕೆ ಭೇಟಿ ನೀಡಿ ನಮ್ಮ ಸೌಭಾಗ್ಯವನ್ನು ಹೆಚ್ಚಿಸುತ್ತಾರೆಂಬ ಭ್ರಾಂತಿಯ ಸಂಭ್ರಮದಲ್ಲಿ ಒಂದು ಕೆಟ್ಟ ಘಟನೆಯನ್ನು ಮಹತ್ವವಿಲ್ಲದ ಸಂಗತಿಯೆಂಬಂತೆ ಕಡೆಗಣಿಸಲಾಗಿದೆ. ಸಂವಿಧಾನದ ಪರಾಮರ್ಶೆಯ ಬಗ್ಗೆ ದೊಡ್ಡ ಗದ್ದಲ ಎಬ್ಬಿಸಿರುವ ಆಳುವ ಪಕ್ಷವು ಈ ಬಗ್ಗೆ ಮೌನ ವಹಿಸಿರುವುದು ಅಷ್ಟೇನೂ ಗೌರವಯುತವಾದುದಲ್ಲ. ಸಂವಿಧಾನದಲ್ಲಿ ಏನಾದರೂ ಉನ್ನತ ಮೌಲ್ಯಗಳಿದ್ದರೆ ಅವುಗಳ ಪೈಕಿ ನಮ್ಮ ರಾಷ್ಟ್ರದ ಸಾರ್ವಭೌಮತ್ವ ಮತ್ತು ಅದರ ರಕ್ಷಣೆ ಆದ್ಯತೆ ಪಡೆಯಬೇಕು. ಆ ಶ್ರೇಷ್ಠ ಲಕ್ಷಣಕ್ಕೆ ಕುತ್ತು ತರುವ ಒಂದು ಪ್ರಸಂಗ ಜರುಗಿದೆ. ಅದು ಗೌಣವೆಂಬ ನಟನೆ ಮಾಡಿದರೆ ನಮ್ಮ ''ರಾಷ್ಟ್ರೀಯತೆ'' ಸಹ ಅದೇ ಮಟ್ಟಕ್ಕೆ ಇಳಿಯುತ್ತದೆ.

ಪ್ರಸಂಗ ಇದು : ಅಮೆರಿಕಾದ ಪೊಲೀಸ್ ಇಲಾಖೆಯಲ್ಲಿ ಅತ್ಯುನ್ನತ ವಿಭಾಗವಾದ ಗುಪ್ತದಳ ಎಂಬುದೊಂದಿದೆ. ಅದಕ್ಕೆ ''ಫೆಡರಲ್ ಬ್ಯೂರೋ ಆಫ್ ಇನ್‌ವೆಸ್ಟಿಗೇಷನ್ಸ್'' (ಎಫ್.ಬಿ.ಐ) ಎಂಬ ಹೆಸರಿದೆ. ಅದು ಸಿ.ಐ.ಎ. ಎಂಬ ಅಂತರರಾಷ್ಟ್ರೀಯ ಬೇಹುಗಾರ ಮಂಡಲಿಯ ಜೊತೆಗೂ ಕೆಲಸ ಮಾಡುತ್ತದೆ. ಯಾವ ದೇಶದಲ್ಲಾದರೂ ಸರಿಯೇ ಅಮೆರಿಕಾದ ರಾಯಭಾರ ಕಚೇರಿಯಲ್ಲಿ ಸಿ.ಐ.ಎ. ದಳದವರು ಇರುವುದು ಸರ್ವೇಸಾಮಾನ್ಯ. ಕೆಲವೊಮ್ಮೆ ರಾಯಭಾರಿಗಿಂತಲೂ ಈ ''ಸ್ಟೇಷನ್ ಚೀಫ್'' ಎಂಬುವವನು ಹೆಚ್ಚು ಅಧಿಕಾರ ಚಲಾಯಿಸುತ್ತಾನೆ. ಈಗ ಎಫ್.ಬಿ.ಐ.ಗೆ ದೆಹಲಿಯಲ್ಲಿ ಒಂದು ಕಚೇರಿಯನ್ನು ಸ್ಥಾಪಿಸಿಕೊಳ್ಳಲು ಕೇಂದ್ರಸರ್ಕಾರ ಅನುಮತಿ ನೀಡಿದೆ. ಈಗಾಗಲೇ ಅದರ ಬಹಿರಂಗ ಕೆಲಸ ಆರಂಭವಾಗಿದೆ. ಗುಪ್ತ ಕಾರ್ಯಾಚರಣೆ ಅನೂಚಾನವಾಗಿ ನಡೆಯುತ್ತಲೇ ಬಂದಿದೆಯೆಂಬುದು ಎಲ್ಲರಿಗೂ ಗೊತ್ತಿದೆ.

ಎಫ್.ಬಿ.ಐ. ಎಂತಹ ಅಗಾಧವಾದ ಪೊಲೀಸ್ ದಳವೆಂಬುದರ ಕಲ್ಪನೆ ಎಲ್ಲರಿಗೂ ಇರಬೇಕೆಂದು ನಿರೀಕ್ಷಿಸುವುದು ತಪ್ಪು. ಆದರೆ ಕೇಂದ್ರ ಸರ್ಕಾರಕ್ಕೆ ಇರಬೇಕು ಮತ್ತು ಇದೆ. ಹಾಗಿದ್ದರೂ ಆ ದಳಕ್ಕೆ ನಮ್ಮ ದೇಶದಲ್ಲಿ ಮುಕ್ತವಾಗಿ ಕಾರ್ಯಾಚರಣೆ ಕೈಗೊಳ್ಳಲು ಅವಕಾಶ ಕೊಡಲಾಗಿರುವುದು ಖಂಡನೀಯ. ಈ ಎಫ್.ಬಿ.ಐ. ಜಾಲ ಎಂತಹುದೆಂದು ತಿಳಿದುಕೊಳ್ಳಲು ಒಂದು ಚಿಕ್ಕ ಮಾಹಿತಿ ಸಾಕು. ಬೆಂಗಳೂರಿನಲ್ಲಿ ಯಾವ ಸಂಸ್ಥೆ ಎಂತಹ ಚಟುವಟಿಕೆಯಲ್ಲಿ ತೊಡಗಿದೆ, ಅದರ ಕಾರ್ಯಕರ್ತರು ಯಾರು, ಎಂಬುದು ಬೆಂಗಳೂರು ಪೊಲೀಸರಿಗೆ ಗೊತ್ತಿಲ್ಲದಿದ್ದರೂ ಎಫ್.ಬಿ.ಐ.ಗೆ ತಿಳಿದಿರುತ್ತದೆ. ವಿದ್ಯಾರ್ಥಿಯೊಬ್ಬ ಅಮೆರಿಕಾಕ್ಕೆ ಹೋಗಿ ವ್ಯಾಸಂಗ ಮಾಡಲು ವೀಸಾಕ್ಕೆ ಅರ್ಜಿ ಸಲ್ಲಿಸುತ್ತಾನೆ ಎನ್ನೋಣ. ಅವನ ಇಡೀ ಜಾತಕ ಎಫ್.ಬಿ.ಐ. ಬಳಿ ಇರುತ್ತದೆ. ನನ್ನ ಹಿರಿಯ ವಿದ್ಯಾರ್ಥಿ ಬಿ. ಇ. ತೇರ್ಗಡೆಯಾಗಿದ್ದು ವೀಸಾ ಸಂದರ್ಶನಕ್ಕೆ ಹೋಗಿದ್ದಾಗ ಆತನಿಗೆ ಹಾಕಲಾಗಿದ್ದ ಪ್ರಶ್ನೆ ಇದು : ನೀನು ಮೆಟ್ರಿಕ್ ಓದುತ್ತಿದ್ದಾಗ ಶಾಲೆಯ ಸ್ಮರಣ ಸಂಚಿಕೆಯಲ್ಲಿ ಮ್ಯಾಕ್ಸಿಂ ಗಾರ್ಕಿ ಬಗ್ಗೆ ಲೇಖನ ಬರೆದಿದ್ದೆಯಲ್ಲಾ, ಅದನ್ನೇಕೆ ಅರ್ಜಿಯಲ್ಲಿ ನಮೂದಿಸಿಲ್ಲ?

ದೆಹಲಿಯಲ್ಲಿ ಕಚೇರಿ ಇಲ್ಲದಿದ್ದಾಗಲೇ ಇಂತಹ ಬೇಹುಗಾರಿಕೆಗೆ ಪ್ರಸಿದ್ಧವಾಗಿದ್ದ ಎಫ್.ಬಿ.ಐ.ಗೆ ಈಗ ನಮ್ಮ ಮನೆಯೊಳಗೆ ಕೂತು ನಮ್ಮ ಮೇಲೆ ನಿಗಾ ಇಡಲು ಅವಕಾಶ. ಎಲ್ಲ ಪ್ರಜಾಪ್ರಭುತ್ವವಾದಿ, ಪುರೋಗಾಮಿ ಚಳುವಳಿಗಳನ್ನೂ ಹತ್ತಿಕ್ಕುವ ಎಫ್.ಬಿ.ಐ. ಆ ದಿಕ್ಕಿನಲ್ಲಿ ನಮ್ಮ ಆಳುವ ವರ್ಗಕ್ಕೆ ಸಹಾಯಹಸ್ತ ನೀಡಲು ಇಲ್ಲಿ ಕಚೇರಿ ತೆಗೆದಿದೆ. ಸಾಹಿತ್ಯ, ಕಲೆ, ಸಂಸ್ಕೃತಿ ವಲಯಗಳಲ್ಲೂ ಸಹ ಹಸ್ತಕ್ಷೇಪ ಮಾಡುವ ಈ ಗೂಢಚಾರ ಸಂಸ್ಥೆಗೆ ಕಚೇರಿ ತೆಗೆಯಲು ಅನುಮತಿ ನೀಡುವುದು ನಮ್ಮ ರಾಷ್ಟ್ರೀಯ ಸಾರ್ವಭೌಮತ್ವಕ್ಕೆ ಅಪಚಾರವೆಂಬ ವಿಷಯ ದೆಹಲಿಯ ಸಿಂಹಾಸನಾಧೀಶರಿಗೆ ಏಕೆ ತಿಳಿಯಲಿಲ್ಲ? ಅಮೆರಿಕಾದ ಹೊರಗೆ ಹೀಗೆ ಮುಕ್ತವಾಗಿ ಕಚೇರಿ ತೆಗೆಯಲು ಎಫ್.ಬಿ.ಐ.ಗೆ ಅವಕಾಶ ತೆರವು ಮಾಡಿಕೊಟ್ಟಿರುವ ದೇಶಗಳು ಬಹಳ ಕಡಿಮೆ. ಅಂತಹ ಭಟ್ಟಂಗಿ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತದ ಹೆಸರು ದಾಖಲಾಗುವುದು ನಾವೆಲ್ಲ ಗಂಭೀರವಾಗಿ ಪರಿಗಣಿಸಬೇಕಾದ ವಿಷಯ, ತಲೆ ತಗ್ಗಿಸಬೇಕಾದ ವಿಷಯ.

* * *

ಕಳೆದ ಸಂಚಿಕೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಅಲ್ಲಾ ಬಕ್ಷ್‌ನ ಉದ್ಧಟತನದ ಪ್ರಶ್ನೆ ಎತ್ತಿದ್ದೆವು. ಮಂಗಳಾರತಿ ಕುಖ್ಯಾತಿಯ ಇವನನ್ನು ಕೋಲಾರದಿಂದ ವರ್ಗಾಯಿಸಲಾಗಿತ್ತು. ಅವನ ಉದ್ಧಟತನದ ಮೂಲ ಈಗ ಬಯಲಾಗಿದೆ. ಗಂಧದೆಣ್ಣೆ ಕಳ್ಳಸಾಗಾಣಿಕೆಯಲ್ಲಿ ಈತ ಶಾಮೀಲಾಗಿದ್ದಿರಬೇಕು. ಹಂಚಿಕೆಯಲ್ಲಿ ವ್ಯವಹಾರ ಕುದುರದಿದ್ದಾಗ ಕಳ್ಳಮಾಲನ್ನು ಹಿಡಿದ. ಅದರಲ್ಲಿ ಸ್ವಲ್ಪಭಾಗವನ್ನು ದಾಖಲೆಯಲ್ಲಿ ನಮೂದಿಸಿ ಮಿಕ್ಕಿದ್ದನ್ನು ಲಪಟಾಯಿಸಿ ೨೧ ಲಕ್ಷ ಜೇಬಿಗೆ ಸೇರಿಸಿದ. ಅದನ್ನು ಯಾರೋ ಮೇಲಧಿಕಾರಿಗಳಿಗೆ ತಿಳಿಸಿ ತನಿಖೆ ನಡೆಸಿದರು. ಲಕ್ಷಗಟ್ಟಲೆ ಹಣದ ದರ್ಪದಿಂದ ಮೆರೆಯುತ್ತಿದ್ದ ಅಲ್ಲಾ ಬಕ್ಷ್ ಈಗ ಅಮಾನತ್ತಿನಲ್ಲಿದ್ದಾನೆ. ನಿಜಕ್ಕೂ ಕಂಬಿ ಎಣಿಸಬೇಕಾದವನು ಇವನು. ಹಿಂದೆ ಅವನೊಡನೆ ಶಾಮೀಲಾಗಿದ್ದವರು ಅವನ ದುಷ್ಟತನವನ್ನು ಒಪ್ಪಿ, ಮುಚ್ಚಿಟ್ಟಿದ್ದರು; ಹಂಚಿಕೆಯ ವ್ಯವಹಾರದಲ್ಲಿ ಭಿನ್ನತೆ ಬಂದಾಗ ಅವನನ್ನು ಹಿಡಿದುಕೊಟ್ಟರು ! ಅವನ ಮತೀಯ ದುರ್ಭಾವನೆಯನ್ನು ಮುಂದುಮಾಡಿದವರು ಹಿಂದೆ ಅವನನ್ನು ಸಮರ್ಥಿಸುತ್ತಿದ್ದವರೇ ಎಂಬುದನ್ನು ಮರೆಯಬಾರದು. ಹೊರಗಡೆಗೆ ಇದು ಮತೀಯ ಪ್ರಶ್ನೆ; ಒಳಗಡೆ ಅದು ಲಕ್ಷದ ಪ್ರಶ್ನೆ. ೦೦

ತಿಂಗಳ ಪತ್ರಿಕೆ
ಹೊಸತು
ನಿಮ್ಮದಿಯ ಸಾಕಿ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧ ಸಂಚಿಕೆ - ೮ ಮಾರ್ಚ್ ೨೦೦೦

ಪ್ರಧಾನ ಸಂಪಾದಕ
ಜಿ. ರಾಮಕೃಷ್ಣ

ಸಂಪಾದಕ ಮಂಡಲಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ರಹಮತ್ ತರೀಕೆರೆ
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

ವ್ಯವಸ್ಥಾಪಕರು
ಎಸ್. ಸುರೇಂದ್ರ
ಎ. ಆರ್. ಉಡುಪ

ಮುದ್ರಕ-ಪ್ರಕಾಶಕ
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ
ನವಕರ್ನಾಟಕ ಪ್ರಿಂಟರ್ಸ್
೧೫೭ ಮತ್ತು ೧೫೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೭೫೬

ಹೊಸತು ಕಚೇರಿಯ ವಿಳಾಸ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಮುಂದೂಡಲಾಗಿರುವ 'ಸಾಹಿತ್ಯ ಪರಿಷೆ'

ಫೆಬ್ರವರಿಯಲ್ಲಿ ನಡೆಯಬೇಕಿದ್ದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಮತ್ತೆ ಅನಿರ್ದಿಷ್ಟ ಕಾಲ ಮುಂದೂಡಲಾಗಿದೆ. ಸಾಹಿತ್ಯ ಪರಿಷತ್ತಿನ ವತಿಯಿಂದ ನೀಡುತ್ತಿರುವ ಕಾರಣ, ಈಗ ಪಂಚಾಯಿತಿ ಚುನಾವಣೆಗಳು ನಡೆಯುತ್ತಿವೆಯಾದುದರಿಂದ ಸಾಹಿತ್ಯದ ಅಭಿಮಾನಿಗಳು ಸಮ್ಮೇಳನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲಾರರೆಂಬ ಆತಂಕ. ಆದರೆ ವಾಸ್ತವ ಸಂಗತಿ ಭಿನ್ನವಾಗಿದೆ. ಸ್ವಾಗತ ಸಮಿತಿಯ ಅಧ್ಯಕ್ಷರು, ಪ್ರಭಾವಿ ಸದಸ್ಯರೆಲ್ಲ ರಾಜಕಾರಣಿಗಳಾಗಿರುವುದರಿಂದ, ಅವರೆಲ್ಲ ಚುನಾವಣಾ ಪ್ರಚಾರದಲ್ಲಿ ನಿರತರಾಗಿದ್ದಾರೆ; ಅವರನ್ನು ಬಿಟ್ಟರೆ ಅಪಾರ ಹಣ ಸಂಗ್ರಹಿಸಲು ಉಳಿದವರಿಂದ ಸಾಧ್ಯವಾಗುವುದಿಲ್ಲ. ಸರ್ಕಾರ ಸಮ್ಮೇಳನಕ್ಕಾಗಿ ನೀಡಿರುವ ಸುಮಾರು ಇಪ್ಪತ್ತು ಲಕ್ಷ ಅನುದಾನವಲ್ಲದೆ ಪ್ರತಿ ಸಮ್ಮೇಳನದಲ್ಲಿಯೂ ಸಾರ್ವಜನಿಕರಿಂದ, ಶ್ರೀಮಂತರಿಂದ ಅಪಾರ ಹಣ ಸಂಗ್ರಹವಾಗುವುದರಿಂದ ರಾಜಕಾರಣಿಗಳನ್ನು ಪರಿಷತ್ತು ಬಿಡುವಂತಿಲ್ಲ.

ಇಲ್ಲಿ ನಾವು ಎರಡು ಅಂಶಗಳನ್ನು ಗಮನಿಸಬೇಕಾಗುತ್ತದೆ. ಮೊದಲನೆಯದು ಸಾಹಿತ್ಯ ಸಮ್ಮೇಳನಕ್ಕೆ ಅತಿ ಹೆಚ್ಚಿನ ಹಣ ಏಕೆ ಬೇಕು ? ಎರಡನೆಯದು ಸ್ವಾಗತ ಸಮಿತಿ ಅಧ್ಯಕ್ಷರು ಮತ್ತು ಸದಸ್ಯರಲ್ಲಿ ಹೆಚ್ಚಿನವರು ಅಧಿಕಾರಿಗಳು ಮತ್ತು ರಾಜಕಾರಣಿಗಳೇ ಏಕಿರಬೇಕು ?

ಶ್ರೀ ಜಿ. ನಾರಾಯಣರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗುವ ಮುನ್ನ ಪರಿಷತ್ತಿಗೆ ಸರ್ಕಾರಿ ಅನುದಾನ ತೀರಾ ಅಲ್ಪ ಪ್ರಮಾಣದಲ್ಲಿತ್ತು. ಕೆಲವು ಸಾವಿರವಿದ್ದ ಈ ಅನುದಾನದ ಮೊತ್ತ ಹತ್ತಾರು ಲಕ್ಷಗಳಿಗೆ ಏರಿ, ಈಗ ಸಮ್ಮೇಳನಕ್ಕೆ ಕೊಡುವ ಅನುದಾನವೂ ಸೇರಿದರೆ ಒಂದು ಕೋಟಿ ರೂಪಾಯಿಗಳಾಗುತ್ತವೆ. ಸಮ್ಮೇಳನಕ್ಕೆ ಆಯಾ ಸ್ಥಳದ ಮಹಿಮೆ, ನಾಯಕರು ಮತ್ತು ಅಧಿಕಾರಿಗಳ ವರ್ಚಸ್ಸಿಗೆ ಅನುಗುಣವಾಗಿ ಅರ್ಧಕೋಟಿಯವರೆಗೂ ಹಣ ಸಂಗ್ರಹಿಸಿರುವ ಉದಾಹರಣೆಗಳಿವೆ. ಇದರಲ್ಲಿ ಹೆಚ್ಚಿನ ಮೊತ್ತ ಕಪ್ಪುಹಣವೆಂದು ಪ್ರತ್ಯೇಕ ಹೇಳುವ ಅಗತ್ಯವಿಲ್ಲ. ಕಪ್ಪುಹಣವೆಂದ ಮೇಲೆ ಲೆಕ್ಕ ಪತ್ರಗಳೆಲ್ಲ ಸಹಜವಾಗಿಯೇ ಕತ್ತಲೆಯಲ್ಲಿ ಕರಗಿಹೋಗುತ್ತವೆ. ಸಾಹಿತ್ಯ ಪರಿಷತ್ತು ಈ ಕರಾಳ ವ್ಯವಹಾರಕ್ಕೆ ಸುಸಂದರ್ಭ ಒದಗಿಸಲೆಂದೇ ಈ ಸಮ್ಮೇಳನಗಳನ್ನು ನಡೆಸುವಂತಾಗಿಬಿಟ್ಟಿದೆ. ಹತ್ತಾರು ಸಾವಿರ ಜನರಿಗೆ ಊಟೋಪಚಾರ ಮತ್ತು ವಸತಿ; ಅದರ ಎರಡು ಮೂರು ಪಟ್ಟು ಜನಗಳು ಕುಳಿತುಕೊಳ್ಳಲು ಚಪ್ಪರ-ಶಾಮಿಯಾನ-ಆಸನಗಳು, ಭವ್ಯವಾದ ವೇದಿಕೆ– ಈ ಏರ್ಪಾಟಿನ ತರಾತುರಿಯಲ್ಲಿ ಸಾಹಿತ್ಯವನ್ನು ಕುರಿತ ಚರ್ಚೆ, ಸಂವಾದ, ಕಾವ್ಯಗೋಷ್ಠಿ ಮುಂತಾದವುಗಳ ಯೋಜನೆ ಹಿನ್ನೆಲೆಗೆ ಸರಿಯುತ್ತದೆ. ಎಷ್ಟೋ ಬಾರಿ ಈ ಗೋಷ್ಠಿಗಳಲ್ಲಿ ಭಾಗವಹಿಸಲು ಪ್ರತಿಭೆಗಿಂತ ಸಾಹಿತ್ಯೇತರ ಮಾನದಂಡ ಪ್ರಮುಖವಾಗಿರುವುದರಿಂದ ಕೆಲ ಸೃಜನಶೀಲ ವ್ಯಕ್ತಿಗಳು ಅದರ ಹತ್ತಿರ ಸುಳಿಯಲೂ ಅವಕಾಶವಿಲ್ಲ. ಹೋದವರಿಗೂ ತಮ್ಮ ಪ್ರಬಂಧಗಳನ್ನು ಮಂಡಿಸಲು ವಾತಾವರಣವಾಗಲಿ ಕಾಲಾವಕಾಶವಾಗಲಿ ಇಲ್ಲ. ಉದ್ಘಾಟನೆಗೆಂದು ನಾಲ್ಕು ಗಂಟೆ ದುರ್ವ್ಯಯ ಮಾಡಿದವರಿಗೆ ಗೋಷ್ಠಿಗಳು ತೀರಾ ಅಪ್ರಸ್ತುತವೆಂದು ತೋರುತ್ತವೆ. ಆದ್ದರಿಂದ ಐದು-ಹತ್ತು ನಿಮಿಷಗಳಲ್ಲಿ ಪ್ರಬಂಧಗಳನ್ನು ಮಂಡಿಸಬೇಕೆಂಬ ಒತ್ತಾಯ ಬರುತ್ತದೆ. ಹಾಸನದಲ್ಲಿ ಜರುಗಿದ ಸಮ್ಮೇಳನದಲ್ಲಿ ಅಧ್ಯಕ್ಷ ಕಣವಿಯವರು ತಮ್ಮ ಭಾಷಣ ಓದಲು ಸಹ ಆಗದಷ್ಟು ತರಾತುರಿ ಉಂಟುಮಾಡಿದ್ದ ಸಂಯೋಜಕರಿಗೆ ಸಾಹಿತ್ಯ-ಸಂಸ್ಕೃತಿ ಬೇಕಿರಲಿಲ್ಲ; ಅವರಿಗೆ ಬೇಕಾಗಿದ್ದುದು ಪ್ರಧಾನಿಯ ಉಪಸ್ಥಿತಿ, ಮಠಾಧಿಪತಿಗಳ ಆಶೀರ್ವಾದ. ಇಂತಹ ಉಪಟಳಗಳಿಲ್ಲದೆ ನಡೆದ ಹಿಂದಿನ ಅನೇಕ ಸಮ್ಮೇಳನಗಳು ಮಾದರಿಯಾಗುವ ಬದಲು ಮರೆಯಾಗಿಬಿಟ್ಟಿವೆ. ಅ. ನೇ. ಉಪಾಧ್ಯೆಯವರು ಅಧ್ಯಕ್ಷರಾಗಿದ್ದಾಗ ಶ್ರವಣಬೆಳಗೊಳದಲ್ಲಿ ಸಮ್ಮೇಳನ ನಡೆದಿತ್ತು. ೧೯೭೦ರಲ್ಲಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ನೇತೃತ್ವದಲ್ಲಿ ಪ್ರತಿನಿಧಿಗಳಿಗೆ ಒಂದು ಶಾಲೆಯಲ್ಲಿ ಊಟ ಬಡಿಸಿದರು. ಯಾವ ಮಂತ್ರಿಮಹಾಶಯನೂ ಇರಲಿಲ್ಲ. ಸಮ್ಮೇಳನ ಅರ್ಥಪೂರ್ಣವಾಗಿ ನಡೆಯಿತು. ಇಂದಿಗೂ ಅಂತಹ ಸಮ್ಮೇಳನಗಳನ್ನು ಜನ ನೆನೆಯುತ್ತಾರೆ.

ದುರದೃಷ್ಟಕರ ಸಂಗತಿ ಎಂದರೆ ಇದೆಲ್ಲ ಆಟೋಪಗಳನ್ನೂ ನಿಲ್ಲಿಸಿ ಸರಳವಾದ ಸಾಹಿತ್ಯಪರ ಸೃಜನಶೀಲ ಸಮ್ಮೇಳನ ನಡೆಸಲು ಈಚಿನ ವರ್ಷಗಳಲ್ಲಿ ಯಾರೊಬ್ಬರೂ ಇಲ್ಲಿಯವರೆಗೆ ಪ್ರಯತ್ನಿಸದಿರುವುದು. ಸಾಹಿತ್ಯ ಸಮ್ಮೇಳನಕ್ಕೆ ಪ್ರತ್ಯೇಕ ಚಪ್ಪರ, ಶಾಮಿಯಾನ ಹಾಕದೆ ಯಾವುದೇ ಊರಿನಲ್ಲಿರಬಹುದಾದ ಶಾಲಾ ಕಾಲೇಜುಗಳು, ಸಮುದಾಯ ಭವನ, ಪುರಭವನಗಳನ್ನು ಪುಕ್ಕಟೆಯಾಗಿ ವಿವಿಧ ಗೋಷ್ಠಿಗಳಿಗೆ ಬಳಸಿಕೊಳ್ಳಬಹುದು; ಸಮ್ಮೇಳನಕ್ಕೆ ಬರುವವರು ಅವರವರ ಊಟ ವಸತಿಗೆ ತಾವೇ ಏರ್ಪಾಡು ಮಾಡಿಕೊಂಡು, ಆಹ್ವಾನಿತರಿಗೆ ಮಾತ್ರ ಅಧಿಕೃತ ವ್ಯವಸ್ಥೆ ಮಾಡಬಹುದು; ಮೆರವಣಿಗೆ ಬಾಜಾ ಭಜಂತ್ರಿಗಳಿಗೆ ಅವಕಾಶವಿಲ್ಲದಂತೆ ನೋಡಿಕೊಳ್ಳಬಹುದು; ರಾಜಕಾರಣಿಗಳು, ಜಗದ್ಗುರುಗಳಿಗೇ ವೇದಿಕೆಯ ಮೇಲೆ ಅಗ್ರಾಸನ ನೀಡಿ ಸಾಹಿತಿಗಳನ್ನು ಮೂಲೆಗೊತ್ತರಿಸಿ ಪರಿಷತ್ತಿನ ಪದಾಧಿಕಾರಿಗಳು ಹಲ್ಲುಗಿಂಜುತ್ತಾ ಮುಜುರೆ ಒಪ್ಪಿಸದಂತೆ ತಡೆಯಬಹುದು. ಆದರೆ ಇದು ಯಾರಿಗೂ ಬೇಕಿಲ್ಲ. ಈಗಿರುವಂತೆ ಸಾಹಿತ್ಯ ಸಮ್ಮೇಳನಕ್ಕೂ ಯಾವುದೇ ಮಾರಿ ಜಾತ್ರೆ ಅಥವಾ ದನದ ಜಾತ್ರೆಗಳಿಗೂ ಮೂಲತಃ ವ್ಯತ್ಯಾಸವಿಲ್ಲ. ಅದೇ ಅಬ್ಬರ, ವ್ಯವಹಾರ, ಮನರಂಜನೆ ಇಲ್ಲಿಯೂ ಇರುತ್ತದೆ. ಆದುದರಿಂದ ವರ್ಷಕ್ಕೊಮ್ಮೆ ನಡೆಯುವ ಈ ''ಪ್ರಹಸನ ಪರಿಷೆ'' ನಿಂತುಹೋದರೆ ಯಾರಿಗೂ ನಷ್ಟವಿಲ್ಲ. ನಿಜವಾದ ಸಾಹಿತಿಗಳಂತೂ ಈ ಬಗೆಗೆ ಒಂದು ಹನಿ ಕಣ್ಣೀರು ಸುರಿಸುವುದಿಲ್ಲ. ಆದರೆ ಕಪ್ಪುಹಣ ಕಮಾಯಿಸುವ ಅವಕಾಶಕ್ಕಾಗಿ ಜೊಲ್ಲು ಸುರಿಸುತ್ತ ನಿಂತಿರುವ ರಾಜಕಾರಣಿಗಳಿಗೆ, ಸಾಹಿತ್ಯವಲಯದ ಪುಢಾರಿಗಳಿಗೆ ಮಾತ್ರ ಇದು (ಜೇಬು) ತುಂಬಲಾರದ ನಷ್ಟವಾಗುವುದರಲ್ಲಿ ಅನುಮಾನವಿಲ್ಲ ವೆನ್ನಬಹುದಾಗಿದೆ. ಹೀಗಿರುವಾಗ ಬಾಗಲಕೋಟೆಯಲ್ಲಿ ''ಅದ್ದೂರಿಯಲ್ಲದಿದ್ದರೂ ಅರ್ಥಪೂರ್ಣವಾದ ಸಾಹಿತ್ಯ ಸಮ್ಮೇಳನ'' ನಡೆಸಿಕೊಡಲು ಸ್ಥಳೀಯ ಪರಿಷತ್ತಿನ ಅಧ್ಯಕ್ಷ ಶ್ರೀ. ಪೊಲೀಸ್ ಪಾಟೀಲರಿಗೆ ಅವಕಾಶವಾದರೂ ಹೇಗೆ ದೊರೆತೀತು ? ಅವರ ಆಕಾಂಕ್ಷೆಗೂ ಅವರ ಸಹ-ಸಂಯೋಜಕರಲ್ಲಿ ಕೆಲವು ಮುಖ್ಯರ ಆಸೆಗಳಿಗೂ ಅಂತರ ವಿಪರೀತವಾಗಿದೆ. ಇಂತಹ ಅಂತರಗಳಿಲ್ಲದ ಸಂಯೋಜನಾ ಸಮಿತಿಗಳು ಇನ್ನಾದರೂ ಅಸ್ತಿತ್ವಕ್ಕೆ ಬರಬೇಕು.

## ಮಹಿಳಾ ದಿನದ ಆಶಯ

ಮಾರ್ಚ್ ೮ ಅಂತರರಾಷ್ಟ್ರೀಯ ಮಹಿಳಾ ದಿನ. ಹಾಗೆಂದು ಗುರುತಿಸುವುದರಿಂದಲೇ ಮಹಿಳೆಯ ಸ್ಥಾನಮಾನಗಳಿಗೆ ಆದ್ಯತೆ ದೊರಕುವುದಿಲ್ಲ. ವಿಶ್ವದ ಅರ್ಧಭಾಗದ ಜನರ ಬಗ್ಗೆ ಇನ್ನರ್ಧ ಭಾಗದವರೂ ಕಾಳಜಿ ಇರಿಸಿಕೊಂಡಿದ್ದಾರೆಂಬುದರ ದ್ಯೋತಕ ಈ ದಿನವಾಗಬೇಕು ಮತ್ತು ಆ ಭಾವನೆ ಆಳವಾಗಿ ಬೇರೂರಿ ಕೃತಿಯ ರೂಪದಲ್ಲಿ ತೋರ್ಪಡಬೇಕು. ಅಂತಹ ಆಶಯದಿಂದ ಮಹಿಳೆಯರಿಗೆ ''ಹೊಸತು'' ಶುಭಾಶಯಗಳನ್ನು ಕೋರುತ್ತದೆ.

ಮಹಿಳೆಯರನ್ನು ಆರಾಧಿಸುವ ಮಾತುಗಳನ್ನಾಡುತ್ತಲೇ ಅವರನ್ನು ತುಳಿತಕ್ಕೆ ಗುರಿಮಾಡಿರುವ ಸಮಾಜಗಳು ಹಲವಾರು. ಅದು ಭಾರತೀಯ ಸಮಾಜದ ವಿಶಿಷ್ಟ ಲಕ್ಷಣವಾಗಿರುವಂತೆ ಬೇರೆ ಹಲವೆಡೆಗಳಲ್ಲೂ ಆಗಿದೆ. ಕಾನೂನಿನ ಅನ್ವಯದಿಂದ ಮಹಿಳೆಯರ ಪರಿಸ್ಥಿತಿ ಸಾಕಷ್ಟು ಸುಧಾರಿಸುತ್ತದೆಂದು ನಂಬುವವರಿಗೆ ಅಸ್ತಿತ್ವದಲ್ಲಿರುವ ಕಾನೂನಿನ ಪರಿಚಯ ಸಾಲದು. ಅದನ್ನು ಜಾರಿಗೊಳಿಸುವ ಯಂತ್ರದ ಬಗ್ಗೆ ಎಷ್ಟು ಹೇಳಿದರೂ ಅಲ್ಪವೇ. ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳಲ್ಲಿ ಸಹ ಅನೇಕ ವೇಳೆ ಅತಾರ್ಕಿಕ, ಅಸಂಬದ್ಧ ಮಾತುಗಳನ್ನು ಮಹಿಳೆಯ ಬಗ್ಗೆ ಆಡಿರುವುದು ಅಪರೂಪವೇನಲ್ಲ. ಉಚ್ಚ ಜಾತಿಯ ಜನ ಕೆಳಜಾತಿಯವಳೊಬ್ಬಳ ಮೇಲೆ ಅತ್ಯಾಚಾರ ನಡೆಸುತ್ತಾರೆಂಬ ಆಪಾದನೆ ಸರ್ವಥಾ ಅಸಾಧುವೆಂಬ ನುಡಿಮುತ್ತುಗಳು ರಾಜಾಸ್ತಾನದ ಒಬ್ಬ ನ್ಯಾಯಮೂರ್ತಿಯವೆಂದು ನಂಬುವುದು ಕಷ್ಟ, ಆದರೆ ನಿಜ.

೧೯೫೫ರ ಹಿಂದು ವಿವಾಹ ಕಾಯಿದೆಯಡಿ ೧೯೮೪ರಲ್ಲಿ ಒಂದು ಮೊಕದ್ದಮೆ ಹೂಡಲಾಗಿತ್ತು. ದೆಹಲಿಯ ಉಚ್ಚ ನ್ಯಾಯಾಲಯವು ಒಬ್ಬ ಮಹಿಳೆಗೆ ವಿಲಕ್ಷಣವಾದ ಶಿಕ್ಷೆ ವಿಧಿಸುವ ರೀತಿಯಲ್ಲಿ ಆಕೆಯ ಗಂಡನ ಕೋರಿಕೆಯನ್ನು ಮಾನ್ಯಮಾಡಿತ್ತು. ಅವನ ಪೂರ್ವಾನುಮತಿ ಪಡೆಯದೆ ಆಕೆ ಗರ್ಭವನ್ನು ವೈದ್ಯಕೀಯವಾಗಿ ತೆಗೆಸಿಹಾಕಿಕೊಂಡಿದ್ದಳು. ಅದಕ್ಕೆ ಗಂಡನು ಕೋರಿದ ವಿಚ್ಛೇದನವನ್ನು ದಾನಮಾಡಲಾಗಿತ್ತು. ೧೯೯೩ರಲ್ಲಿ ಹದಿನಾರು ವರ್ಷದ ಬಾಲಕಿಯ ತಂದೆಯೊಬ್ಬ ಮದ್ರಾಸು ಉಚ್ಚ ನ್ಯಾಯಾಲಯದಲ್ಲಿ ಒಂದು ಮೊಕದ್ದಮೆ ಹೂಡಿದ್ದ. ಅವಳು ಆ ವಯಸ್ಸಿಗೇ ಗರ್ಭಿಣಿಯಾಗಿದ್ದುದು ಆರೋಗ್ಯಕರವಲ್ಲವಾದ್ದರಿಂದ ಗರ್ಭಪಾತ ಮಾಡಿಸಲು ಅನುಮತಿ ಕೇಳಿದಾಗ ಬಾಲಕಿಯ ಪರವಾಗಿ ವಾದವೊಂದನ್ನು ಮಂಡಿಸಲಾಯಿತು: ''ಸಂವಿಧಾನವು ಮೂಲಭೂತ ಹಕ್ಕುಗಳನ್ನು ಮಾನ್ಯಮಾಡುವಾಗ ವಯಸ್ಸನ್ನು ಪರಿಗಣಿಸುವುದಿಲ್ಲ ಮತ್ತು ಮಗುವನ್ನು ಹೆರುವ ಸ್ವಾತಂತ್ರ್ಯವನ್ನು ಅವಳಿಂದ ಯಾರೂ ಕಿತ್ತುಕೊಳ್ಳುವಂತಿಲ್ಲ.'' ನ್ಯಾಯಪೀಠವು ಈ ವಾದವನ್ನು ಅಂಗೀಕರಿಸಿ ತೀರ್ಪು ನೀಡುವಾಗ ಎರಡು ಪ್ರಬುದ್ಧ ಸಂದೇಶಗಳನ್ನು ನೀಡಿದೆ : (ಅ) ಹೆಣ್ಣು ಚಿಕ್ಕವಳಿದ್ದಷ್ಟೂ ಹೆರಿಗೆ ಸುಲಭ; (ಆ) ತಾಯಿಯ ಗರ್ಭದಲ್ಲಿರುವ ಜೀವವನ್ನು ನಾಶಮಾಡಲು ಯಾವ ನೈತಿಕ ಅವಕಾಶವೂ ಇಲ್ಲ.

ಇದೆಲ್ಲಾ ಎತ್ತಿತ್ತೋರಿಸುವುದು ಒಂದಂಶವನ್ನು : ಮಹಿಳೆಯು ವ್ಯಕ್ತಿಯಾಗಿ ತನ್ನ ಸ್ವಾತಂತ್ರ್ಯವನ್ನು ಅನುಭವಿಸಬಹುದು; ಆದರೆ ಅದು ಸಂಪ್ರದಾಯದ ಚೌಕಟ್ಟಿನಲ್ಲೇ ಇರಬೇಕು. ತಾಯಿ ಎಂಬ ಕಲ್ಪನೆಯನ್ನು ವೈಭವೀಕರಿಸುತ್ತಾ ಹೆಣ್ಣಿಗೆ ಬಂಗಾರದ ಸಂಕೋಲೆ ತೊಡಿಸುವ ಪ್ರಕ್ರಿಯೆ ಇದು. ಬದಲಾವಣೆಯನ್ನು ಅಪೇಕ್ಷಿಸುವವರು ಅಪರಾಧಿಗಳೆಂಬ ಸುಪ್ತಪ್ರಜ್ಞೆ ನಮ್ಮಲ್ಲಿ ಬಹುವಾಗಿ ಮನೆಮಾಡಿಕೊಂಡಿದೆಯೆಂಬುದಕ್ಕೆ ಇದೊಂದು ನಿದರ್ಶನ. ವ್ಯಕ್ತಿಯ ಹಕ್ಕಿನ ಬಗ್ಗೆ ಉದಾತ್ತವಾಗಿ ವ್ಯಾಖ್ಯಾನ ನೀಡುವ ಜನರೆಲ್ಲಾ ಹೆಣ್ಣುಮಗುವಿನ ಜನನವಾಗುವ ಸಂಭವವಿದ್ದಾಗ ಗರ್ಭಪಾತ ಮಾಡಿಸುವ ಪ್ರವೃತ್ತಿಯನ್ನು ಮನಸಾರೆ ವಿರೋಧಿಸಿದವರಲ್ಲ. ಆಗ ತಾಯಿಯ ಹಕ್ಕು, ಅವಳ ಅಪೇಕ್ಷೆ, ಇತ್ಯಾದಿಗಳಿಗೆ ಸೊಪ್ಪು ಹಾಕಲು ಅವರು ಹಿಂಜರಿಯುವುದಿಲ್ಲ. ಈ ದ್ವಂದ್ವದಲ್ಲಿ ಹೆಣ್ಣಾಗಿ ಜನ್ಮತಾಳಲಿರುವ ಭ್ರೂಣದ ಹಕ್ಕು ಅವರಿಗೆ ಪ್ರಸ್ತುತವಾಗುವುದಿಲ್ಲ. ಆದರೂ ಕಾನೂನಿನ ಶ್ರೇಷ್ಠತೆಯನ್ನು ಸಾರಿ ಅದರಿಂದಲೇ ಎಲ್ಲ ನ್ಯಾಯವನ್ನೂ ದೊರಕಿಸಿಕೊಳ್ಳಬಹುದೆಂಬ ಮಾತು ಪ್ರಚಲಿತವಾಗಿದೆ. ಹೋರಾಟದ ಮೂಸೆಯಿಂದ ಮೂಡಿಬರದ ಯಾವ ಕಾನೂನು ಸಹ ಸಮರ್ಥವಿರಲಾರದೆಂಬ ಭಾವನೆ ಅವರಿಗೆ ಬಾರದಿರುವುದು ಅಚ್ಚರಿಯ ಸಂಗತಿ.

ಹೆಣ್ಣುಮಗುವಿನ ಜನ್ಮವನ್ನು ಹತ್ತಿಕ್ಕುವುದು ಹೆಣ್ಣಿಗೆ ಹೆಚ್ಚಿನ ಆದರ ಮತ್ತು ಮೌಲ್ಯಗಳನ್ನು ದೊರಕಿಸಿಕೊಡುವ ಒಂದು ಸಾಧನವೆಂಬ ಅಮಾನವೀಯ, ಕುಹಕ ತರ್ಕವನ್ನು ಮುಂದುಮಾಡುವ ವಿದ್ವಾಂಸರು, ಸಾಮಾಜಿಕ ಕಾರ್ಯಕರ್ತರು ನಮ್ಮಲ್ಲಿದ್ದಾರೆ. ಹೆಣ್ಣುಮಕ್ಕಳು ಕಡಿಮೆಯಾದರೆ ವರದಕ್ಷಿಣೆಯ ಪಿಡುಗು ಇಲ್ಲವಾಗುತ್ತದಂತೆ ! ಹೀಗೆ ಹೆಣ್ಣು ಭ್ರೂಣವನ್ನು ತೆಗೆಸುವವರು ಮಧ್ಯಮ ವರ್ಗದವರು ಮತ್ತು ಶ್ರೀಮಂತರೇ ಆದ್ದರಿಂದ ನಾಳೆ ಶ್ರೀಮಂತ ಗಂಡುಮಕ್ಕಳು ಬಡಕುಟುಂಬಗಳ ಹೆಣ್ಣುಗಳನ್ನು ಆಯ್ಕೆ ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ; ಆದ್ದರಿಂದ ಸಾಮಾಜಿಕ ಸಮಾನತೆ ಏರ್ಪಡುತ್ತದೆ. ವರದಕ್ಷಿಣೆಯ ಕಿರುಕುಳದಿಂದ ಮಹಿಳೆಯೊಬ್ಬಳು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕಿಂತ ಹೆಣ್ಣು ಭ್ರೂಣದ ನಾಶವು ಕಡಿಮೆ ಕ್ರೌರ್ಯವಲ್ಲವೆ ? - ಇಂತಹ ಬುದ್ಧಿವಂತಿಕೆಯ. ಆದರೆ ಅಂತಃಪ್ರಜ್ಞೆಯ ಅಭಾವದ, ದುಷ್ಟ ಭ್ರಷ್ಟ ವಾದಗಳ ಭಾರದಿಂದ ಮಹಿಳೆ ದುಸ್ತರವಾದ ಪರಿಸ್ಥಿತಿಗೆ ತಳ್ಳಲ್ಪಟ್ಟಿದ್ದಾಳೆ. ಹೆಣ್ಣುಮಕ್ಕಳು ಕಡಿಮೆಯಾದರೆ ಅವರ ಮೌಲ್ಯ ಹೆಚ್ಚುತ್ತದೋ, ಅಪಹರಣ ಹೆಚ್ಚುತ್ತದೋ ಎಂಬುದನ್ನು ಇಂದಿನ ನಮ್ಮ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿದವರಿಗೆ ಹೇಳುವ ಅಗತ್ಯವಿಲ್ಲ. ಮಹಿಳೆಯನ್ನು ಮಾರಾಟದ ವಸ್ತುವನ್ನಾಗಿಸಲು ನಮ್ಮ ಉದಾರೀಕರಣ, ಜಾಗತೀಕರಣಗಳ ಪ್ರಭೃತಿಗಳು ತುದಿಗಾಲಲ್ಲಿ ನಿಂತಿದ್ದಾರೆ. ಅವರಿಗೆ ರಾಷ್ಟ್ರದ ನವೀಕರಣ ಬೇಕು, ಬೆಂಗಳೂರನ್ನು ಸಿಂಗಪುರ ಮಾಡುವ ಆತುರ ಅವರಿಗೆ, ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಟೌನ್‌ಶಿಪ್‌ಗಳು ಬೇಕು. ಇಲ್ಲೆಲ್ಲಾ ಜೂಜು, ಕುಡಿತ, ಮಹಿಳೆಯ ದೇಹದ ಮಾರಾಟ ನಿಜವಾದ ಪರಿಣಾಮಗಳೆಂದು ಅವರಿಗೆ ತಿಳಿಯದಿಲ್ಲ. ಶೃಂಗಾರಪುರಗಳ ಅವ್ಯವಹಾರಗಳ ಕಪ್ಪು ಚರಿತ್ರೆ ನಮ್ಮ ನಡುವೆ ಮರುಕಳಿಸಬೇಕೆ, ಎಂಬುದು ಪ್ರಶ್ನೆ.

ಜೀವಜಾತಿಗಳಿಗೆ ಅಸಹಜವಾದ ಪ್ರಮೇಯಗಳನ್ನು ಕಲ್ಪಿಸುವುದರಲ್ಲಿ ನೈಪುಣ್ಯ ಪಡೆದಿರುವ ಮಾನವ ತನ್ನ ಜಾತಿಗೇ ಸೇರಿದ ಮಹಿಳೆಗೆ ಈವರೆಗೆ ಎಸಗಿರುವ ಅನ್ಯಾಯ, ದೌರ್ಜನ್ಯಗಳನ್ನು ಕೊನೆಮಾಡಲು ಈ ಶತಮಾನದ ಮೊದಲ ವರ್ಷದಲ್ಲಿ ಸಾಮುದಾಯಿಕ ಪ್ರಯತ್ನ ನಡೆಯಬೇಕು ಮತ್ತು ನಡೆಯಲು 'ಹೊಸತು' ತನ್ನ ಕಾಣಿಕೆ ನೀಡಲು ಸಿದ್ಧವಿದೆ. ○○

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

### ಅಹಿಂಸೆ

ಮಹಾವೀರ, ಮಹಾತ್ಮ ಗಾಂಧಿಯಂಥ ಅಮರ ಜೀವಿಗಳು ನಂಬಿದ್ದ ಅಹಿಂಸೆ - ಶಾಕಾಹಾರ ಪದ್ಧತಿಯ ಆಚರಣೆ ಎಲ್ಲರಿಂದಲೂ ಸಾಧ್ಯವಿಲ್ಲ. ಈ ಆದರ್ಶ ಪುರುಷರ ಮೌಲ್ಯಭಾವನೆಗಳನ್ನು ಗೌರವಿಸುವ ಸಲುವಾಗಿ ಅವರ ಜನ್ಮದಿನದಂದು, ಪುಣ್ಯತಿಥಿಯಂದು ಪ್ರಾಣಿವಧೆ ನಿಷೇಧಿಸುವುದು ಕ್ರಮವಾಗಿ ತರ್ಕಬದ್ಧವಾಗಿಯೇ ಇದೆ.

ಇಂಥಾ ಮಹಾನ್ ಪುರುಷರಿಗೆ ಗೌರವ ಸಲ್ಲಿಸುವ ಸಲುವಾಗಿ ಮಾಡುವ ಈ ಕಾರ್ಯಗಳು ಸ್ತುತ್ಯರ್ಹ. ಮಾಂಸಾಹಾರ ಮಾನವನಿಗೆ ನೈಸರ್ಗಿಕವಲ್ಲ. ಹುಲಿಗೆ, ತೋಳಕ್ಕೆ ಅದು ನೈಸರ್ಗಿಕ ಆಹಾರ. ಲೇಖಕರು ಇದನ್ನು ಸರಿಯಾಗಿ ಪ್ರಸ್ತಾಪಿಸಿಲ್ಲ.

*ಬೆಂಗಳೂರು* **ಎ. ಶ್ರೀನಿವಾಸ ಮೂರ್ತಿ**

'ಅಹಿಂಸೆ' ಪ್ರತಿಪಾದಿಸುವಾಗ ಲೇಖಕರು ಹಸು ನಮಗೆಂದು ಹಾಲು ಉತ್ಪಾದಿಸುವುದಿಲ್ಲ, ಆದರೂ ನಾವು ಅದರ ಕರುವಿಗೆ ಬಿಡದೆ(?) ಹಾಲು ಕಿತ್ತುಕೊಳ್ಳುತ್ತೇವೆ. ಅದು ಹಿಂಸೆಯಲ್ಲವೆ, ಎನ್ನುತ್ತಾರೆ. ಸತ್ಯ. ಅದೇ ಕರುವಿಗೆ ಗಾಯವಾದಾಗ ಅಕ್ಕರೆ ತೋರುವುದು, ಭಾವನಾತ್ಮಕವಾಗಿ ನಮ್ಮಲ್ಲಿ ಬೆಸೆದು ಹೋಗಿರುವ ಪುಣ್ಯಕೋಟಿಯ ಕತೆಯ ಪ್ರಭಾವ, ಇವೆಲ್ಲಾ ಕೇವಲ 'ಹಾಲು ಹಿಂಡಿಕೊಳ್ಳುವುದಕ್ಕೆ' ಎಂದರೆ ಒಂದು ರೀತಿ ಮುಜುಗರವೆನಿಸುತ್ತದೆ. ಹಿಂಸೆ ಎಂದು ತಕ್ಕಮಟ್ಟಿಗೆ ಸಾಬೀತಾಗಿರುವುದನ್ನು ಒಪ್ಪಿ, ಹಿಂಸೆ ಆಗಲೇಬೇಕೆಂಬ ಆವಶ್ಯಕತೆ ಇಲ್ಲದ್ದನ್ನೂ ಇದು ಹಿಂಸೆಯೇ ಎಂದು ತೋರಿಸುವಾಗ ಲೇಖಕರ ಪ್ರಬುದ್ಧ ಪ್ರಯತ್ನ ಸಾಧನೆ ಗಾಗಿಯೇ ಏನೋ ಎಂಬಂತಾಗುವುದಿಲ್ಲವೆ?

ಪಾವಗಡ **ಕೆ. ಪುರುಷೋತ್ತಮ**

### ಅಮೆರಿಕಾ

ಎಲ್ಲರನೆದುರಿಸಲು ಹಿತ್ತಲಿನಲ್ಲೇನೋ ಕ್ಷಿಪಣಿ ಕಾರ ಸ್ಥಾನದ ಸುಗ್ಗಿ
ಮಿಕ್ಕೆಲ್ಲರಿಗೆ ಬೋಧನೆಗೆ ಮಾತ್ರ-ಸಿಟಿಬಿಟಿಗೆ ನೀವು ತಲೆ ಬಗ್ಗಿ!
ಪುಂಡಾಟ ಆಡಿದರೂ ಎದುರಲೇ ಇರುವ ತರಲೆ ಪಾಕಿಸ್ತಾನವೇ ಲೇಸು
ಗುಂಡಾಗರ್ದಿ ಅಮೆರಿಕಾ ಕೈಯಲ್ಲಿ ವಿಶ್ವಸಂಸ್ಥೆ ಕೂಡಾ ಪುಕ್ಕಲು ಕೂಸು.

ಪಾವಗಡ **ಕೆ. ಪುರುಷೋತ್ತಮ**

### ಬಾಲದುಡಿಮೆಗಾರ

ಇಡೀ ಸಂಚಿಕೆಯಲ್ಲಿ ಗಮನಸೆಳೆದದ್ದು-ದಾದಾಪೀರ್‌ನ ಕಥೆ. ರಾಜ್ಯ, ಕೇಂದ್ರಗಳು ಎಷ್ಟೇ ಬೊಗಳೆಬಿಟ್ಟರೂ ಅದು ಹಾಗೇ ಉಳಿದಿರುವ ಕಥೆ. ಪುಟ್ಟ ಕೈಯ ಸಂದರ್ಶನದಿಂದ ಸರಕಾರದ ಕಣ್ಣು ಇತ್ತ ಹಾಯಲಿ ಎಂದು ನಂಬೋಣ.

ಆನೆಗುಂಡಿ **ಎ. ಆರ್. ಸಾಲಿಯಾನ್**

### ಕಥೆ

ಚಿತ್ರಶೇಖರ ಅವರ ತಿಂಗಳ ಕಥೆ 'ಅಕ್ಕವ್ವ', ಡಾ॥ ನರಸಿಂಹ ರೆಡ್ಡಿಯವರ ಅಮರ್ತ್ಯ ಸೇನರ ಲೇಖನ ಚೆನ್ನಾಗಿವೆ. ಅಮರ್ತ್ಯ ಸೇನರ ಸಾಹಿತ್ಯ ಕುರಿತು ತಿಳಿದುಕೊಂಡ ನರಸಿಂಹ ರೆಡ್ಡಿಯವರು ಸ್ವಲ್ಪದರಲ್ಲಿ ಹೇಳಲು ಪಟ್ಟ ಶ್ರಮ ಸಾರ್ಥಕವಾಗಿದೆ. ಕವಿ ಕಣವಿ ಕುರಿತ ಸಂದರ್ಶನ ಆಪ್ಯಾಯಮಾನ.

ಜಮಖಂಡಿ **ಅರ್ಜುನ ಕೋರಟಕರ**

### ಪ್ರಳಯ ಎಂದು ?

ನನ್ನಂತೆಯೇ ಪ್ರಳಯ ಸಂಭವಿಸಬಹುದೆಂದು ಭಾವಿಸಿದವರಿಗೆ ಈ ಲೇಖನ ಪುನರ್ಜೀವನ ನೀಡಿದೆ. ಭವಿಷ್ಯದೆಡೆಗೆ ಗಮನ ಹರಿಸುವಂತೆ ಮಾಡಿದೆ.

ಸಾಸ್ವೇಹಳ್ಳಿ **ಪ್ರವೀಣ್‌ಕುಮಾರ್**

### ಬಲಪಂಥೀಯರು

ಉಗ್ರಬಲಪಂಥೀಯರು ದೇಶದ ಒಗ್ಗಟ್ಟಿಗೆ, ಜನಾಂಗೀಯ, ಧರ್ಮೀಯ, ಜಾತೀಯ ಮತ್ತು ವರ್ಗೀಯ ಸಾಮರಸ್ಯಕ್ಕೆ , ಪ್ರಜಾತಾಂತ್ರಿಕ ಜೀವನ ಪದ್ಧತಿಗೆ ಅಪಾಯಕಾರಿ,ಆತಂಕಕಾರಿ. ಈ ಸಮೂಹ ಎಲ್ಲಿದ್ದರೂ




ಉಪದ್ರವಕಾರಿ. ಅಧಿಕಾರದ ಗದ್ದುಗೆಯ ಮೇಲಿದ್ದರಂತೂ ಅದು ನಿರ್ಮಿಸುವ ವಾಯುಮಂಡಲ, ಅನುಸರಿಸುವ ರೀತಿ-ನೀತಿಯ ಉಪಯೋಗ ಪಡೆದು ಅವರ ಪರಿವಾರ ದೇವತೆಗಳು ತಮ್ಮ ಕಾರ್ಯ ಸಾಧಿಸಲು, ಅರ್ಥಾತ್ ತಮ್ಮ ಗುಪ್ತ ಸೂಚಿಯ ಕಾರ್ಯಸಾಧಿಸಲು ತೊಡಗಿಬಿಡುತ್ತಾರೆ. ಆ ಸಮೂಹ ಅಧಿಕಾರಾರೂಢರಾಗಿರುವುದು ಇವರಿಗೊಂದು ರಕ್ಷಾಕವಚ, ಇವರ ಕೃತ್ಯಗಳ ಮೇಲೆ ಎಳೆದ ಧೂಮ ತೆರೆ. ಈ ಸಮೂಹದ ಅಧಿಕಾರಾರೋಹಣದ ನೇರ ಅರ್ಥ ಹಿಂಸಾ ದೇವಿಯ ಆರಾಧನೆಗೆ, ಬೌದ್ಧಿಕ ಅಸಭ್ಯತೆಗೆ, ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ಟೊಳ್ಳಾಗಿಸಲಿಕ್ಕೆ, ಧಾರ್ಮಿಕ ರಾಷ್ಟ್ರವಾದದೆಡೆ ಮಾರ್ಗ ಪ್ರಶಸ್ತಗೊಳಿಸಲಿಕ್ಕೆ ತೆರೆದ ಆಹ್ವಾನ. ಇಷ್ಟೆಲ್ಲ ಹೇಳಿದ ಮೇಲೆ, ಗಾಂಧೀ ವಿಚಾರದ ಅಂತ್ಯಕ್ಕೂ ಅದು ನಾಂದಿ ಎಂದು ಹೇಳಬೇಕಾಗಿಲ್ಲ. ಹೀಗೆ ಇದಂತೂ ದೇಶಕ್ಕೆ ದುರಂತಕಾರಿ ಬೆಳವಣಿಗೆಯೇ ಸರಿ. ಜನತೆ ಇದನ್ನು ಅರಿಯಬೇಕು.

ಊರುಕೆರೆ **ಟಿ. ಕೆ. ಗೋವಿಂದರಾಜು**

### ಕಣವಿ

ಚೆಂಬೆಳಕಿನ ಕವಿಯೆಂದೇ ಹೆಸರಾದ ಚೆನ್ನವೀರ ಕಣವಿ ಕನ್ನಡ ಕಾವ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ಪ್ರೀತಿ, ಸ್ನೇಹ ಇವರ ಬದುಕಿನ ಹಾಗೂ ಕಾವ್ಯದ ಜೀವಧ್ವನಿ...

ಅಂಡಗಿ, ಚೆಲುವಾಡಗಿ **ಎನ್. ಹನುಮಂತಪ್ಪ**

ಮಾನ್ಯ ಚೆನ್ನವೀರ ಕಣವಿಯವರ ಸಂದರ್ಶನದಲ್ಲಿ ''ಕೋಮುವಾದವೆನ್ನುವುದು ರಾಷ್ಟ್ರದ್ರೋಹ'' ಎಂಬ ಅವರ ಮಾತು ಖಂಡಿತವಾಗಿಯೂ ಒಪ್ಪುವಂತಹದ್ದು. ಈ ವಿಷಯದಲ್ಲಿ ಕಣವಿಯವರನ್ನು ನಮ್ಮ ಹೆಮ್ಮೆಯ ಕವಿ ಕುವೆಂಪುರವರಿಗೆ ಹೋಲಿಸಬಹುದು. ಕಣವಿಯವರಂತಹ ಅರ್ಹ ವ್ಯಕ್ತಿಗಳಿಗೆ ಇಂಥ ಪ್ರಶಸ್ತಿ ಬಂದರೇನೇ ಅದರ ಗೌರವ ಹೆಚ್ಚುವುದು.

ಮಂಗಳೂರು **ಗಣೇಶಕುಮಾರ್**

### ಅಮರ್ತ್ಯ ಸೇನ್

ಕ್ಷೇಮಾಭ್ಯುದಯದ ಹರಿಕಾರ ಸೇನರು ಅರ್ಥಶಾಸ್ತ್ರಕ್ಕಾಗಿ ನೊಬೆಲ್ ಪ್ರಶಸ್ತಿ ಗಳಿಸಿ ಭಾರತಕ್ಕೆ ಕೀರ್ತಿ ತಂದುಕೊಟ್ಟಿದ್ದಾರೆ. ಅರ್ಥಶಾಸ್ತ್ರವನ್ನು ಮಾನವೀಯಗೊಳಿಸಿದ ಅಮರ್ತ್ಯ ಸೇನರ ಬಗ್ಗೆ ಡಾ॥ ಡಿ. ನರಸಿಂಹ ರೆಡ್ಡಿ ಅವರ ಲೇಖನ ಚೆನ್ನಾಗಿದೆ. ಸಂಪಾದಕೀಯದಲ್ಲಿ ಬಂದ ಮೂರು ಲೇಖನಗಳು ಸಹ ಸಮಯೋಚಿತವಾಗಿದ್ದವು.

ಮೈಸೂರು-೨೩ **ಕೆ. ವಿ. ಶಿವಕುಮಾರ್**

### ಸಂಪಾದಕೀಯ

ಫೆಬ್ರವರಿ ತಿಂಗಳ ಸಂಪಾದಕೀಯ ಉತ್ತಮವಾಗಿತ್ತು. ವಿಮಾನಾಪಹರಣ ಸಮಯದಲ್ಲಿ ಈ ಘನ ಸರ್ಕಾರ ನಡೆದುಕೊಂಡ ರೀತಿ ನಿಜಕ್ಕೂ ನಾಚಿಕೆಪಡುವಂತದ್ದು.

**ನವಮಂಗಳೂರು-೧೧** **ಆಶಾ**

### ಹೊಸತು

ಮೊದಲ ಸಂಚಿಕೆಯಿಂದಲೇ ಹೊಸತು ಓದುತ್ತಿರುವೆನು. ಚೆನ್ನಾಗಿ ಬರುತ್ತಿಲ್ಲವೆಂದು ಸುಳ್ಳು ಹೇಳಲಾರೆ. ಸಂಪಾದಕೀಯ ತುಂಬಾ ಸೊಗಸಾಗಿ ಮೂಡಿಬಂದಿದೆ. ಗಣಪನ ಕೈಗೆ ಎ. ಕೆ. ೪೭, ಕಣ್ಣಿದ್ದೂ ಕುರುಡರಾದವರ ಕಣ್ಣು ತೆರೆಸುವಂತಿತ್ತು. ತಿಳಿವು - ತಿಳಿಯದವರಿಗೆ ಶಬ್ದಕೋಶವಾಗಿತ್ತು...

ಮುಂಬೈ **ಅಹ್ಮದ್ ಕುದ್ರಡ್ಕ**

'ಹೊಸತು' ಓದುಗರಲ್ಲಿ ನಾನೊಬ್ಬ. ಫೆಬ್ರವರಿ ತಿಂಗಳ ಸಂಚಿಕೆಯಲ್ಲಿ ಹಲವಾರು ಲೇಖನಗಳು ಸೊಗಸಾಗಿವೆ, ವಿಚಾರಪೂರಿತವಾಗಿವೆ. 'ಅಮರ್ತ್ಯ ಸೇನ್', 'ಬರ್ಟ್‌ರೆಂಡ್ ರಸೆಲ್', 'ಪ್ರಾಥಮಿಕ ಶಿಕ್ಷಣ : ಒಂದು ಚಿಂತನೆ' ಮುಂತಾದ ಲೇಖನಗಳಲ್ಲಿ ಹೊಸತನ್ನು ತುಂಬಿವೆ : ಹೊಸತು ಯಾವಾಗಲೂ ಹೊಸತಾಗಿರಲೆಂದು ಹಾರೈಸುವೆ.

ನಾಗರಹಾಳು **ನಾ. ಮ. ಬಸವರಾಜಯ್ಯ**

### ಅಪರೂಪದ ಸಾಹಿತಿ

ನಮ್ಮ ಊರಿನ ಜನರ ಸುಖ ದುಃಖದೊಂದಿಗೆ ಬೆಳೆದ ಅಪರೂಪದ ಸಾಹಿತಿ ಬೆಳಗಲಿಯವರು. ಸಾಹಿತ್ಯದ ವಾತಾವರಣವೇ ಇರದಿದ್ದರೂ ಅವರೊಬ್ಬ ಸಾಹಿತಿಯಾಗಿ ರೂಪುಗೊಂಡದ್ದು ಸಾಮಾನ್ಯವೇನಲ್ಲ.

ರಬಕವಿ **ಚಿದಾನಂದ ಮತ್ತು ಪುಷ್ಪಾ ಪಾಗಾದ**

*ಪತ್ರಗಳ ವಿಭಾಗಕ್ಕೆ ಬರೆಯುವವರು ಸಂಕ್ಷಿಪ್ತವಾಗಿ ೬೦ ಪದಗಳಿಗೆ ಮೀರದಂತೆ , ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಕುರಿತು ಮಾತ್ರವೇ ಬರೆಯಬೇಕಾಗಿ ವಿನಂತಿ.*

**– ಸಂಪಾದಕ**



## ಮುಂಬಯಿಯಲ್ಲಿ ತುಂಬಿದ್ದಾರೆ ಮಾಂತ್ರಿಕರು

# ಬಾಬಾ ಬಂಗಾಲಿ, ಮಿಯಾ ಬಂಗಾಲಿ, ಪಾಶಾ ಬಂಗಾಲಿ!

**ಬೂದಿ ಬಾಬಾ ಅಲ್ಲದೆ ಬೇರೆ ಬಾಬಾಗಳೂ ಇರುವ ನಮ್ಮ ಭಾರತದಲ್ಲಿ ಅವರ ಹಿಂದೆ ಬೀಳುವ ಹಿಂಡಿಗೇನೂ ಕೊರತೆಯಿಲ್ಲ. ಆಮೇಲೆ ಅವರ ಅನುಭವ ಏನಿರುತ್ತದೋ ಅದು ಬಹುಕಾಲ ಗೋಪ್ಯವಾಗಿ ಉಳಿಯುತ್ತದೆ. ಮುಂಬೈಗೆ ಬಂದ ಪಿಡುಗು ಬೆಂಗಳೂರು ಮುಂತಾದ ನಗರಗಳಿಗೆ ಬರುವ ಮೊದಲೇ ಎಚ್ಚರ ಅಗತ್ಯ.**

"ಭೂತ-ಪ್ರೇತ ಬಿಡಿಸುವ ಹೆಸರಲ್ಲಿ ಅಪ್ರಾಪ್ತ ವಯಸ್ಸಿನ ಹುಡುಗಿಯ ಜೊತೆ ಬಲಾತ್ಕಾರ ನಡೆಸಿದ ಆರೋಪ ದಲ್ಲಿ ಮುಂಬಯಿಯ ಮಾಲ್ವಾಣಿಯಲ್ಲಿ ಸ್ವಘೋಷಿತ ಮಾಂತ್ರಿಕ ಮೊಹ್ಮದ್ ಹಫೀಜ್ ಫುರ್‌ಖಾನ್ ಎಂಬಾತನನ್ನು ಪೊಲೀಸರು ಬಂಧಿಸಿ ಮೆಟ್ರೋಪೊಲಿಟನ್ ಮ್ಯಾಜಿಸ್ಟ್ರೇಟ್‌ರ ಮುಂದೆ ಹಾಜರುಪಡಿಸಿದಾಗ ಆತನನ್ನು ಪೊಲೀಸ್ ಕಸ್ಟಡಿಯಲ್ಲಿರಿಸಲು ಆದೇಶಿಸಲಾಯಿತು".

ಇದು ಮುಂಬಯಿಯ ದೈನಿಕಗಳಲ್ಲಿ ಪ್ರತಿನಿತ್ಯವೂ ಬರುವ ಸುದ್ದಿಗಳಲ್ಲೊಂದು. ಮುಂಬಯಿಯ ಯಾವುದೇ ಹಿಂದಿ-ಮರಾಠಿ ದೈನಿಕಗಳಲ್ಲಿ ಅಥವಾ ಲೋಕಲ್ ರೈಲು ಗಾಡಿಗಳಲ್ಲಿ ಇಂತಹ ಮಾಂತ್ರಿಕರ ಜಾಹಿರಾತುಗಳು ಇದ್ದೇ ಇರುತ್ತವೆ. ಇವರೆಲ್ಲ 'ಬಂಗಾಲಿ ಬಾಬಾ' ಎಂದು ಬೋರ್ಡ್ ಹಾಕಿಸಿಕೊಂಡಿದ್ದು, ಉತ್ತರ ಪ್ರದೇಶದವರೇ ಜಾಸ್ತಿ ಇರುತ್ತಾರೆ.

ಇತ್ತೀಚೆಗೆ ಇನ್ನೊಂದು ಘಟನೆ ನಡೆಯಿತು. ತನ್ನ ಪತಿಯ ಕುಡಿತದ ಚಟವನ್ನು ಹೋಗಲಾಡಿಸಲು ಒಬ್ಬಾಕೆ ಈ 'ಬಾಬಾ ಬಂಗಾಳಿ'ಯ ಮೊರೆಹೊಕ್ಕಳು. ಇಂತವರ ರೂಮು ಅಗರ್‌ಬತ್ತಿ-ಶೋಭಾನಗಳಿಂದ ಸದಾ ಪರಿಮಳಯುಕ್ತವಾಗಿರುತ್ತದೆ. ಪೂಜಾ ಸಾಮಾನುಗಳ ಸೂಚಿ ನೀಡಿ ಅವನ್ನು ಕೂಡಲೆ ತರಬೇಕೆಂದು ಹೇಳಿ ಗಂಡನನ್ನು ಹೊರ ಕಳುಹಿಸಿದ. ನಂತರ ಈ ಮಹಿಳೆಯ ಮೇಲೆ ಅತ್ಯಾಚಾರ ನಡೆಸಿದ. ಬೋರಿವಲಿ ಪೊಲೀಸ್ ಸ್ಟೇಷನ್‌ನ ಪೊಲೀಸರು ಈ ಬಂಗಾಳಿ ಬಾಬಾನನ್ನು ಬಂಧಿಸಿದರು. ಇಂತಹ ಘಟನೆಗಳು ಅದೆಷ್ಟೋ ನಡೆಯುತ್ತವೆ. ಆದರೆ ಸಾಮಾಜಿಕ ಪ್ರತಿಷ್ಠೆಗೆ ಹೆದರಿ ಹೆಚ್ಚಿನವರು ಪೊಲೀಸರಲ್ಲಿ ದೂರು ನೀಡುತ್ತಿಲ್ಲ. ಈ ದಿನಗಳಲ್ಲಿ 'ಕಾಲಾ ಜಾದೂ' ಎಂಬ ಹೊಸ ರೂಪದ ಬಾಬಾಗಳು ಮುಂಬಯಿಯ ಪ್ರತೀ ಗಲ್ಲಿಗಳಲ್ಲಿ ಮೂಡಿಬರುತ್ತಿದ್ದಾರೆ.

ಒಬ್ಬ ಸಾಮಾನ್ಯ ವ್ಯಕ್ತಿಗೂ ಈ ಬಾಬಾಗಳ ಬುಡುಬುಡಿಕೆಯೆಲ್ಲಾ ಸುಳ್ಳು ಎಂದು ಆ ಕ್ಷಣಕ್ಕೆ ತಿಳಿಯಬಹುದು. ಯಾಕೆಂದರೆ ಎರಡು ಮೂರು ದಿನಗಳಲ್ಲಿ ಸಂಕಟಗಳು ಪರಿಹಾರವಾಗುವುದೆಂದರೆ ಇದಕ್ಕಿಂತ ದೊಡ್ಡ 'ಢೋಂಗಿ' ಇನ್ಯಾವುದಿದೆ ? ಹಾಡು ಹಗಲೇ ಮುಗ್ಧ ಜನರಲ್ಲಿ ಅಂಧ ವಿಶ್ವಾಸ ಹುಟ್ಟಿಸಿ ಅವರ ಲೂಟಿಗೈಯುತ್ತಾರೆ. ಪ್ರತೀದಿನ ಮುಂಬಯಿಯಲ್ಲಿ ಈ ದಂಧೆ ಜೋರಾಗಿ ನಡೆಯುತ್ತಿದೆ.

ಮುಂಬಯಿಯಂತಹ ಮಹಾನಗರದಲ್ಲಿ ಈ 'ಬಾಬಾ ಬಂಗಾಲಿ'ಗಳು ಏನು ಮಾಡುತ್ತಾರೆ? ಕೆಲವರು "ಬಾಬಾ ಬಂಗಾಲಿ" ಎಂದರೆ ಇನ್ನು ಕೆಲವರು 'ಮಿಯಾ ಬಂಗಾಲಿ' ಎನ್ನುತ್ತಾರೆ. ಲೋಕಲ್ ರೈಲಿನ ಮೊದಲ ದರ್ಜೆ-ಎರಡನೇ ದರ್ಜೆ-ಮಹಿಳಾ ಬೋಗಿ ಎಲ್ಲಾ ಕಡೆ ಇವರ ಜಾಹಿರಾತು ಇರುತ್ತವೆ. ಇವು ಯಾವುದೇ ತೆರಿಗೆ ಕಟ್ಟಿ ಅಂಟಿಸಿದವುಗಳಲ್ಲ, ರಾತ್ರೋರಾತ್ರಿ ಇವುಗಳನ್ನು ಅಂಟಿಸಲಾಗುತ್ತದೆ. (ಈ ಅನಧಿಕೃತ ಜಾಹಿರಾತುಗಳ ಮೊತ್ತವನ್ನು ಗಮನಿಸಿದರೆ ರೈಲ್ವೆಗೆ ವರ್ಷಕ್ಕೆ ಕೋಟಿಗಟ್ಟಲೆ ರೂ. ನಷ್ಟವಾಗುತ್ತಿದೆ.)

ಈ ಬಾಬಾ ಬಂಗಾಲಿ, ಮಿಯಾ ಬಂಗಾಲಿ ಅಲ್ಲದೆ ಕೆಲವು ಕಡೆ 'ಪಾಶಾ ಬಂಗಾಲಿ' ಎನ್ನುವವರೂ ಇದ್ದಾರೆ. ಯಾವುದಾದರೂ ರೈಲ್ವೆ ಸ್ಟೇಷನ್ ಅಥವಾ ಹೋಟೆಲ್‌ನಲ್ಲಿ ಇವರ 'ಅಡ್ಡಾ' ಇರುತ್ತದೆ. ಈ ಬಾಬಾಗಳ ಜಾಹಿರಾತಿನಲ್ಲಿಯೂ ನೌಕರಿ, ಪ್ರೇಮ, ಸಂತಾನ, ಪರಿವಾರದ ಕಲಹ, ರೋಗ.... ಮೊದಲಾದ ಯಾವುದೇ ಸಮಸ್ಯೆಗಳೂ ಇಲ್ಲಿ ಪರಿಹಾರವಾಗುವುದು ಎನ್ನಲಾಗುತ್ತದೆ. ಮುಂಬಯಿಯಲ್ಲಿ ನಾನು ಪತ್ರಕರ್ತನಾಗಿದ್ದ ಸಮಯ ನನ್ನ ಡೆಸ್ಕ್‌ಗೂ ಕೆಲವೊಮ್ಮೆ ಈ 'ಬಾಬಾ ಬಂಗಾಲಿ'ಗಳ ಹಿಂದಿ ಜಾಹಿರಾತನ್ನು ಕನ್ನಡಕ್ಕೆ ಮಾಡಿಕೊಡುವ ಅವಕಾಶಗಳು ಬರುತ್ತಿತ್ತು. ನಾವೆಲ್ಲ ಹಾಸ್ಯವಾಗಿಯೇ ಈ ಬಗ್ಗೆ ಮಾತನಾಡಿಕೊಳ್ಳುತ್ತಿದ್ದುದಿದೆ. ಕನ್ನಡ ಪತ್ರಿಕೆಗಳ ಸ್ಥಿತಿ ಮುಂಬಯಿಯಲ್ಲಿ ಶೋಚನೀಯವಾಗಿರುವಾಗ ದಿನಕ್ಕೆ ೨೫ ರೂ. ಸಿಗುವ ಇಂತಹ ಜಾಹಿರಾತುಗಳೂ ಇಲ್ಲಿ ಅನಿವಾರ್ಯವಾಗಿ ಮುದ್ರಿಸಿಕೊಳ್ಳುವುದಿದೆ. (ಈಗಲೂ ಇದು ಮುಂದುವರಿದಿದೆ.)

ಈಗ ನೋಡೋಣ: ಯಾರಿಗೊ ನೌಕರಿ ಸಿಕ್ಕಿಲ್ಲ ಎಂದು ತಿಳಿಯೋಣ, ಅಥವಾ ತೀವ್ರ ರೋಗವಿದೆ ಎನ್ನೋಣ, ಅಥವಾ ಹುಡುಗಿ ಈತನನ್ನು ಪ್ರೀತಿಸುತ್ತಿಲ್ಲ. ಈ ಬಾಬಾ ಮಾಡುವುದಾದರೂ ಏನು? ಸುಮ್ಮನೆ ಮಂತ್ರ-ತಂತ್ರದ ಮೂಲಕ ದೊಡ್ಡ ಮೊತ್ತ ಲೂಟಿಗೈಯುತ್ತಾನೆ, ಅಷ್ಟೆ. ಪೊಲೀಸರೂ ಈ ಬಗ್ಗೆ ಕ್ರಮ ಕೈಗೊಳ್ಳಲು ವಿಫಲರಾಗಿರುತ್ತಾರೆ. ಯಾಕೆಂದರೆ ಧರ್ಮದ ಹೆಸರಲ್ಲಿ ಕಾನೂನು ಮೂಲಕ ಸಿಕ್ಕಿದ ರಿಯಾಯಿತಿಯ ಲಾಭವನ್ನು ಈ ಬಾಬಾಗಳು ಪಡೆಯುತ್ತಿದ್ದಾರೆ.

### ಪೊಲೀಸರು ಯಾಕೆ ಭಯಪಡುತ್ತಾರೆ?

ಕೆಲವು ಸ್ಥಳೀಯ ಜನರ ಪ್ರಕಾರ ಮುಗ್ಧ ಜನರನ್ನು ಲೂಟಿಗೈಯುತ್ತಿರುವ ಈ 'ಬಾಬಾ ಬಂಗಾಲಿ'ಗಳು ಸ್ಥಳೀಯ ಪೊಲೀಸರ ಜೊತೆ ಒಪ್ಪಂದ ಮಾಡಿಕೊಂಡಿರುತ್ತಾರೆ. ಅಲ್ಲದೆ ಇಂದು ಶರಾಬು, ಮಟ್ಕಾ, ವೇಶ್ಯಾವೃತ್ತಿ ದಂಧೆಯಲ್ಲಿರುವವರಂತೆ ಈ 'ಬಾಬಾ'ಗಳು ಕೂಡಾ ಕೆಲವೆಡೆ ಪೊಲೀಸರಿಗೆ ಹಫ್ತಾ ನೀಡುತ್ತಿದ್ದಾರೆಂದೂ ನಂಬಲಾಗುತ್ತಿದೆ. ಈ ಕಾರಣ ಇಂತಹ ಬಾಬಾಗಳಿಗೆ ಪೊಲೀಸರ ಸಂರಕ್ಷಣೆಯೂ ದೊರಕುತ್ತದೆ. ಹಾಗೂ ಯಾರಾದರೂ ಸಣ್ಣ ಪುಟ್ಟ ಕೇಸು ಹಾಕಿದರೂ ಅದನ್ನು ಕೊಡು-ಕೊಳ್ಳುವಿಕೆಯ ಮೂಲಕ ಮುಚ್ಚಿಹಾಕಲಾಗುತ್ತದೆ.

ಇತ್ತೀಚೆಗಿನ ಈ ಬಾಬಾ ಕುತಂತ್ರಿಗಳ ಇನ್ನೊಂದು ಘಟನೆಯನ್ನು ನೋಡಬಹುದು. ಗಿರೀಶ್‌ಭಾಯಿ ಜೋಶಿ ಹೆಸರಿನ ಮಾಂತ್ರಿಕ ಬಾಬಾನು ವ್ಯಾಪಾರಿ ತಲಕ್‌ಚಂದ್ ದೇವಿಯಾಗೆ ೧೧ ಲಕ್ಷ ರೂ. ವಂಚನೆ ಮಾಡಿದ. ಅನಂತರ ವ್ಯಾಪಾರಿ ಎಚ್ಚೆತ್ತುಕೊಂಡು ಪೊಲೀಸರಿಗೆ ದೂರು ನೀಡಿದ. ಬೈಕಲಾ ಪೊಲೀಸರು ಗುಜರಾತ್‌ಗೆ ತೆರಳಿ ಈ ಪರಾರಿ ಬಾಬಾನನ್ನು ಬಂಧಿಸಿದರು.

ಮುಖ್ಯವಾಗಿ ರೈಲ್ವೆ ಮತ್ತು ಪತ್ರಿಕೆಗಳಲ್ಲಿ ಈ ರೀತಿಯ ಬಾಬಾಗಳ ಜಾಹಿರಾತು ಪ್ರಕಟಿಸುವುದಕ್ಕೆ ತಡೆ ಹಾಕಬೇಕಾಗಿದೆ. ನಿರಾಶೆ, ದುಃಖಿ ಜನರು ಬಾಬಾಗಳಿಗೆ ಶರಣುಹೋಗುವ ಈ ಪರಂಪರೆ ನಿಲ್ಲಬೇಕಾದರೆ ಪೊಲೀಸರು ಜಾಗರೂಕರಾಗಬೇಕು. ಪೊಲೀಸರು ಹೇಳುತ್ತಾರೆ: "ನಮಗೆ ದೂರು ಬರುವ ತನಕ ಏನೂ ಮಾಡುವಂತಿಲ್ಲ." ಆದರೆ ಎದುರೆದುರೇ ಬಹಿರಂಗವಾಗಿ ಇಂತಹ ಘಟನೆಗಳು ನಡೆಯುತ್ತಿರುವಾಗ ಪೊಲೀಸರು ದೂರಿಗಾಗಿ ಕಾಯಬೇಕೇ?

ಇದೀಗ ಕೆಲವು ಸಂಘಟನೆಗಳು, ವಿಚಾರವಾದಿಗಳು, ಈ 'ಬಾಬಾ ಬಂಗಾಲಿ'ಗಳ ಢೋಂಗಿಯ ಕುರಿತು ಜನರಿಗೆ ಎಚ್ಚರಿಸಲು ತಯಾರಿ ನಡೆಸಿದ್ದಾರೆ.

ಶ್ರೀನಿವಾಸ ಜೋಕಟ್ಟೆ
ಜೋಕಟ್ಟೆ ಪೋಸ್ಟ್, ವಯಾ ಬಜಪೆ, ಮಂಗಳೂರು ತಾ||, ದಕ್ಷಿಣ ಕನ್ನಡ - ೫೭೪ ೧೪೩

# ಮನೆ ಕೆಲಸಕ್ಕೆ ಕೂಲಿ ಇಲ್ಲವೇ?

**ಡಾ|| ಎನ್. ಗಾಯತ್ರಿ**

*ಓ ಎಂಥ ಬಿಡುಗಡೆ ! ಅಮೋಘವಾದ ಬಿಡುಗಡೆ*
*ಮುಕ್ತಳಾಗಿರುವೆ ಈಗ ಮೂರು ಹಾಳು ಜಂಜಾಟಗಳಿಂದ :*
*ಬೀಸುವ ಕಲ್ಲಿನಿಂದ, ಕುಟ್ಟುವ ಒನಕೆಯಿಂದ,*
*ಗೂನು ಬೆನ್ನಿನ ನನ್ನ ಗಂಡನಿಂದ.*

ಬೌದ್ಧ ಧರ್ಮ ಗ್ರಂಥವಾದ 'ಥೇರೀಗಾಥಾ' ದಲ್ಲಿ ಕೋಶಲ ರಾಜ್ಯದ ಬಡ ಬ್ರಾಹ್ಮಣನ ಮಗಳು ಮುತ್ತಾ ಎನ್ನುವವಳು ರಚಿಸಿದ ಸಾಲುಗಳಿವು . ಸುಮಂಗಲಮಾತಾ ಎನ್ನುವ ಮತ್ತೊಬ್ಬ ಥೇರೀ ಹಾಡಿರುವುದು ಹೀಗೆ :

*ಓ ನಾನೆಂಥ ವಿಮುಕ್ತೆ ! ನನಗೆಷ್ಟು ಸ್ವಾತಂತ್ರ್ಯ;*
*ಅಡಿಗೆಮನೆಯ ಕೊಳಕು ಚಾಕರಿಯಿಂದ,*
*ಮಸಿ ಹಿಡಿದ, ಕೊಳಕಾದ ನನ್ನ ಅಡಿಗೆಯ ಮಡಿಕೆಗಳಿಂದ,*
*ರಾಕ್ಷಸ ಗಂಡನಿಂದ ಸಂಪೂರ್ಣ ವಿಮುಕ್ತೆ ನಾನು.*

ಸುಮಾರು ಕ್ರಿ. ಪೂ. ೬ನೆಯ ಶತಮಾನದಲ್ಲಿ ರಚಿತವಾಗಿರುವ ಈ ಬೌದ್ಧ 'ಥೇರೀಗಾಥಾ'ಗಳಲ್ಲಿ ಆ ಕಾಲದ ಹೆಂಗಸರ ಮನಸ್ಸಿನ ಭಾವನೆಗಳು, ನೋವುಗಳು ಬಿಚ್ಚಿಕೊಳ್ಳುತ್ತವೆ. ಗೃಹಕೃತ್ಯದ ದಾಸ್ಯದಲ್ಲಿ ತೊಳಲಿದವರಿಗೆ, ಸಮಾಜದ ದ್ವಿಮುಖ ನೀತಿಯಿಂದ ಮರ್ದನಕ್ಕೊಳಗಾದವರಿಗೆ ಬೌದ್ಧ ಸಂಘಗಳು ಒಂದು ರೀತಿಯ ಹೊಸ ಬದಲಾವಣೆಯಾಗಿ ಆಕರ್ಷಕವಾಗಿ ಕಂಡವು. ಮಹಿಳೆಯರಿಗೆ ಬೌದ್ಧ ಭಿಕ್ಷುಣಿಯರಾಗಲು ದೊರಕಿದ ಸ್ವಾತಂತ್ರ್ಯ ಗೃಹಿಣಿಪಟ್ಟಕ್ಕೆ ದೊರಕಿದ ಪರ್ಯಾಯ ವ್ಯವಸ್ಥೆಯಾಯಿತು.

ಶತ ಶತಮಾನಗಳಿಂದಲೂ ಮನೆಗೆಲಸದ ಹೊರೆಯನ್ನು ಹೊತ್ತುಕೊಂಡಿರುವ ಮಹಿಳೆಗೆ ಇದೇನೂ ಅಪೇಕ್ಷಿತ ಜವಾಬ್ದಾರಿಯಲ್ಲ. ಮಹಿಳೆ ಹೊರಗೆ ದುಡಿಯಲಿ, ದುಡಿಯದಿರಲಿ, ಮನೆಗೆಲಸ ಅವಳಿಗೆ ಕಟ್ಟಿಟ್ಟ ಬುತ್ತಿ. ಹೆಣ್ಣನ್ನು ನಿರಂತರ ದಾಸ್ಯಕ್ಕೆ ದೂಡಿರುವ ಶಾಶ್ವತ ಗುಲಾಮ ಚಾಕರಿ ಇದು. ಬೆಲೆಯೇ ಇಲ್ಲದ ಈ ದುಡಿಮೆ ಅವಳಿಗೆ ಯಾವ ರೀತಿಯ ಸ್ಥಾನ ಮತ್ತು ಅಂತಸ್ತನ್ನೂ ಕೊಡುವುದಿಲ್ಲ. ಕುಟುಂಬದಲ್ಲಿ ವಯಸ್ಕ ಸ್ತ್ರೀ ಪುರುಷರಿಬ್ಬರೂ ಹಂಚಿಕೊಂಡು ಮಾಡಬೇಕಾದ ಗೃಹಕೃತ್ಯವನ್ನು ಸಂಪೂರ್ಣವಾಗಿ ಮಹಿಳೆಯರಿಗೇ ನೀಡಿರುವುದು ಶೋಷಣೆಯ ಮುಖ್ಯ ಸೂತ್ರವಾಗಿದೆ. ಶ್ರಮದಾಯಕವಾದ ಮನೆಯ ಚಾಕರಿ ಮಾಡುತ್ತಿದ್ದರೂ ಗೃಹಣಿಯರಿಗೆ ಆರ್ಥಿಕ ಅವಲಂಬನೆಯಂತೂ ಇದ್ದೇ ಇರುತ್ತದೆ.

ಗಂಡಸು ಕೈ ಬಾಯಿ ಸುಟ್ಟುಕೊಂಡು ಅಡಿಗೆ ಮಾಡಿ ಬದುಕುವುದು ತಪ್ಪಿಸಲೆಂದೇ ಮದುವೆ ಬೇಕೆನ್ನುವ ನಮ್ಮ ಸಮಾಜ ಅಡಿಗೆಯ ಕೆಲಸವನ್ನು ಹೆಣ್ಣಿಗೇ ವಹಿಸಿದೆ. ಆದರೆ ಅಡಿಗೆಯನ್ನೇ ನೌಕರಿ ಮಾಡಿ ಬದುಕುವ ಗೌರವ ಮಾತ್ರ ಗಂಡಸಿಗೆ ದೊರಕಿದೆ. ಇಲ್ಲಿ ಹೆಣ್ಣು ಕೇವಲ ಸಹಾಯಕ, ಪರಿಚಾರಕಳಷ್ಟೇ. ಅಡಿಗೆ ಮನೆಯ ಸರಕುಗಳ ಜಾಹಿರಾತಿಗೆಲ್ಲಾ ಹೆಣ್ಣೇ ಮಾಡಲ್ ಆದರೂ 'ನಳಪಾಕ', 'ಭೀಮಪಾಕ'ಗಳ ಪ್ರಶಸ್ತಿ ಪತ್ರಗಳು ಗಂಡಸಿಗೇ ಲಭ್ಯ. 'ವಿ ವಾಂಟ್ ರೆವಲ್ಯೂಷನ್' ಎಂದು ಜಾಹಿರಾತಿನ ಮಹಿಳೆ ಕೇಳುವುದು ''ಮಿಕ್ಸಿ'' ಯನ್ನೇ!

ಗ್ರಾಮೀಣ ಸಂಸ್ಕೃತಿಯ ಸಂದರ್ಭದಲ್ಲಿ ಮನೆಯ ಕೆಲಸದೊಂದಿಗೆ ತಮ್ಮದೇ ಹೊಲಗಳಲ್ಲಿ ದುಡಿಯುತ್ತಿದ್ದ ಮಹಿಳೆಯರು ಇದ್ದರು, ಈಗಲೂ ಇದ್ದಾರೆ ಹಾಗೆಯೇ ಮನೆಗೆಲಸದೊಂದಿಗೆ ಹೊರಗೆ ಕೂಲಿ, ವ್ಯಾಪಾರ, ಕಛೇರಿ, ಕಾರ್ಖಾನೆಗಳಲ್ಲಿನ ದುಡಿಮೆ ಮಾಡುವ ಆಧುನಿಕ ಮಹಿಳೆಯರೂ ಇಂದು ಎರಡು ಜವಾಬ್ದಾರಿಗಳ ನಡುವೆ ತತ್ತರಿಸುತ್ತಿದ್ದಾರೆ. ದುಡಿಮೆಯ ಅವಕಾಶ ದೊರೆತು ಅಡಿಗೆ ಮನೆಯಿಂದ ಹೊರಗೆ ಸ್ವಲ್ಪ ಕಾಲವಾದರೂ ಹೊರಬಂದ ಮಹಿಳೆ ತನ್ನ ಸಾಮರ್ಥ್ಯವನ್ನು ಸ್ಥಿರಪಡಿಸಬೇಕಾದ ಅಗತ್ಯ ಕಂಡುಕೊಂಡಳು. 'ತೊಟ್ಟಿಲ ತೂಗುವ ಕೈ ಲೋಕದ ಸೂತ್ರವನ್ನು ಹಿಡಿಯಬಲ್ಲದು' ಎನ್ನುವುದನ್ನು ಸ್ಥಿರಪಡಿಸುವ ಸಂಭ್ರಮದಲ್ಲಿ ಹೊರಗೆ ದುಡಿಯುತ್ತಲೇ ತೊಟ್ಟಿಲು, ಸೌಟುಗಳಿಗೆ ಸರಿಯಾದ ನ್ಯಾಯ ದೊರಕಿಸಬೇಕೆಂಬ ಹಠ ಮತ್ತು ಹುಚ್ಚು ಹಂಬಲ ಹೆಣ್ಣಿನ ಹೊರೆಯನ್ನು ದ್ವಿಗುಣಗೊಳಿಸಿತು. ಈ ಪಾತ್ರದಲ್ಲಿ ಸ್ವಲ್ಪ ಏರುಪೇರಾದರೂ ಪಾಪ ಪ್ರಜ್ಞೆಯಲ್ಲಿ ನರಳುವವಳು ಹೆಣ್ಣೇ. ಈ ಎಲ್ಲ ಹೊರೆಗಳೂ ಅವಳು ಆದರ್ಶ ದುಡಿಮೆಗಾರಳಾಗುವ ಅವಕಾಶಕ್ಕೆ ಅಡ್ಡಿಯಾಯಿತು.

ದುಡಿಮೆಯ ರಂಗಕ್ಕೆ ಹೋಗದೆ ಮನೆಗೆಲಸವನ್ನು ನಿರ್ವಹಿಸುತ್ತಾ ಆರ್ಥಿಕ ಅವಲಂಬನೆಗೆ ಮನೆಯ ಗಂಡ, ಸೋದರ, ತಂದೆಯರನ್ನು ಅವಲಂಬಿಸುತ್ತಾ ಬದುಕುವ ಹಲವಾರು ಹೆಣ್ಣು ಮಕ್ಕಳು ಅನುಭವಿಸುತ್ತಿರುವ ಸ್ವಾತಂತ್ರ್ಯ ಎಷ್ಟು? ಆರ್ಥಿಕವಾಗಿ ಮಾತ್ರವಲ್ಲ, ತಮ್ಮ ಬದುಕಿನ ಮಹತ್ತರವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯವೂ ಇಲ್ಲದೆ ಪುರುಷಾವಲಂಬಿತವಾಗುವ ಅವಸ್ಥೆ ಈ ಮಹಿಳೆಯರಿಗೆ. ಹಾಗಾದರೆ ಮಹಿಳೆ ಮನೆಯಲ್ಲಿ ಮಾಡುವ ಕೆಲಸಕ್ಕೆ ಬೆಲೆ ಕಟ್ಟುವುದು ಹೇಗೆ? - ಇದು ಇಂದಿನ ಸ್ತ್ರೀವಾದಿಗಳಲ್ಲೇ ಹಲವಾರು ಭಿನ್ನ ಚಿಂತನೆಗಳನ್ನು, ವಾದ ವಿವಾದಗಳನ್ನು ಸೃಷ್ಟಿಸಿದೆ. ಅಂತರರಾಷ್ಟ್ರೀಯ ವೇದಿಕೆಗಳು ಈ ವಿಷಯವನ್ನು ಬಹು ಮಹತ್ವದ ಸಂಗತಿಯೆಂಬಂತೆ ಚರ್ಚಿಸಿವೆ. ಅಂತರರಾಷ್ಟ್ರೀಯ ಮಹಿಳಾ ದಶಕದ ೧೯೮೫ರಲ್ಲಿ ನೈರೋಬಿಯಲ್ಲಿ ನಡೆದ ಮಹಿಳಾ ಸಮ್ಮೇಳನದಲ್ಲಿ ಕುಟುಂಬದೊಳಗಿನ ಮಹಿಳೆಯ ದುಡಿಮೆಯನ್ನು ಕುರಿತಂತೆ ವ್ಯಾಪಕ ಚರ್ಚೆಗಳು ನಡೆದವು. ಮನೆಯಲ್ಲಿ ದುಡಿಯುವ ಮಹಿಳೆಯರ ಪರಿಶ್ರಮವನ್ನು ಒಂದು ದುಡಿಮೆಯಾಗಿ ಗುರುತಿಸಬೇಕೆಂದು ಅನೇಕ ಪ್ರತಿನಿಧಿಗಳು ಒತ್ತಾಯ ತರಲು ಇಚ್ಛಿಸಿದರು. ಅದಕ್ಕೂ ಇಂತಿಷ್ಟು ಕೂಲಿ ನಿಗದಿಯಾಗಬೇಕೆಂದು ಅವರ ಅಭಿಪ್ರಾಯವಾಗಿತ್ತು. ಇನ್ನೂ ಕೆಲವರು ಇನ್ನಷ್ಟು ಮುಂದೆ ಹೋಗಿ 'ಒಮ್ಮೆ ಮಹಿಳೆಯು ಮನೆಗೆಲಸ ನಿಲ್ಲಿಸಿದರೆ ಜಗತ್ತಿನ ಅನೇಕ ಚಟುವಟಿಕೆಗಳು ನಿಂತು ಹೋಗುತ್ತವೆ' ಎಂದರು. ಇನ್ನೂ ಕೆಲವರು ಅದಕ್ಕೂ ಮುಂದೆ ಹೋಗಿ ''ಅವಳು ಮನೆಯಲ್ಲಿ ಮಾಡುವ ಕೆಲಸಕ್ಕೆ ವೇತನ ಕೊಡಬೇಕು, ಗಂಡನಲ್ಲ , ಸರ್ಕಾರ!'' ಎಂದು ವಾದಿಸಿದರು.



''ಮನೆಗೆಲಸ''ವನ್ನು ಸಾಮಾಜಿಕ ಉತ್ಪಾದನೆಯೆಂಬಂತೆ ಭಾವಿಸಲು ಸಾಧ್ಯವೇ? ಮನೆಯೊಳಗಿನ ದುಡಿಯುವ ಸಂಬಂಧಗಳು ಸಾಮಾಜಿಕ ಉತ್ಪಾದನೆಯ ಸಂಬಂಧಗಳಂತೆ ಇರುವುದೇ? ಇಲ್ಲಿ ವ್ಯಕ್ತವಾಗಬಹುದಾದ ಮಾನವೀಯ ಸಂಬಂಧಗಳಿಗೆ ಎಂತಹ ಸ್ಥಾನ ನೀಡಬೇಕು? -ಇವು ನಿರ್ಧಾರವಾಗದ ಹೊರತು 'ಮನೆಗೆಲಸ' ವೇತನ ಪಡೆಯುವ ದುಡಿಮೆಯಾಗುವುದಿಲ್ಲ. ಮನೆಯೊಳಗೆ ಮಾಲಿಕ – ಕಾರ್ಮಿಕನ ಸಂಬಂಧವನ್ನು ಗಂಡು ಹೆಣ್ಣಿಗೆ ಆರೋಪಿಸಲಾಗದು. ಹಾಗೆಯೇ ಮನೆಯೊಳಗಿನ ಉತ್ಪಾದನೆಯಲ್ಲೂ ಲಾಭ ಮತ್ತು ಉಳಿತಾಯಗಳು ದೊರೆಯುವುದಿಲ್ಲ. ಶತ ಶತಮಾನಗಳಿಂದಲೂ ಮನೆ ಮತ್ತು ಹೊರಗಿನ ಜವಾಬ್ದಾರಿಗಳು ಸ್ತ್ರೀ ಪುರುಷರ ನಡುವೆ ವಿಂಗಡಣೆಯಾಗಿವೆ. ಎಲ್ಲ ದೇಶಗಳಲ್ಲೂ, ಕೆಲವೊಂದು ಅಪವಾದಗಳನ್ನು ಬಿಟ್ಟರೆ ಮತ್ತು ಪ್ರಮಾಣದ ದೃಷ್ಟಿಯಿಂದ ಬದಲಾವಣೆ ಇದ್ದರೂ, ಒಟ್ಟಾರೆಯಾಗಿ ಗೃಹಕೃತ್ಯದ ಎಲ್ಲ ಮನೆವಾರ್ತೆಯನ್ನೂ ಮಹಿಳೆಯರೇ ನೋಡಿಕೊಳ್ಳಬೇಕೆಂಬುದು ಒಂದು ಅಲಿಖಿತ ಒಪ್ಪಂದ. ಅಡಿಗೆಮನೆ ಮತ್ತು ಬಟ್ಟೆಗಳ ಶುಚಿ - ಈ ಕೆಲವೊಂದು ಕೆಲಸಗಳನ್ನು ಕೆಲಸದವರಿಂದ ಮಾಡಿಸಬಹುದಾದರೂ ಒಟ್ಟಾರೆಯಾಗಿ ಕುಟುಂಬದ ಜವಾಬ್ದಾರಿ ಹೆಣ್ಣಿಗೆ. ಇದೇ ಕೆಲಸವನ್ನು ಹೆಂಡತಿಯೋ, ಸೋದರಿಯೋ, ತಾಯಿಯೋ,

*(೯ನೇ ಪುಟಕ್ಕೆ ಮುಂದುವರಿದಿದೆ)*

# ಸಂವಿಧಾನ ಮತ್ತು ಕಾನೂನಿನಲ್ಲಿ ಮಹಿಳೆ

ಹೇಮಲತಾ ಮಹಿಷಿ

**ಭಾ**ರತ ಸಂವಿಧಾನ ತನ್ನ ಎಲ್ಲ ನಾಗರಿಕರಿಗೆ ಸಮಾನತೆಯನ್ನು, ಬದುಕುವ ಹಕ್ಕನ್ನು ನೀಡಿದೆ. ಸಂವಿಧಾನದ ಮೂರನೆಯ ಅಧ್ಯಾಯದಲ್ಲಿರುವ ''ಮೂಲಭೂತ ಹಕ್ಕುಗಳು'' ಇವನ್ನು ರಕ್ಷಿಸುವ ಹಕ್ಕುಗಳಾಗಿದ್ದು, ಪಕ್ಷಪಾತ ನೀತಿಯ ಹಾಗೂ ದಮನಕಾರಿ-ಅಮಾನವೀಯ ನೀತಿಯ ವಿರುದ್ಧ ತೊಡಿಸಿದ ರಕ್ಷಾಕವಚಗಳಾಗಿವೆ. ಸಂವಿಧಾನದ ಮುನ್ನುಡಿಯಲ್ಲಿ ಸಾಮಾಜಿಕ-ಆರ್ಥಿಕ ಹಾಗೂ ರಾಜಕೀಯ ನ್ಯಾಯವನ್ನು, ವಿಚಾರ-ಅಭಿವ್ಯಕ್ತಿ-ನಂಬಿಕೆ ಹಾಗೂ ಪೂಜಾ ಸ್ವಾತಂತ್ರ್ಯವನ್ನು, ಸ್ಥಾನ-ಮಾನ ಅವಕಾಶಗಳ ಸಮಾನತೆಯನ್ನು ತನ್ನ ಎಲ್ಲಾ ಪ್ರಜೆಗಳಿಗೆ ದೊರಕಿಸುವುದೇ ಸ್ವತಂತ್ರ ಭಾರತದ ಧ್ಯೇಯವೆಂದು ಘೋಷಿಸಲಾಗಿದ್ದು, ಅದರ ಅನುಷ್ಠಾನಕ್ಕಾಗಿಯೇ ಮೂಲ ಭೂತ ಹಕ್ಕುಗಳನ್ನು ನೀಡಲಾಗಿದೆ. ಕಾರ್ಯಾಂಗವಾಗಲಿ, ಶಾಸಕಾಂಗವಾಗಲಿ, ಈ ಹಕ್ಕುಗಳನ್ನು ಉಲ್ಲಂಘಿಸಲು ಪ್ರಯತ್ನಿಸಿದರೆ, ಅದನ್ನು ವಿರೋಧಿಸಿ, ಪ್ರಜೆಯು ತನ್ನ ಮೂಲಭೂತ ಹಕ್ಕಿನ ರಕ್ಷಣೆಗಾಗಿ ನ್ಯಾಯಾಂಗದ ಸಹಾಯ ಕೋರಬಹುದಾಗಿದೆ. ೧೯೪೮ರಲ್ಲಿ ವಿಶ್ವರಾಷ್ಟ್ರಸಂಸ್ಥೆಯು ಅಂಗೀಕರಿಸಿದ ಮಾನವ ಹಕ್ಕುಗಳ ಘೋಷಣೆಯ ಪ್ರಮುಖ ಅಂಶಗಳನ್ನು ನಮ್ಮ ಸಂವಿಧಾನದಲ್ಲಿ ಸೇರಿಸಲಾಗಿದೆ.

ಮಾನವ ಹುಟ್ಟುವಾಗ ಸ್ವತಂತ್ರವಾಗಿ ಜನ್ಮ ತಾಳುತ್ತಾನೆ. ಆದರೆ, ಮುಂದೆ ಅವನದೇ ಆದ ಕುಟುಂಬ, ಸಮಾಜ, ದೇಶ, ಸರ್ಕಾರಗಳು ಅವನಿಗೆ ನಾನಾ ತರಹದ ಶೃಂಖಲೆಗಳನ್ನು ತೊಡಿಸಿ ಅವನ ಜನ್ಮಸಿದ್ಧ ಸ್ವಾತಂತ್ರ್ಯವನ್ನು ಮೊಟಕುಗೊಳಿಸುತ್ತಾ ಹೋಗುತ್ತವೆ. ಮಾನವ ಮಾನವರ ನಡುವೆ ಕಂದಕಗಳು ನಿರ್ಮಾಣವಾಗಿ ತರ-ತಮ ಧೋರಣೆ ಏರ್ಪಡುತ್ತದೆ. ದೈಹಿಕ, ಆರ್ಥಿಕ ಹಾಗೂ ಅಧಿಕಾರದ ಶಕ್ತಿ ಹೊಂದಿರುವ ವ್ಯಕ್ತಿಗಳು, ಗುಂಪುಗಳು, ದೇಶಗಳು ದುರ್ಬಲರನ್ನು ಶೋಷಿಸಲು, ನಿರ್ನಾಮ ಮಾಡಲು ಪ್ರಯತ್ನಿಸುತ್ತವೆ. ಧರ್ಮ, ಜನಾಂಗ, ಜಾತಿ, ಲಿಂಗ, ಹುಟ್ಟು ಇತ್ಯಾದಿಗಳು ಪಕ್ಷಪಾತ ನೀತಿಯ ಕಾರಣವಾಗುತ್ತವೆ. ಇವುಗಳಿಲ್ಲದರಿಂದ ಮಾನವನನ್ನು, ಮಾನವನ ಘನತೆಯನ್ನು ರಕ್ಷಿಸುವುದಕ್ಕಾಗಿಯೇ ಮಾನವ ಹಕ್ಕುಗಳ ಘೋಷಣೆಯಾದದ್ದು, ನಮ್ಮ ಸಂವಿಧಾನ ದಲ್ಲಿಯೂ ಆ ಹಕ್ಕುಗಳನ್ನು ಅಳವಡಿಸಿಕೊಂಡುದು. ಯಾವುದೇ ಪಕ್ಷಪಾತವಿಲ್ಲದೆ ಎಲ್ಲ ಮಾನವರನ್ನು ಮಾನವರನ್ನಾಗಿ ಕಾಣಬೇಕೆಂಬ ಹಂಬಲ ಇದರ ಹಿಂದಿದೆ.

ವಿಶ್ವವು ೨೧ನೇ ಶತಮಾನಕ್ಕೆ ಕಾಲಿಟ್ಟಿರುವ ಸಂದರ್ಭದಲ್ಲಿ ಇಂದಿಗೂ ಹಲವಾರು ಅಮಾನವೀಯ ಧೋರಣೆಗಳು, ಆಚರಣೆಗಳು, ನಂಬಿಕೆಗಳು ಉಳಿದು ಕೊಂಡು ಬಂದಿರುವುದು ಎಲ್ಲ ಮಾನವತಾವಾದಿಗಳಿಗೆ ದೊಡ್ಡ ಸವಾಲಾಗಿದೆ. ಇಂದಿನ ಸಂದರ್ಭದಲ್ಲಿ ಎಲ್ಲ ರೀತಿಯ ಭೇದ ಭಾವಗಳಿಗಿಂತ ಸಾರ್ವತ್ರಿಕವಾದುದು, ವಿಶ್ವದ ಎಲ್ಲಾ ದೇಶಗಳಲ್ಲಿ ಹೆಚ್ಚು ಪ್ರಚಲಿತವಾಗಿರುವುದು ಲಿಂಗಭೇದ. ಪುರುಷ ಹೆಚ್ಚು ಶ್ರೇಷ್ಠ, ಮಹಿಳೆ ಕನಿಷ್ಠಳು, ಎಲ್ಲಾ ರೀತಿಯಲ್ಲಿಯೂ ಪುರುಷನಿಗಿಂತ ಎರಡನೆಯ ದರ್ಜೆಯವಳು. ಅವಳ ಕೆಲಸವೇನಿದ್ದರೂ ಮಕ್ಕಳ ತಾಯಿಯಾಗಿ, ಮನೆಯಲ್ಲಿದ್ದು ಸಂಸಾರ ನಿರ್ವಹಣೆ ಮಾಡುವುದು, ಪುರುಷನ ಕಾಮತೃಷೆ ತೀರಿಸುವುದು ಎಂಬ ನಂಬಿಕೆ ಇನ್ನೂ ಎಲ್ಲಾ ಸಮಾಜಗಳಲ್ಲಿ ಬಲವಾಗಿ ಬೇರೂರಿದೆ. ಅಂತಹ ನಂಬಿಕೆಗಳನ್ನು ಹುಸಿಗೊಳಿಸಲು ಮಹಿಳೆಯರು ಸತತವಾಗಿ ತಮ್ಮ ಸಾಧನೆಗಳ ಮೂಲಕ ಪ್ರಯತ್ನಿಸಿದರೂ, ಅದನ್ನು ಒಪ್ಪಿಕೊಳ್ಳಲು ಪುರುಷ ವರ್ಗ ಇನ್ನೂ ಮಾನಸಿಕವಾಗಿ ಸಿದ್ಧವಿಲ್ಲ. ಅಂತೆಯೇ ಮಾನವನ ಹಕ್ಕುಗಳು - ಸಂವಿಧಾನದ ಮೂಲಭೂತ ಹಕ್ಕುಗಳು ಮಹಿಳೆಯರ ಸ್ವಾತಂತ್ರ್ಯ-ಸಮಾನತೆಯ ಕನಸನ್ನು ಸಾಕಾರಗೊಳಿಸುವ ಸಾಧನಗಳಾಗಿವೆ. ಭಾರತ ಸಂವಿಧಾನದ ೧೪, ೧೫, ೧೬ ಮತ್ತು ೨೧ನೇ ಅನುಚ್ಛೇದಗಳು ಮಹಿಳೆಯರಿಗೂ ನಮ್ಮ ದೇಶದಲ್ಲಿ ಸ್ವಾತಂತ್ರ್ಯ ಸಮಾನತೆಯನ್ನು ದೊರಕಿಸಿಕೊಡುವ ಆಶ್ವಾಸನೆಯನ್ನು ನೀಡುತ್ತವೆ.

ಸಂವಿಧಾನದ ೧೪ನೇ ಅನುಚ್ಛೇದವು ಕಾನೂನಿನ ಎದುರು ಎಲ್ಲರೂ ಸಮಾನರೆಂದೂ, ಎಲ್ಲರಿಗೂ ದೇಶದಲ್ಲಿ ಕಾನೂನಿನ ಸಮಾನ ರಕ್ಷಣೆ ಇದೆಯೆಂದೂ ತಿಳಿಸುತ್ತದೆ. ೧೫ ನೇ ಅನುಚ್ಛೇದವು ಕೇವಲ ಧರ್ಮ, ಜನಾಂಗ, ಜಾತಿ ಲಿಂಗ, ಜನ್ಮಸ್ಥಳದ ಆಧಾರದ ಮೇಲೆ ರಾಜ್ಯವು ತನ್ನ ಪ್ರಜೆಗಳ ನಡುವೆ ಭೇದ ಭಾವ ತೋರುವುದಿಲ್ಲವೆಂದು ತಿಳಿಸುತ್ತದೆ. ಇಂತಹ ಭೇದ ಭಾವದ ಆಧಾರದ ಮೇಲೆ ಯಾವ ಪ್ರಜೆಗೂ ಅಂಗಡಿಗಳು, ಸಾರ್ವಜನಿಕ ಉಪಹಾರಗೃಹಗಳು ಹಾಗೂ ಸಾರ್ವಜನಿಕ ಮನೋರಂಜನಾ ಸ್ಥಳಗಳಲ್ಲಿ ಪ್ರವೇಶ ಪಡೆಯಲು, ಮತ್ತು ಬಾವಿಗಳು, ಕೆರೆಗಳು, ಸ್ನಾನಘಟ್ಟಗಳು, ರಸ್ತೆಗಳು, ಇತರ ಸಾರ್ವಜನಿಕ ಪ್ರದೇಶಗಳನ್ನು ಉಪಯೋಗಿಸಲು ಯಾವುದೇ ರೀತಿಯ ನಿರ್ಬಂಧವಿರತಕ್ಕದ್ದಲ್ಲವೆಂದು ವಿಧಿಸುತ್ತದೆ. ಆದರೆ, ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ವ್ಯವಸ್ಥೆ ಮಾಡಲು ಈ ಅನುಚ್ಛೇದ ಅಡ್ಡಿಯಾಗುವುದಿಲ್ಲವೆಂದೂ ತಿಳಿಸಲಾಗಿದೆ. ಎಂದರೆ ಸಾಮಾಜಿಕವಾಗಿ ಮಹಿಳೆಯರ ವಿರುದ್ಧವಿರುವ ಧೋರಣೆಗಳನ್ನು, ಆಚರಣೆಗಳನ್ನು ತೆಗೆದುಹಾಕಿ ಮಹಿಳೆ ಯರಿಗೆ ಸಮಾನ ಸ್ಥಾನ-ಮಾನ ಕಲ್ಪಿಸಲು ಈ ಅನುಚ್ಛೇದ ಅವಕಾಶ ಮಾಡಿಕೊಟ್ಟಿದೆ. ೧೬ನೇ ಅನುಚ್ಛೇದವು ಎಲ್ಲಾ ಪ್ರಜೆಗಳಿಗೆ, ಲಿಂಗ ಭೇದವನ್ನೂ ಒಳಗೊಂಡಂತೆ, ಯಾವುದೇ ಪಕ್ಷಪಾತವಿಲ್ಲದೆ, ಸರ್ಕಾರಿ ಉದ್ಯೋಗ ಕೈಗೊಳ್ಳುವ ಸಮಾನ ಅವಕಾಶವನ್ನು ನೀಡಿದೆ. ಆದರೆ ಸರ್ಕಾರಿ ಸೇವೆಯಲ್ಲಿ ಯಾವುದೇ ಹಿಂದುಳಿದ ಪ್ರಜೆಗಳ ಗುಂಪಿಗೆ ಸೂಕ್ತ ಪ್ರಾತಿನಿಧ್ಯ ದೊರಕಿಲ್ಲವೆಂದು ಕಂಡುಬಂದರೆ ಅಂತಹ ಹಿಂದುಳಿದ ಗುಂಪಿನ ಪರವಾಗಿ ಉದ್ಯೋಗಗಳಲ್ಲಿ ಮೀಸಲಾತಿ ಕಲ್ಪಿಸಬಹುದೆಂದು ತಿಳಿಸಲಾಗಿದೆ. ಆಂಧ್ರಪ್ರದೇಶ ಸರ್ಕಾರವು ಇತ್ತೀಚೆಗೆ ಮಹಿಳೆಯರಿಗೆ ರಾಜ್ಯ ಸರ್ಕಾರಿ ಸೇವೆಯಲ್ಲಿ ೩೦% ಮೀಸಲಾತಿ ನೀಡಿ ಹೊರಡಿಸಿದ್ದ ಅಧಿಸೂಚನೆಯನ್ನು ಪ್ರಶ್ನಿಸಿದ್ದ ಮೊಕದ್ದಮೆ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಾಗ ನ್ಯಾಯಮೂರ್ತಿ ಸುಜಾತಾ ಮನೋಹರ ಅವರ ನ್ಯಾಯಪೀಠವು ಅದನ್ನು ಸಂವಿಧಾನದ ೧೫ ಮತ್ತು ೧೬ನೇ ಅನುಚ್ಛೇದದಡಿಯಲ್ಲಿ ಎತ್ತಿಹಿಡಿದಿದ್ದು ಮಹಿಳೆಯರ ಪರವಾಗಿ ರಾಜ್ಯ ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ಕಲ್ಪಿಸಬಹುದೆಂದು ತಿಳಿಸಿದೆ. ಇದೇ ರೀತಿ ಇಂದು ಕರ್ನಾಟಕ ಸರ್ಕಾರದಲ್ಲಿಯೂ ಮಹಿಳೆಯರಿಗಾಗಿ ರಾಜ್ಯ ಸರ್ಕಾರಿ ಉದ್ಯೋಗಗಳಲ್ಲಿ ೩೦% ಮೀಸಲಾತಿ ಇದ್ದು ಅನುಷ್ಠಾನಕ್ಕೆ ಬರುತ್ತಿರುವುದು ಸಮಾಧಾನಕರ ಅಂಶ. ಆದರೆ ಮಹಿಳೆಯರು ಸಾಂಪ್ರದಾಯಿಕವಲ್ಲದ ನೌಕರಿ ಪ್ರವೇಶಿಸಲು, ಸಮರ್ಥ ವಾಗಿ ತಮ್ಮ ಜವಾಬ್ದಾರಿ ನಿರ್ವಹಿಸಲು ಧೈರ್ಯ ಮಾಡಬೇಕಿದೆ ಹಾಗೂ ಸೂಕ್ತ ತರಬೇತಿ ಪಡೆಯ ಬೇಕಾಗುತ್ತದೆ.

೨೧ನೇ ಅನುಚ್ಛೇದವು ಮಹಿಳೆಯರಿಗೂ ಬದುಕುವ ಹಕ್ಕನ್ನು ಸುನಿಶ್ಚಿತಗೊಳಿಸುತ್ತದೆ. ಅನೇಕ ಪ್ರಕರಣಗಳಲ್ಲಿ




*ಹುಟ್ಟಿದ್ದಾಗ ಒಂಟಿ*
*ಇಹಲೋಕ ತ್ಯಜಿಸಿದಾಗ ಒಬ್ಬಂಟಿ*
*ಈ ನಡುವೆ ಮಾಡಿಕೊಳ್ಳಬೇಕೇ*
*ನಾನು, ನನ್ನದೆನ್ನುವ ಅಹಂಕಾರದೊಡನೆ*
*ಜಂಟಿ?*

– ಎನ್. ಶ್ರೀನಿವಾಸ

ಸರ್ವೋಚ್ಚ ನ್ಯಾಯಾಲಯ ಬದುಕುವ ಹಕ್ಕೆಂದರೆ ಗೌರವವಾಗಿ, ಘನತೆಯಿಂದ ಬದುಕುವ ಹಕ್ಕೇ ಹೊರತು, ಪ್ರಾಣಿಗಳಂತೆ ಬದುಕುವುದಲ್ಲ ಎಂದು ಸ್ಪಷ್ಟಪಡಿಸಿದೆ. ೧೯ನೇ ಅನುಚ್ಛೇದವು ಎಲ್ಲರೊಂದಿಗೆ ಮಹಿಳೆಯರಿಗೂ ಮಾತು-ಅಭಿವ್ಯಕ್ತಿ ಸ್ವಾತಂತ್ರ್ಯ, ಶಾಂತಿಯುತವಾಗಿ ಸಭೆ ಸೇರುವ ಸ್ವಾತಂತ್ರ್ಯ, ಸಂಘಗಳನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯ, ಭಾರತದ ಎಲ್ಲೆಡೆ ಸಂಚರಿಸುವ ಸ್ವಾತಂತ್ರ್ಯ, ಭಾರತದಲ್ಲಿ ಎಲ್ಲಿ ಬೇಕಾದರೂ ವಾಸಿಸುವ, ನೆಲೆಸುವ ಸ್ವಾತಂತ್ರ್ಯ, ಯಾವುದೇ ಉದ್ಯೋಗ, ನೌಕರಿ, ವ್ಯಾಪಾರ-ವ್ಯವಹಾರವನ್ನು ಕೈಗೊಳ್ಳುವ ಸ್ವಾತಂತ್ರ್ಯವನ್ನು ಕೊಡುತ್ತದೆ. ೩೨ ಮತ್ತು ೨೨೬-೨೨೭ ನೇ ಅನುಚ್ಛೇದಗಳು ಈ ಎಲ್ಲಾ ಮೂಲಭೂತ ಹಕ್ಕುಗಳ ಉಲ್ಲಂಘನೆಯನ್ನು ಅನುಕ್ರಮವಾಗಿ ಸರ್ವೋಚ್ಚ ನ್ಯಾಯಾಲಯ - ಉಚ್ಚ ನ್ಯಾಯಾಲಯಗಳಲ್ಲಿ ಪ್ರಶ್ನಿಸುವ ಹಕ್ಕನ್ನು ನೊಂದ ವ್ಯಕ್ತಿಗಳಿಗೆ ನೀಡುತ್ತದೆ.

ಇಷ್ಟೆಲ್ಲಾ ಹಕ್ಕುಗಳು ಇದ್ದರೂ, ಅವುಗಳ ಉಲ್ಲಂಘನೆ ರಾಜ್ಯ ಯಂತ್ರಗಳ ಮೂಲಕ ಅವ್ಯಾಹತವಾಗಿ ನಡೆಯುತ್ತಿದ್ದರೂ, ತಮ್ಮ ಬಡತನ, ಅಜ್ಞಾನ , ಸಾಮಾಜಿಕ ಪರಿಸ್ಥಿತಿಯ ಕಾರಣದಿಂದಾಗಿ ನೊಂದ ವ್ಯಕ್ತಿಗಳಿಗೆ ನ್ಯಾಯಾಲಯದಲ್ಲಿ ಅವುಗಳನ್ನು ಪ್ರಶ್ನಿಸಲು, ಪರಿಹಾರ ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ದುರ್ಬಲ ವ್ಯಕ್ತಿಗಳಿಗೆ ನ್ಯಾಯ ದೊರಕಿಸಲು ಸೃಷ್ಟಿಗೊಂಡುದೇ ''ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆ''. ನ್ಯಾಯ ದೊರಕಿಸುವುದಕ್ಕಾಗಿ ಕಾಳಜಿ ಹೊಂದಿರುವ ಯಾವುದೇ ಜವಾಬ್ದಾರಿಯುತ ವ್ಯಕ್ತಿ ಅಥವಾ ಸಂಸ್ಥೆ ಇಂದು ಇಂತಹ ದುರ್ಬಲರ ಪರವಾಗಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲು ಮಾಡಿ, ನಡೆಸಬಹುದಾಗಿದೆ. ಹಲವಾರು ಬಾರಿ ನ್ಯಾಯಾಲಯಗಳೇ ಪತ್ರಿಕೆಗಳಲ್ಲಿ ವರದಿಯಾದ ವಿಷಯಗಳ ಆಧಾರದ ಮೇಲೆ ಅಥವಾ ಯಾವುದೇ ವ್ಯಕ್ತಿ ಬರೆದ ಪತ್ರದ ಆಧಾರದ ಮೇಲೆ ಮೊಕದ್ದಮೆ ದಾಖಲು ಮಾಡಿಕೊಂಡು ಪರಿಹಾರ ಒದಗಿಸಿರುವುದೂ ಉಂಟು. ಇಂತಹ ಹಲವಾರು ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಗಳಲ್ಲಿ ಮಹಿಳಾಪರ ತೀರ್ಪುಗಳು ಹೊರಬಂದಿವೆ.

೧೯೭೯ರಲ್ಲಿ, ಬಿಹಾರದ ನಾನಾ ಸೆರೆಮನೆಗಳಲ್ಲಿ ಮಹಿಳೆಯರು ಮಕ್ಕಳನ್ನು ಒಳಗೊಂಡಂತೆ ಅನೇಕ ಕೈದಿಗಳು, ಇನ್ನೂ ವಿಚಾರಣೆಯೂ ಆರಂಭವಾಗದೆ ಹಲವಾರು ವರ್ಷಗಳಿಂದ ಕೊಳೆಯುತ್ತಿರುವುದರ ಬಗ್ಗೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಲೇಖನಗಳು ಬಂದಾಗ, ಅವುಗಳ ಆಧಾರದ ಮೇಲೆ ದಾಖಲು ಮಾಡಿದ ಹುಸೇನಾರ್ ಖಾತೂನ್ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಅನೇಕ ನಿರ್ದೇಶನಗಳನ್ನು ನೀಡಿತು. ಹಲವಾರು ಮಹಿಳೆಯರು ವಕೀಲರನ್ನು ನೇಮಿಸಿ ಕೊಳ್ಳಲಾಗಲಿ, ಜಾಮೀನು ಪಡೆಯಲಾಗಲಿ ಹಣ ಆಸ್ತಿ ಇಲ್ಲದೆ ಸೆರೆಮನೆಯಲ್ಲಿ ಉಳಿದಿದ್ದರು. ಕ್ಷಿಪ್ರ ವಿಚಾರಣೆ ೨೧ನೇ ಅನುಚ್ಛೇದದ ಕೆಳಗೆ ಬರುವ ಬದುಕಿನ ಹಕ್ಕಿನ ಒಂದು ಮುಖ್ಯ ಅಂಶ ಎಂದು ಘೋಷಿಸಿದ ನ್ಯಾಯಾಲಯ, ವೈಯಕ್ತಿಕ ಮುಚ್ಚಳಿಕೆಯ ಮೇಲೆ ಕೂಡಲೆ ಈ ವಿಚಾರಣಾಧೀನ ಮಹಿಳಾ ಕೈದಿಗಳನ್ನು ಬಿಡುಗಡೆ ಮಾಡಬೇಕೆಂದು ಆಜ್ಞೆ ಮಾಡಿತು. ಬಡತನ ಅಥವಾ ಅಸಹಾಯಕತೆಯ ಕಾರಣದಿಂದ ಆಪಾದಿತರಿಗೆ ಉಚಿತವಾಗಿ ವಕೀಲರನ್ನು ಒದಗಿಸುವುದು ರಾಜ್ಯದ ಮೇಲಿರುವ ಹೊಣೆಗಾರಿಕೆ ಎಂದು ಸಾರಿತು. ವಿಚಾರಣಾಧೀನ ಕೈದಿಗಳ ಮೂಲಭೂತ ಹಕ್ಕುಗಳನ್ನು , ಬದುಕುವ ಹಕ್ಕನ್ನು ರಕ್ಷಿಸಲು ಅನೇಕ ಮಾರ್ಗದರ್ಶಿ ಸೂತ್ರಗಳನ್ನು ನ್ಯಾಯಾಲಯ ರೂಪಿಸಿಕೊಟ್ಟಿತು.

ಶೀಲಾ ಬರ್ಸೆ ಎಂಬುವ ಪತ್ರಕರ್ತೆಯು ಮುಂಬಯಿಯ ಸೆರೆಮನೆಯಲ್ಲಿರುವ ಮಹಿಳಾ ಕೈದಿಗಳ ಮೇಲೆ ಅಲ್ಲಿ ನಡೆಯುತ್ತಿರುವ ಹಿಂಸಾಚಾರವನ್ನು ಕುರಿತು ಬರೆದ ಪತ್ರದ ಆಧಾರದ ಮೇಲೆ ಮೊಕದ್ದಮೆಯನ್ನು ದಾಖಲಿಸಿಕೊಂಡ ಸರ್ವೋಚ್ಚ ನ್ಯಾಯಾಲಯವು, ಪೊಲೀಸ್ ಲಾಕ್- ಅಪ್‌ಗಳಲ್ಲಿ ಮಹಿಳಾ ಕೈದಿಗಳ ಮೇಲೆ ನಡೆಯುತ್ತಿರುವ ಹಿಂಸೆ ಮತ್ತು ಕಿರುಕುಳವನ್ನು ಗಮನಿಸಿ, ಅಂತಹ ಮಹಿಳೆಯರಿಗೆ ಕೊಡಬೇಕಾದ ಉಚಿತ ಕಾನೂನಿನ ನೆರವಿನ ಬಗ್ಗೆ ಹಾಗೂ ಅವರ ಸುರಕ್ಷತೆಯ ಬಗ್ಗೆ ಅನೇಕ ನಿರ್ದೇಶನಗಳನ್ನು ನೀಡಿತು. ಸುರಕ್ಷಿತ ಸ್ಥಳಗಳಲ್ಲಿ ಮಹಿಳಾ ಕೈದಿಗಳಿಗಾಗಿ ಪ್ರತ್ಯೇಕ ಲಾಕ್-ಅಪ್‌ಗಳ ನಿರ್ಮಾಣ, ಮಹಿಳಾ ಪೊಲೀಸರ ನೇಮಕ, ಮಹಿಳಾ ಪೊಲೀಸ್ ಅಧಿಕಾರಿಗಳ ಎದುರು ಅವರ ವಿಚಾರಣೆ, ಲಾಕ್-ಅಪ್‌ನಲ್ಲಿ ಅವರನ್ನು ಹಾಕಿದಾಗ ಸಮೀಪದ ಕಾನೂನು ನೆರವು ಸಮಿತಿಗೆ ತಿಳಿಸುವುದು, ಲಾಕ್-ಅಪ್‌ಗಳ ಸ್ಥಿತಿಯನ್ನು ಗಮನಿಸಲು ಸೆಷನ್ಸ್ ನ್ಯಾಯಾಧೀಶರು ಅನಿರೀಕ್ಷಿತ ಭೇಟಿ ಕೊಡುವುದು ಅವುಗಳಲ್ಲಿ ಕೆಲವು.

ಮಹಿಳೆಯರ ಸಂರಕ್ಷಣೆಗಾಗಿ ಇರುವ ಆಗ್ರಾ ಹೋಂನಲ್ಲಿನ ಅಮಾನವೀಯ ಪರಿಸರದ ಬಗ್ಗೆ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಪ್ರಕಟಗೊಂಡ ಪತ್ರದ ಪ್ರತಿಯನ್ನು ದೆಹಲಿ ವಿಶ್ವವಿದ್ಯಾಲಯದ ಇಬ್ಬರು ಕಾನೂನು ಪ್ರಾಧ್ಯಾಪಕರು ತಮ್ಮ ಪತ್ರದೊಂದಿಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಕಳಿಸಿದಾಗ ಅದನ್ನು ವಿಚಾರಣೆಗೆ ಎತ್ತಿಕೊಂಡ ನ್ಯಾಯಾಲಯವು, ಅಲ್ಲಿರುವ ಮಹಿಳೆಯರು ಗೌರವ ಘನತೆಯನ್ನು ಉಳಿಸಿಕೊಂಡು ಬದುಕಲು ಬೇಕಾದ ಮೂಲಭೂತ ಸೌಲಭ್ಯಗಳ ಬಗ್ಗೆ ನಿರ್ದೇಶನ ನೀಡಿ ಆಜ್ಞೆ ಮಾಡಿತು.

ಜಾಯಿಂಟ್ ವಿಮೆನ್ಸ್ ಪ್ರೋಗ್ರಾಂ ಮಹಿಳಾ ಸಂಸ್ಥೆಯು ವರದಕ್ಷಿಣೆ ಸಾವಿನ ಸಂಬಂಧವಾಗಿ ದಾಖಲುಮಾಡಿದ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ವರದಕ್ಷಿಣೆ ಸಾವಿನ ಪ್ರಕರಣಗಳಲ್ಲಿ ಪೊಲೀಸರು ನಡೆಸಬೇಕಾದ ತನಿಖೆಯ ಬಗ್ಗೆ ಆದೇಶಗಳನ್ನು ನೀಡಿದ್ದು ಅಲ್ಲದೆ, ರಾಜ್ಯಸರ್ಕಾರಗಳು ಇಂತಹ ಪ್ರಕರಣಗಳ ತನಿಖೆಗಾಗಿಯೇ ವಿಶೇಷ ಸೆಲ್‌ಗಳನ್ನು ರಚಿಸಬೇಕೆಂದೂ, ಆ ಸೆಲ್‌ಗಳಲ್ಲಿ ಇಬ್ಬರು ಪ್ರಮುಖ ಮಹಿಳಾ ಸಾಮಾಜಿಕ ಕಾರ್ಯಕರ್ತೆಯರನ್ನು ಸೇರಿಸಿಕೊಳ್ಳಬೇಕೆಂದೂ ಆದೇಶ ನೀಡಿತು.

೧೯೮೭ ರಲ್ಲಿ ರಾಜಸ್ತಾನದಲ್ಲಿ ನಡೆದ ರೂಪಾ ಕನ್ವರ್ ಸತಿ ಪ್ರಕರಣದ ಸಂಬಂಧವಾಗಿ ಆಲ್ ಇಂಡಿಯಾ ಡೆಮೋಕ್ರಾಟಿಕ್ ವಿಮೆನ್ಸ್ ಅಸೋಸಿಯೇಷನ್ ಹೂಡಿದ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಸತಿಯ ಸಂಬಂಧವಾಗಿ ನಡೆಯಲಿದ್ದ ಚುನರಿ ವಿಧಿಯನ್ನು, ನಿಧಿ ಸಂಗ್ರಹಣೆಯನ್ನು ನಿಷೇಧಿಸಿ ಆಜ್ಞೆ ಮಾಡಿತು.

ಪೊಲೀಸರ ದೌರ್ಜನ್ಯಕ್ಕೆ ತುತ್ತಾಗಿ ಗಾಯಗೊಂಡಿದ್ದ ಇಬ್ಬರು ಮಹಿಳೆಯರ ಪರವಾಗಿ ಸಹೇಲಿ ಮಹಿಳಾ ಸಂಸ್ಥೆಯು ಹೂಡಿದ್ದ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಅವರಿಗಾದ ಮಾನಸಿಕ ಆಘಾತ, ನೋವು, ಅಗೌರವ, ಸ್ವಾತಂತ್ರ್ಯಹರಣ ಹಾಗೂ ಮಗನ ಸಾವಿಗಾಗಿ, ಪೊಲೀಸರ ಮಾಲೀಕರಾದ ರಾಜ್ಯಸರ್ಕಾರದಿಂದ ಆ ಮಹಿಳೆಯರಿಗೆ ಪರಿಹಾರ ಧನ ಕೊಡಿಸಿತು.

ವಕೀಲರೊಬ್ಬರು ದಾಖಲು ಮಾಡಿದ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಯಲ್ಲಿ. ಸರ್ವೋಚ್ಚ ನ್ಯಾಯಾಲಯವು ಒತ್ತಾಯದ ವೇಶ್ಯಾವೃತ್ತಿಯ ಸಂಬಂಧವಾಗಿ, ದೇವದಾಸಿ ಜೋಗಿತಿ ಪದ್ಧತಿಯ ಕುರಿತು ರಾಜ್ಯ ಸರ್ಕಾರಗಳಿಗೆ ಹಲವಾರು ನಿರ್ದೇಶನಗಳನ್ನು ನೀಡಿ ಸಲಹಾ ಸಮಿತಿಗಳನ್ನು, ಅಂತಹ ಮಹಿಳೆಯರಿಗಾಗಿ ಪುನರ್ವಸತಿ ಕೇಂದ್ರಗಳನ್ನೂ ರಚಿಸಲು ಸೂಚಿಸಿದ್ದೂ ಅಲ್ಲದೆ, ಈ ಸಲಹೆಗಳ ಅನುಷ್ಠಾನಕ್ಕಾಗಿ ಸಮಿತಿಗಳನ್ನು ರಚಿಸಲೂ ಆದೇಶ ನೀಡಿತು.

ಮತ್ತೊಂದು ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ಅತ್ಯಾಚಾರಕ್ಕೆ ಒಳಗಾದ ಬುಡಕಟ್ಟು ಜನಾಂಗದ ಮಹಿಳೆಗೆ ಪರಿಹಾರ ಧನ ಕೊಡಿಸಿತು. ಅದೇ ರೀತಿ, ಅತ್ಯಾಚಾರಕ್ಕೆ ಬಲಿಯಾದ ಇಬ್ಬರು ಕ್ರಿಶ್ಚಿಯನ್ ಸನ್ಯಾಸಿನಿಯರಿಗೆ ಸರ್ಕಾರದಿಂದ ಪರಿಹಾರ ಧನ ಕೊಡಿಸಿದ್ದೂ ಅಲ್ಲದೆ ತನಿಖೆಯನ್ನು ಸಿ. ಬಿ. ಐ.ಗೆ ಒಪ್ಪಿಸಿತು. ಮನೆಗೆಲಸ ಮಾಡುವ ಮಹಿಳೆಯರು ಲೈಂಗಿಕ ಹಿಂಸೆಗೆ ಗುರಿಯಾದರೂ ತಾವಿರುವ ಸಂದರ್ಭದಲ್ಲಿ ದೂರು




ಇವನಾರು ಗೊತ್ತೇನು ಹೆಸರು ತಿಮ್ಮಪ್ಪ
ಮತ್ತಿನ್ನು ಎಲ್ಲರಿಗೆ ಇವನಂತೆ ಅಪ್ಪ
ಇಂದಿವನ ಮಕ್ಕಳಿಗೆ ಸಿಗದಿರಲು ಊಟ
ತಾ ಧರಿಸಿ ಮೆರೆಯುತಿಹ ವಜ್ರಕಿರೀಟ. -ವಿಡಂಬಾರಿ

ಕೊಡಲಾರದಂತಹ ಪ್ರಕರಣದಲ್ಲಿ, ಅಂತಹ ಮಹಿಳೆಯರ ಪರವಾಗಿ ಮಹಿಳಾ ಸಂಸ್ಥೆಯು ನ್ಯಾಯಾಲಯಕ್ಕೆ ಬಂದಾಗ ಸರ್ವೋಚ್ಚ ನ್ಯಾಯಾಲಯವು ಅತ್ಯಾಚಾರಕ್ಕೆ ಒಳಗಾದ ಇಂತಹ ಮಹಿಳೆಯರಿಗೆ ಕಾನೂನಿನ ನೆರವು ನೀಡಲು ಎಂಟು ಮಾರ್ಗದರ್ಶಿ ಸೂತ್ರಗಳನ್ನು ಹಾಕಿಕೊಟ್ಟಿತು. ರಾಷ್ಟ್ರೀಯ ಮಹಿಳಾ ಆಯೋಗವು ಅದರ ಆಧಾರದ ಮೇಲೆ ಯೋಜನೆಯನ್ನು ರೂಪಿಸಬೇಕೆಂದೂ, ಸರ್ಕಾರವು ಅದನ್ನು ಪರಿಶೀಲಿಸಿ ಆದಷ್ಟು ಜಾಗ್ರತೆ ಅನುಷ್ಠಾನಕ್ಕೆ ತರಬೇಕೆಂದೂ ಆದೇಶ ನೀಡಿತು.

ಇತ್ತೀಚಿನ ಮುಖ್ಯವಾದ ಪ್ರಕರಣವೊಂದರಲ್ಲಿ ಸರ್ವೋಚ್ಚ ನ್ಯಾಯಾಲಯವು ಕೆಲಸ ಮಾಡುವ ಜಾಗಗಳಲ್ಲಿ ಉದ್ಯೋಗಸ್ಥ ಮಹಿಳೆಯರಿಗೆ ಆಗುತ್ತಿರುವ ಲೈಂಗಿಕ ಕಿರುಕುಳದಿಂದ ಅವರನ್ನು ರಕ್ಷಿಸಲು, ಅದರ ಬಗ್ಗೆ ವಿಚಾರಣೆ ನಡೆಸಲು, ತಪ್ಪಿತಸ್ಥರಿಗೆ ಸೂಕ್ತ ಶಿಕ್ಷೆ ವಿಧಿಸಲು ವಿವರವಾದ ಮಾರ್ಗದರ್ಶಿ ಸೂತ್ರಗಳನ್ನು ಹಾಕಿಕೊಟ್ಟಿದೆ. ಕೆಲಸ ಮಾಡುವ ಸಂಸ್ಥೆಗಳಲ್ಲಿಯೇ ಸಮಿತಿಗಳನ್ನು ರಚಿಸಿ, ವಿಚಾರಣೆ ನಡೆಸಬಹುದಾದ ಬದಲಿ ವ್ಯವಸ್ಥೆಯನ್ನು ರೂಪಿಸಿಕೊಟ್ಟಿದೆ. ಈ ತೀರ್ಪು ಹೊರಬಂದು ಎರಡು ವರ್ಷಗಳು ಕಳೆದಿದ್ದರೂ ಇನ್ನೂ ಹಲವಾರು ಸಂಸ್ಥೆಗಳಲ್ಲಿ - ಕಚೇರಿಗಳಲ್ಲಿ ಸಮಿತಿಗಳ ರಚನೆಯಾಗಿಲ್ಲ; ಸಮಿತಿಗಳು ಇದ್ದ ಕಡೆಯೂ ಅಲ್ಲಿಯ ಮಹಿಳಾ ಉದ್ಯೋಗಿಗಳಿಗೆ ಅದರ ಅರಿವಿಲ್ಲ, ಯಾವುದು 'ಲೈಂಗಿಕ ಕಿರುಕುಳ' ವಾಗುತ್ತದೆ ಎನ್ನುವುದರ ಬಗ್ಗೆ ತಿಳಿಸಿಕೊಡುವ ವ್ಯವಸ್ಥೆಯೂ ಇಲ್ಲ.

ತಂದೆ ಬದುಕಿರುವವರೆಗೆ ಅವನೇ ತನ್ನ ಅಪ್ರಾಪ್ತ ವಯಸ್ಕ ಮಕ್ಕಳ ಪಾಲಕನಾಗಿರುತ್ತಾನೆ. ಅವನ ನಂತರವಷ್ಟೇ ಮಗುವಿನ ತಾಯಿ ಪಾಲಕಳಾಗುತ್ತಾಳೆ ಎಂಬ ಕಾನೂನನ್ನು ಇತ್ತೀಚಿನ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಅರ್ಥೈಸುತ್ತಾ 'ತಂದೆಯ ನಂತರ' ಎನ್ನುವುದನ್ನು 'ತಂದೆಯ ಅನುಪಸ್ಥಿತಿಯಲ್ಲಿ' ಎನ್ನುವ ಹೊಸ ಅರ್ಥವನ್ನು ನೀಡಿ ತಂದೆ ಬದುಕಿದ್ದಾಗಲೂ ತಾಯಿ ಪಾಲಕಳಾಗಿ ಕರ್ತವ್ಯ ನಿರ್ವಹಿಸಬಹುದಾದ ಸಂದರ್ಭಗಳನ್ನು ಸೂಚಿಸಿದೆ.

ಮೇಲಿನ ಎರಡೂ ಮೊಕದ್ದಮೆಗಳು ಕಾನೂನು ಇಲ್ಲದಿರುವ ಸಂದರ್ಭಗಳಲ್ಲಿ ಸರ್ವೋಚ್ಚ ನ್ಯಾಯಾಲಯ ಕಾನೂನನ್ನು ರೂಪಿಸಿಕೊಟ್ಟಿರುವುದರ ಉದಾಹರಣೆಯಾಗಿದೆ. ಅಲ್ಲದೆ ಮಹಿಳಾಪರ ತೀರ್ಪು ನೀಡುವಲ್ಲಿ ನ್ಯಾಯಾಲಯ ಸಂವಿಧಾನದ ಮೂಲಭೂತ ಹಕ್ಕುಗಳನ್ನಲ್ಲದೆ ಮಾನವ ಹಕ್ಕುಗಳ ಘೋಷಣೆಯನ್ನು, ೧೯೭೯ರ ಮಹಿಳೆಯರ ವಿರುದ್ಧದ ಎಲ್ಲಾ ರೂಪದ ಪಕ್ಷಪಾತ ಧೋರಣೆಯ ನಿರ್ಮೂಲನೆಯ ಅಂತರರಾಷ್ಟ್ರೀಯ ಒಪ್ಪಂದವನ್ನು, ಮತ್ತಿತರ ಅಂತರರಾಷ್ಟ್ರೀಯ ಒಪ್ಪಂದಗಳನ್ನು ಬಳಸಿಕೊಂಡಿರುವುದು ಇದರ ವಿಶೇಷತೆಯಾಗಿದೆ.

ಇಂತಹ ಹಲವಾರು ತೀರ್ಪುಗಳ ಮೂಲಕ ಇರುವ ಕಾನೂನುಗಳು ಹೊಸ ಅರ್ಥವನ್ನು ಪಡೆಯುತ್ತಿವೆ. ಆದರೆ, ಇನ್ನೂ ಆಗಬೇಕಾದ ಕಾನೂನಿನ ತಿದ್ದುಪಡಿಗಳು ಹಲವಾರು ಇವೆ. ಇರುವ ಕಾನೂನುಗಳ ಅನುಷ್ಠಾನ, ಜಾರಿ ಸರಿಯಾಗಿ ಆಗಬೇಕಿದೆ. ಆದರೆ ಕೇವಲ ನ್ಯಾಯಾಲಯಗಳಿಂದ, ಹೊಸ ಕಾನೂನುಗಳಿಂದ, ಇರುವ ಕಾನೂನುಗಳ ತಿದ್ದುಪಡಿಗಳಿಂದ ಮಾತ್ರ ಮಹಿಳೆಯರ ಸ್ಥಿತಿ-ಗತಿಗಳ ಸುಧಾರಣೆಯಾಗಲಾರದು. ಬದಲಾವಣೆಗಳನ್ನು ಒಪ್ಪಿಕೊಳ್ಳುವ ಮನಸ್ಸುಗಳ ನಿರ್ಮಾಣವಾಗಬೇಕಿದೆ. ಮೂಲಭೂತ ಸಮಸ್ಯೆ ಇರುವುದು ಮನಸ್ಸುಗಳಲ್ಲಿ, ವಿಚಾರಗಳಲ್ಲಿ, ಆಚರಣೆಯಲ್ಲಿ, ನಂಬಿಕೆಗಳಲ್ಲಿ. ಈ ಕ್ಷೇತ್ರದಲ್ಲಿ ಮಾಡಬೇಕಾದ ಕೆಲಸ ಅಪಾರವಾಗಿದೆ.

**ಶ್ರೀಮತಿ ಹೇಮಲತಾ ಮಹಿಷಿ**
'ಶಶಿಕಿರಣ್' ನಂ.೨೧೯, ೧೮ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು-೫೬೦ ೦೫೫

---

*(೬ನೇ ಪುಟದಿಂದ)*

ಮಾಡಿದಾಗ ಕೂಲಿ ಕೊಡುವುದು ವ್ಯಾವಹಾರಿಕವಾಗಿ ಕಷ್ಟವಾಗುತ್ತದೆ ; ಭಾವನಾತ್ಮಕವಾಗಿ ಹಿಂಸೆಯಾಗುತ್ತದೆ.

ಹೀಗಿರುವಾಗ ಮನೆಗೆಲಸದ ಹೊರೆಯಿಂದ ಹೆಂಗಸರಿಗೆ ಬಿಡುಗಡೆಯೇ ಇಲ್ಲವೆ? ವಿಶ್ವ ಮಹಿಳಾ ಸಮ್ಮೇಳನದಲ್ಲಿ ಮಹಿಳೆಯರ ಗೃಹಕೃತ್ಯದ ದುಡಿಮೆಗೆ ಕೂಲಿ ಕೊಡಬೇಕೆಂಬ ವಾದವನ್ನು ತಿರಸ್ಕರಿಸಿದ ದೇವಕಿ ಜೈನ್ ಅಭಿಪ್ರಾಯ ಗಮನಾರ್ಹವಾದದ್ದು :

''ಅಭಿವೃದ್ಧಿಶೀಲ ರಾಷ್ಟ್ರಗಳ ಬಡಮಹಿಳೆ ಒಂದು ಬಿಂದಿಗೆ ನೀರು ತರಲು ಆರು ಗಂಟೆ ತೆಗೆದುಕೊಳ್ಳುತ್ತಾಳೆಂದುಕೊಳ್ಳಿ. ಅದಕ್ಕೆ ಅವಳಿಗೆ ಎರಡೇ ಗಂಟೆ ಸಾಕಾಗುವಂತೆ ಮಾಡಿದರೆ ಉಳಿದ ಸಮಯವನ್ನು ಅವಳು ಹೆಚ್ಚು ಕೂಲಿ ಪಡೆಯಲು ತೊಡಗಿಸುತ್ತಾಳೆ. ಬಹಳಷ್ಟು ಮಹಿಳೆಯರು ವೇತನ ಸಹಿತ ಮತ್ತು ವೇತನ ರಹಿತ ದುಡಿಮೆ ಮಾಡುತ್ತಿದ್ದಾರೆ. ನಮಗೆ ಈಗ ಅಗತ್ಯವಾಗಿರುವುದು ಮನೆಗೆಲಸವನ್ನು ಹಗುರ ಮಾಡುವ ವಿಧಾನ; ಮೂಲಭೂತ ಅಗತ್ಯಗಳು ಮೂಲಭೂತ ಹಕ್ಕಾಗುವಂತೆ ಹಾಗೂ ಈ ಕುಟುಂಬ ಸೇವೆ ಬಂಡವಾಳವಾಗಿ ಪರಿಣಮಿಸುವ ವ್ಯವಸ್ಥೆ''. ಇದು ಅಕ್ಷರಶಃ ಸತ್ಯ. ಗಂಟೆಗಟ್ಟಲೆ ಕ್ಯೂ ನಿಂತು ತಮ್ಮ ಅಮೂಲ್ಯ ಸಮಯವನ್ನು ಸೀಮೆಎಣ್ಣೆ ಪಡೆಯುವುದಕ್ಕಾಗಿ ವಿನಿಯೋಗಿಸುವ ಬಹು ಮಂದಿಯಲ್ಲಿ ಮಹಿಳೆಯರೇ ಹೆಚ್ಚು. ದಿನಸಿ ಅಂಗಡಿಯಲ್ಲಿ ದಿನಸಿ ದೊರೆಯುವಂತೆ ಸೀಮೆ ಎಣ್ಣೆಯೂ ದೊರಕುವಂತಹ ವಾತಾವರಣ ಸೃಷ್ಟಿಸಿಯಾದಾಗ ಮಹಿಳೆಯರು ತಮ್ಮ ಸಮಯವನ್ನು ಉತ್ಪಾದನಾ ಕಾರ್ಯದಲ್ಲಿ ತೊಡಗಿಸಬಹುದು. ಇದರ ಜೊತೆ ಜೊತೆಯಲ್ಲೇ ಸ್ತ್ರೀ ಪುರುಷರಿಬ್ಬರೂ ಮನೆಗೆಲಸವನ್ನು ಸಮ ಸಮವಾಗಿ ಹಂಚಿಕೊಳ್ಳಬಲ್ಲಂತಹ ಮಾನಸಿಕ ಸಿದ್ಧತೆಯನ್ನು, ಅದಕ್ಕೆ ತಕ್ಕ ವಾತಾವರಣವನ್ನು ರೂಪಿಸುವ ಕೆಲಸ ಆಗಬೇಕಾಗಿದೆ. ಶತಮಾನಗಳಿಂದಲೂ ಮಾನಸಿಕವಾಗಿಯೂ, ದೈಹಿಕವಾಗಿಯೂ ಗೃಹಚಾಕರಿಗೆ ತಮ್ಮನ್ನು ಒಗ್ಗಿಸಿಕೊಳ್ಳದ ಪುರುಷ ಸಮುದಾಯವನ್ನು ಈ ದಿಕ್ಕಿನತ್ತ ಪರಿವರ್ತಿಸುವ ಕೆಲಸ ತುರ್ತಾಗಿ ಆಗಬೇಕಾಗಿದೆ.

ಮನೆಗೆಲಸಕ್ಕೆ ಕೂಲಿ ಕೊಡಿ ಎಂದು ಕೇಳುವುದು, ಇಲ್ಲವೆ ಮನೆಯಲ್ಲಿರುವವರೆಲ್ಲಾ ಎಲ್ಲಾ ಕೆಲಸ ಮಾಡಿ ಎಂದು ವಿಧಿಸುವುದು ಘೋಷಣೆಯಾಗಿ ಆಕರ್ಷಕವಾಗಬಹುದಾದರೂ ವಸ್ತುಸ್ಥಿತಿ ಘೋಷಣೆಯಷ್ಟು ಸರಳವೂ ಅಲ್ಲ, ಸುಲಭವೂ ಅಲ್ಲ. ಗೃಹಕೃತ್ಯದ ಚಾಕರಿಯೊಂದಿಗೆ ಹೆಣ್ಣಿನ ಸಂಬಂಧ ಸಾಂಪ್ರದಾಯಿಕವಾಗಿ ರೂಢಿಗತವಾಗಿ ಸ್ಥಿರಪಟ್ಟಿರುವಾಗ ಈ ಮೌಲ್ಯಗಳು ಬದಲಾದರೆ ಗಂಡಸಿನ 'ಅಹಂ'ಗೆ ಧಕ್ಕೆಯಾಗಬಹುದು. ಹಾಗೆಂದರೆ ಗಂಡಸು ಗೃಹಕೃತ್ಯದ ಜವಾಬ್ದಾರಿಗಳನ್ನು ಹಂಚಿಕೊಳ್ಳುವುದಿಲ್ಲವೆಂದೇನೂ ಅಲ್ಲ. ಇಂತಹವರ ಸಂಖ್ಯೆ ಮತ್ತು ಇಂತಹ ದೃಷ್ಟಿಕೋನ ಸಮಾಜದಲ್ಲಿ ತುಂಬಾ ಕಮ್ಮಿ. ಆಧುನಿಕ ಜಗತ್ತಿನ ತಾಂತ್ರಿಕ ಸಲಕರಣೆಗಳು ಗೃಹಕೃತ್ಯಗಳನ್ನು ಸರಳಗೊಳಿಸಿವೆ. ಮಿಕ್ಸಿ, ವಾಷಿಂಗ್ ಮೆಷಿನ್, ವ್ಯಾಕ್ಯೂಮ್ ಕ್ಲೀನರ್......... ಮುಂತಾದವುಗಳಿಂದ ಪುರುಷ ಸಮುದಾಯವು ಗೃಹಕೃತ್ಯಕ್ಕೆ ಕೈ ಹಾಕುತ್ತಿದೆ. ಆದರೆ ಇವು ಎಷ್ಟು ಕುಟುಂಬಗಳಿಗೆ ಲಭ್ಯ? ಪುರುಷರಿಗೇ ಸವಾಲೆಸೆಯುವಂತೆ ಕೆಲವು ಉದ್ಯೋಗಗಳಲ್ಲಿ ಮಿಂಚುತ್ತಿರುವ ಮಹಿಳಾ ಪೊಲೀಸರು, ಪತ್ರಕರ್ತೆಯರು, ಬಸ್‌ಗಳ ನಿರ್ವಾಹಕಿಯರು, ಗಗನ ಸಖಿಯರು, ಮಹಿಳಾ ಇಂಜಿನೀಯರುಗಳು, ವೈದ್ಯೆಯರು ಮತ್ತು ರಾಜಕೀಯ ಕಾರ್ಯಕರ್ತೆಯರು ಮನೆಗೆಲಸವನ್ನು ಸಾಂಪ್ರದಾಯಿಕ ಶೈಲಿಯಲ್ಲಿ ಮಾಡಲು ಸಾಧ್ಯವೇ ಇಲ್ಲ. ಹೀಗೆ ಬದಲಾಗುತ್ತಿರುವ ಸಾಮಾಜಿಕ ಪರಿಸ್ಥಿತಿಯಲ್ಲಿ ಮುಂದುವರಿದ ಮಹಿಳೆಯರು ರೂಢಿಗತ ಮೌಲ್ಯಗಳಿಗೆ ಶಾಕ್ ಟ್ರೀಟ್‌ಮೆಂಟ್ ಕೊಟ್ಟಿದ್ದಾರೆ. ಇಂತಹ ಬದಲಾದ ಸಮಾಜದಲ್ಲಿ ''ದುಡಿಮೆಯು ಹೆಣ್ಣಿನ ಮೂಲಭೂತ ಹಕ್ಕು'' ಎಂಬಂತಹ ತಿಳುವಳಿಕೆ ಮತ್ತು ಅಂತಹ ಹಕ್ಕಿಗಾಗಿ ಹೋರಾಟ ನಡೆದರೆ ಬದಲಾವಣೆಯ ದಾರಿ ಸುಗಮವಾಗುತ್ತದೆ.

''ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆ ಹೊಂದುವಂತಾಗಬೇಕು, ಮತ್ತು ಈ ಮಹಿಳೆಯರು ಅಡಿಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲೇ ಮರುಳಾಗಿ, ಅಪಮಾನಕ್ಕೆ ಗುರಿಯಾಗುವಂತಿದ್ದು, ನಿರಂತರ ದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮ ಚಾಕರಿಯಿಂದ ಮುಕ್ತರಾಗಬೇಕಾದದ್ದು ಅತ್ಯವಶ್ಯಕ '' ಎಂದ ಲೆನಿನ್‌ರ ಮಾತುಗಳು ಮಹಿಳೆಯರ ವಿಮೋಚನೆಯೆಡೆಗಿನ ಹೆಜ್ಜೆಗಳನ್ನು ತೋರಿಸುತ್ತವೆ. ಗೃಹಕೃತ್ಯದ ದಾಸ್ಯದಿಂದ ಹೊರಗೆ ಬಂದು ಸಾಮಾಜಿಕ ಉತ್ಪಾದನೆಯಲ್ಲಿ ಪುರುಷರೊಂದಿಗೆ ಸಮ ಸಮವಾಗಿ ಹಜ್ಜೆ ಹಾಕಬೇಕಿದೆ. ಇಂದು ಹೆಣ್ಣು ತನ್ನ ಶ್ರಮ ಶಕ್ತಿಯ ವ್ಯಾಖ್ಯಾನವನ್ನು, ಸಾಧ್ಯತೆಯನ್ನು ಮತ್ತು ಮೌಲಿಕತೆಯನ್ನು ತಾನೇ ನಿರ್ವಹಿಸಿಕೊಳ್ಳಬೇಕಿದೆ.

**ಡಾ|| ಎನ್. ಗಾಯತ್ರಿ**
೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ, ಬೆಂಗಳೂರು-೫೬೦ ೦೫೫

# ಮಹಿಳಾ ಮೀಸಲಾತಿ ಮಸೂದೆ ಅವಶ್ಯಕವೆ?

ನಮ್ಮದು ಪುರುಷ ಪ್ರಧಾನ ಸಮಾಜ. ಮಹಿಳೆ ಕೇವಲ ''ಮಕ್ಕಳು ಹೆರುವ ಯಂತ್ರ'' ಹಾಗೂ ಆಕೆಯ ಪ್ರಪಂಚ ನಾಲ್ಕು ಗೋಡೆಯ ಅಡುಗೆಮನೆಗೆ ಮಾತ್ರ ಸೀಮಿತ. ಇದು ನಮ್ಮ ಸಮಾಜವು ಬೆಳೆಸಿಕೊಂಡುಬಂದ ಮನೋಭಾವನೆ. ಆದರೆ ಮಹಿಳೆಯರಲ್ಲಿ ಜಾಗೃತಿ ಮೂಡಿದ ಮೇಲೆ ಗೋಡೆಗಳ ಹೊರಗೆ ಬಂದು ಅವರು ಅನೇಕ ಕ್ಷೇತ್ರಗಳಲ್ಲಿ ದುಡಿಯುತ್ತಾ ತಾವು ಯಾವ ವಿಷಯದಲ್ಲೂ ಪುರುಷರಿಗಿಂತ ಕಡಿಮೆ ಇಲ್ಲ ಎಂಬುದನ್ನು ಸಾಬೀತುಪಡಿಸಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರ ಸ್ಥಿತಿ ಸುಧಾರಿಸಬೇಕೆಂದರೆ ಕೇವಲ ಇಷ್ಟಾದರೆ ಸಾಲದು. ಅವರು ಕ್ರಮಿಸಬೇಕಾಗಿರುವ ಹಾದಿ ಇನ್ನೂ ಬಹಳಷ್ಟಿದೆ ಹಾಗೂ ದುರ್ಗಮವಾಗಿದೆ.

ನಮ್ಮ ದೇಶದಲ್ಲಿ ಒಟ್ಟು ಜನಸಂಖ್ಯೆಯ ಸುಮಾರು ಅರ್ಧದಷ್ಟು ಮಹಿಳೆಯರಿದ್ದಾರೆ. ಆದರೆ ದೇಶದ ಪ್ರಜೆಗಳನ್ನು ಪ್ರತಿನಿಧಿಸುವ ಲೋಕಸಭೆಯಲ್ಲಿ ಮಹಿಳೆಯರು ತಮ್ಮ ಸಂಖ್ಯೆಗೆ ಅನುಗುಣವಾಗಿ ಪ್ರತಿನಿಧಿಸಲ್ಪಟ್ಟಿಲ್ಲ. ಶೇಕಡಾ ೫೦ರಷ್ಟಿರಬೇಕಿದ್ದ ಮಹಿಳಾ ಪ್ರಾತಿನಿಧ್ಯ ಎಂದೂ ಶೇಕಡಾ ೮ನ್ನು ಮೀರಿಲ್ಲ. ನಮ್ಮ ರಾಜಕೀಯ ರಂಗದಲ್ಲಿ ಕಾಣಸಿಗುವ ಮಹಿಳೆಯರು ಬೆರಳೆಣಿಕೆಯಷ್ಟು ಮಾತ್ರ. ಪ್ರಾತಿನಿಧ್ಯ ಅಸಮತೋಲನೆಯನ್ನು ಸರಿಪಡಿಸುವ, ಮಹಿಳೆಯರ ಸ್ಥಿತಿಯನ್ನು ಸುಧಾರಿಸುವ ಬಗ್ಗೆ ಪ್ರತಿಯೊಂದು ರಾಜಕೀಯ ಪಕ್ಷದ ನೇತಾರರೂ ವೇದಿಕೆಯ ಮೇಲೆ ನಿಂತು ಗಂಟೆಗಟ್ಟಲೆ ಮಾತನಾಡುತ್ತಾರೆ. ಆದರೆ ಆಚರಣೆಯ ವಿಷಯಕ್ಕೆ ಬಂದಾಗ ಬಣ್ಣ ಬದಲಾಯಿಸುವ ಗೋಸುಂಬೆ ತರಹ ವರ್ತಿಸುತ್ತಾರೆ.

ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಶೇಕಡಾ ೩೩ರಷ್ಟು ಮೀಸಲಾತಿ ದೊರಕಿಸಿಕೊಡುವ ಮಹಿಳಾ ಮೀಸಲಾತಿ ಮಸೂದೆಯನ್ನು ಈಚಿನ ಪಾರ್ಲಿಮೆಂಟ್ ಅಧಿವೇಶನದಲ್ಲಿ ಮಂಡಿಸಲಾಯಿತು. ಸಮತೂಕದ ಪ್ರಾತಿನಿಧ್ಯ ಒಂದು ಆರೋಗ್ಯಕರ ಪ್ರಜಾಪ್ರಭುತ್ವದ ಲಕ್ಷಣವೆಂದು ಘೋಷಿಸುವ ಪಕ್ಷಗಳೆಲ್ಲಾ ಮಸೂದೆಯನ್ನು ಬೆಂಬಲಿಸುತ್ತವೆಯೆ ? ಅದಕ್ಕೆ ಉತ್ತರ ಕೊಡುವುದಕ್ಕೆ ಪೂರ್ವಭಾವಿಯಾಗಿ ಮಹಿಳಾ ಪ್ರಾತಿನಿಧ್ಯದಲ್ಲಿ ಉಂಟಾಗಿದ್ದ ಅಸಮತೋಲನವನ್ನು ಸರಿದೂಗಿಸಲು ನಿಜವಾಗಿಯೂ ಮಹಿಳಾ ಮೀಸಲಾತಿ ಮಸೂದೆ ಅವಶ್ಯಕವಾಗಿತ್ತೆ ಎಂಬ ಪ್ರಶ್ನೆಯೂ ಇದೆ.



ನಮ್ಮ ರಾಜಕೀಯ ವ್ಯವಸ್ಥೆ ಹಾಗೂ ರಾಜಕಾರಣಿಗಳ ಮನಸ್ಸುಗಳ ಒಳಹೊಕ್ಕು ನೋಡಿದರೆ ಮಹಿಳಾ ಮೀಸಲಾತಿ ಅತ್ಯವಶ್ಯಕ ಎಂಬುದು ಮನವರಿಕೆಯಾಗುತ್ತದೆ. ಅದಿಲ್ಲದೆ ಮಹಿಳಾ ಪ್ರಾತಿನಿಧ್ಯದ ಅಸಮತೋಲನೆಯನ್ನು ಸರಿದೂಗಿಸಲು ಇನ್ನೂ ಐವತ್ತು ವರ್ಷಗಳವರೆಗೆ ಮಹಿಳೆಯರು ಹೋರಾಡಿದರೂ ಸಾಧ್ಯವಾಗದಿರಬಹುದು. ನಮ್ಮ ದೇಶದಲ್ಲಿ ಯಾವ ಸಂದರ್ಭದಲ್ಲೂ ಮಹಿಳೆಯರು ರಾಜಕೀಯವಾಗಿ ಜಾಗೃತರಾಗಿ ವೋಟ್ ಬ್ಯಾಂಕುಗಳಾಗಿ ಬೆಳೆಯಲಿಲ್ಲ. ವಿವಿಧ ಜಾತಿಗಳ ಹಾಗೂ ಕೋಮುಗಳ ವೋಟ್ ಬ್ಯಾಂಕುಗಳಂತೆ ಮಹಿಳಾ ವೋಟ್ ಬ್ಯಾಂಕ್ ಎಂಬುದೊಂದು ಇದ್ದಿದ್ದರೆ ಪ್ರಾತಿನಿಧ್ಯ ಅಸಮತೋಲನೆಯ ಸಮಸ್ಯೆ ಇರುತ್ತಿರಲಿಲ್ಲ. ರಾಜಕೀಯ ರಂಗದಲ್ಲಿ ಮಹಿಳೆಯರಿಗೆ ಸಾಕಷ್ಟು ಅವಕಾಶಗಳು ಸಿಗಬೇಕಾಗಿದ್ದರೆ ಪುರುಷ ರಾಜಕಾರಣಿಗಳ ಪೂರ್ವಗ್ರಹಪೀಡಿತ ನಿಲುವುಗಳು ಬದಲಾಗಬೇಕು. ಸದ್ಯದಲ್ಲಿ ಅದು ಪವಾಡದಿಂದ ಮಾತ್ರ ಸಾಧ್ಯ !



ಪ್ರತಿಯೊಂದು ಪಕ್ಷದಲ್ಲಿ ಅಭ್ಯರ್ಥಿಗಳ ಆಯ್ಕೆ ಸಮಿತಿಯಲ್ಲಿ ಬಹುತೇಕ ಪುರುಷ ಸದಸ್ಯರೇ ಇರುತ್ತಾರೆ. ಚುನಾವಣಾ ಕಣಕ್ಕೆ ಮಹಿಳಾ ಅಭ್ಯರ್ಥಿಯನ್ನು ಇಳಿಸುವ ವಿಷಯ ಬಂದಾಗ ಅವರು ಗೆಲ್ಲುವುದಿಲ್ಲ ಎಂಬ ಕಾರಣ ನೀಡಿ ಅವಕಾಶ ವಂಚಿತರನ್ನಾಗಿ ಮಾಡುವ ಹುನ್ನಾರ ನಡೆಸುತ್ತಾರೆ. ಹಾಗಾದರೆ ಆಯ್ಕೆ ಸಮಿತಿಯವರು ಆಯ್ಕೆ ಮಾಡುವ ಅಭ್ಯರ್ಥಿಗಳೆಲ್ಲಾ ಗೆಲ್ಲುವ ಕುದುರೆಗಳೇ ? ಯಶಸ್ಸಿನ ಪ್ರಮಾಣ ನೋಡಿದರೆ ಮಹಿಳಾ ಅಭ್ಯರ್ಥಿಗಳದ್ದೇ ಹೆಚ್ಚು. ೧೯೯೮ರ ಚುನಾವಣೆಯಲ್ಲಿ ಮಹಿಳಾ ಅಭ್ಯರ್ಥಿಗಳ ಯಶಸ್ಸಿನ ಪ್ರಮಾಣ ಶೇಕಡಾ ೬.೭ ಹಾಗೂ ಪುರುಷ ಅಭ್ಯರ್ಥಿಗಳದ್ದು ಶೇಕಡಾ ೩.೮ ! ವಾಸ್ತವಿಕತೆ ಹೀಗಿದ್ದರೂ ಸಹ ಮಹಿಳಾ ಅಭ್ಯರ್ಥಿಗಳಿಗೆ ಹೆಚ್ಚಿನ ಮನ್ನಣೆಯೇ ಸಿಗುವುದಿಲ್ಲ. ೧೯೯೮ರ ಚುನಾವಣೆಯಲ್ಲಿ ಕಲ್ಪನಾದೇವಿ ಎಂಬ ಮಹಿಳಾ ಅಭ್ಯರ್ಥಿ ಕಾಂಗ್ರೆಸ್ ಪಕ್ಷದಿಂದ ಆಂಧ್ರಪ್ರದೇಶದ ವಾರಂಗಲ್ ಕ್ಷೇತ್ರದಲ್ಲಿ ಸ್ಪರ್ಧಿಸಿ ೨೦೦೦ ಮತಗಳ ಅಂತರದಿಂದ ಸೋತಿದ್ದರು. ಅವರೇ ಪುನಃ ಅದೇ ಕ್ಷೇತ್ರದಿಂದ ಸ್ಪರ್ಧಿಸಲು ಈ ಬಾರಿ ಟಿಕೇಟ್ ಕೇಳಿದಾಗ ಕಳೆದ ಬಾರಿಯ ಸೋಲನ್ನೇ ನೆಪ ಮಾಡಿ ಅವಕಾಶವನ್ನು ನಿರಾಕರಿಸಲಾಯಿತು. ಅವರ ಬದಲಿಗೆ ಪುರುಷ ಅಭ್ಯರ್ಥಿಯೊಬ್ಬನನ್ನು ಆಯ್ಕೆ ಮಾಡಿದ್ದರು. ಆತ ಕಳೆದ ಚುನಾವಣೆಯಲ್ಲಿ ಗೆಲ್ಲುವುದಿರಲಿ, ಠೇವಣಿಯನ್ನೂ ಉಳಿಸಿಕೊಳ್ಳಲು ವಿಫಲನಾಗಿದ್ದ! ಅದೃಷ್ಟವಶಾತ್ ಕಲ್ಪನಾದೇವಿಯ ಪರವಾಗಿ ಮಹಿಳಾ ಕಾಂಗ್ರೆಸ್‌ನವರು ಹೋರಾಡಿ ಅವರಿಗೇ ಟಿಕೇಟ್ ಸಿಗುವಂತೆ ನೋಡಿಕೊಂಡರು. ಈಬಾರಿಯ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷವು ತಾನು ಸ್ಪರ್ಧಿಸಿದ್ದ ಒಟ್ಟು ೪೪೨ ಸ್ಥಾನಗಳಲ್ಲಿ ಮಹಿಳಾ ಅಭ್ಯರ್ಥಿಗಳಿಗೆ ಅವಕಾಶ ನೀಡಿದ್ದು ಕೇವಲ ೪೭ ಸ್ಥಾನಗಳಲ್ಲಿ; ಬಿ.ಜೆ.ಪಿ. ಒಟ್ಟು ೨೪೮ ಸ್ಥಾನಗಳಲ್ಲಿ ಕೇವಲ ೨೯; ಸಿ.ಪಿ.ಐ.(ಎಮ್) ೭೭ ಸ್ಥಾನಗಳಲ್ಲಿ ಕೇವಲ ೪; ಸಿ.ಪಿ.ಐ. ೫೮ ಸ್ಥಾನಗಳಲ್ಲಿ ೪.

ಇಂಥ ಪರಿಸ್ಥಿತಿಯಲ್ಲೂ ಭಾರತದ ರಾಜಕೀಯದಲ್ಲಿ ಅನೇಕ ಮಹಿಳಾಮಣಿಗಳು ಮಿಂಚುತ್ತಿದ್ದಾರೆ. ಆದರೆ ವಿಷಾದನೀಯ ಸಂಗತಿ ಎಂದರೆ ಇಷ್ಟು ನಾಯಕಿಯರು ಇದ್ದರೂ ಸಹ ಲೋಕಸಭೆಯಲ್ಲಿ ಮಹಿಳಾ ಪ್ರತಿನಿಧಿಗಳ ಪ್ರಮಾಣ ಶೇಕಡಾ ೮ನ್ನು ಮೀರಿಲ್ಲ. ಕೆಲವು ನಾಯಕಿಯರು ತಮ್ಮ ಪಕ್ಷದ ಪ್ರಮುಖ ಸ್ಥಾನಗಳನ್ನು ಅಲಂಕರಿಸಿದ್ದರೂ ಇನ್ನೊಬ್ಬ ಮಹಿಳೆಯನ್ನು ಬೆಳೆಸಲಿಲ್ಲ. ಉದಾಹರಣೆಗೆ, ಜಯಲಲಿತಾ. ಆಕೆಯ ೧೫ ವರ್ಷಗಳ ನೇತೃತ್ವದಲ್ಲಿ ಅವರ ಪಕ್ಷದಿಂದ ಇನ್ನೊಬ್ಬ ಮಹಿಳೆ ಬೆಳಕಿಗೆ ಬಂದ ನಿದರ್ಶನವಿಲ್ಲ. ಅವರು ಬೆಳೆಸಿದ್ದು ಶಶಿಕಲಾ ನಟರಾಜ್‌ಳನ್ನು ಮಾತ್ರ ! ಮಾಯಾವತಿಯೂ ತನ್ನ ಆಶ್ರಯದಲ್ಲಿ ಇನ್ನೊಬ್ಬ ನಾಯಕಿಯನ್ನು ಅಭಿವೃದ್ಧಿಪಡಿಸಲಿಲ್ಲ. ಈ ಬಗ್ಗೆ ಅವರೆಲ್ಲರ ಸಮಜಾಯಿಷಿ ಏನಿರಬಹುದೋ ತಿಳಿಯದು.

ಮಹಿಳಾ ಮೀಸಲಾತಿ ಮಸೂದೆ ಅಂಗೀಕಾರವಾದಲ್ಲಿ ಪರಿಸ್ಥಿತಿ ಸಂಪೂರ್ಣ ಬದಲಾಗಲಿದೆ. ಮಹಿಳೆಯರ ಸಮಸ್ಯೆಗಳಿಗೆ ಸ್ಪಂದಿಸಿ, ಪರಿಹಾರ ಹುಡುಕುವ ಕಾಳಜಿ ಹೊಂದಿರುವ ಮಹಿಳೆಯರು ಲೋಕಸಭೆ ಹಾಗೂ ವಿಧಾನಸಭೆಯೊಳಗೆ ಪ್ರವೇಶಿಸಲಿ ಎಂಬುದು ಆರೋಗ್ಯವಂತ ಮನಸ್ಸುಳ್ಳವರ ಹಂಬಲ.

ಎ. ಜೆ. ಜಾವೀದ್
ಕೆನರಾ ಬ್ಯಾಂಕ್, ನುಗ್ಗೇಹಳ್ಳಿ - ೫೭೩ ೧೩೧, ಹಾಸನ ಜಿಲ್ಲೆ.

# ಮಹಿಳೆ, ಮಿದುಳು ಮತ್ತು ಪೂರ್ವಗ್ರಹ

ಮಹಿಳೆ ಮತ್ತು ಆಕೆಯ ಮಿದುಳು ಸದಾಕಾಲಕ್ಕೂ ಪುರುಷ ಕುತೂಹಲವನ್ನು ಕೆರಳಿಸಿದ ವಿಷಯವಾಗಿದೆ. ಇತ್ತೀಚೆಗೆ ಜಾನ್ ಹಾಪ್‌ಕಿನ್ಸ್ ವಿಶ್ವವಿದ್ಯಾಲಯದಲ್ಲಿ ಹದಿನೈದು ಪುರುಷ ಮತ್ತು ಮಹಿಳೆಯರ ಮಿದುಳಿನ ಸಂರಚನೆಯನ್ನು ಅಭ್ಯಾಸ ಮಾಡಿ ಕೆಲವು ತೀರ್ಮಾನಗಳಿಗೆ ಬರಲಾಯಿತೆಂದು ವರದಿಯಾಗಿದೆ. ಪುರುಷ ಮತ್ತು ಮಹಿಳಾ ಮಿದುಳಿನಲ್ಲಿ ಗಣನೀಯ ವ್ಯತ್ಯಾಸವಿದ್ದು, ಈ ಕಾರಣಕ್ಕಾಗಿಯೇ ಮಹಿಳೆಯರಿಗಿಂತ ಹೆಚ್ಚಾಗಿ ಪುರುಷರಲ್ಲಿ ವಿವೇಚನೆ, ವಿಶ್ಲೇಷಣೆ ಮತ್ತು ತಾರ್ಕಿಕ ಸಾಮರ್ಥ್ಯವಿದೆ ಎಂದು ಆ ಸಂಶೋಧಕರು ತಿಳಿಸಿದ್ದಾರೆ. ಜೊತೆಗೆ ಮಹಿಳೆಯ ಬಲಭಾಗದ ಮಿದುಳು ಪುರುಷನ ಬಲಭಾಗದ ಮಿದುಳಿಗಿಂತ ದೊಡ್ಡದಾಗಿರುತ್ತದೆ, ಹಾಗೆಂದೇ ಅವರು ಇನ್ನೊಬ್ಬರ ಭಾವನೆಗಳನ್ನು ತಟ್ಟನೆ ಅರ್ಥ ಮಾಡಿ ಕೊಳ್ಳಬಲ್ಲರು, ಆದರೆ ಪುರುಷರ ಎಡಭಾಗದ ಮಿದುಳು ಪ್ರಬಲವಾಗಿರುವುದರಿಂದ ಈ ಭಾಗದ ಮಿದುಳಿನ ಚಟುವಟಿಕೆಗಳಾದ ವಿವೇಚನೆ, ವಿಶ್ಲೇಷಣೆ, ತಾರ್ಕಿಕತೆ ಮೊದಲಾದವುಗಳಲ್ಲಿ ಪುರುಷರೇ ಮುಂದೆ ಎಂದು ಹೇಳಿದ್ದಾರೆಂದೂ ವರದಿಯಾಗಿದೆ. ವಿಜ್ಞಾನಿಗಳು ಇಷ್ಟು ಹೇಳಿದರೆ ಸಾಕು 'ನಮಗೆ ಮೊದಲೇ ಗೊತ್ತಿತ್ತು, ಹೆಂಗಸರ ಮಿದುಳು ಕಡಿಮೆ. ಇದು ಮಹಿಳೆಯರಿಗೆ ಅಪ್ರಿಯವಾದರೂ, ಸತ್ಯ' ಎಂದು ಘೋಷಿಸುವ ಕಾತುರದ ಅನೇಕರಿದ್ದಾರೆ. ಕಾರಣ ಹೊಸ ಸಹಸ್ರಮಾನದ ಹೊಸ್ತಿಲಲ್ಲಿಯೂ ಶತಶತಮಾನಗಳಿಂದ ಕಾಡಿದ ಪೂರ್ವಗ್ರಹದ ಚಿಂತನೆಗಳಿಂದೇನೂ ಮಹಿಳೆಯರಿಗೆ ಮುಕ್ತಿ ದೊರೆತಿಲ್ಲ.

ಮನುಷ್ಯನ ಮಿದುಳನ್ನು ಜಾತಿ, ಜನಾಂಗ, ಲಿಂಗಗಳ ಆಧಾರದ ಮೇಲೆ ವಿಂಗಡಿಸಿ, ತೂಗಿ ತೊನೆದು, ಅಳತೆ ಮಾಡಿ, ಆ ಮೂಲಕ ಮಾನವ ನಿರ್ಮಿತ ಅಸಮಾನತೆಯನ್ನು, ಸಾಮಾಜಿಕ ಸಾಂಸ್ಕೃತಿಕ ಕಾರಣದ ಅಸಮತೋಲನವನ್ನು ಪ್ರಕೃತಿ ಸಹಜವಾಗಿಸಿ, ಜೀವಶಾಸ್ತ್ರೀಯ ನೆಪಗಳನ್ನು ನೀಡಿ, ವೈಜ್ಞಾನಿಕ ಬಣ್ಣ ಬಳಿಯುವ ಪ್ರಯತ್ನಗಳು ಶತಮಾನಗಳಿಂದ ನಡೆದು ಬಂದಿವೆ. ಕಂಡ ಅಲ್ಪ ವ್ಯತ್ಯಾಸಗಳನ್ನು ಹೆಚ್ಚುಗಾರಿಕೆಯಾಗಿಸಿ, ಮೇಲು-ಕೀಳೆಂದು ವಿಂಗಡಿಸಿ, ಶೋಷಣೆಯ ಅಸ್ತ್ರವಾಗಿ ಬಳಸಿ, ಲಿಂಗ ತಾರತಮ್ಯ, ಜಾತಿವಾದ, ಜನಾಂಗವಾದಕ್ಕೆ ಸಮರ್ಥನೆಯಾಗಿ ಬಳಸಿದ ದುರಂತದ ಸಂದರ್ಭಗಳು ಚರಿತ್ರೆಯಲ್ಲಿ ಹೇರಳವಾಗಿ ಸಿಗುತ್ತವೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಬಹಳಷ್ಟು ವಿಜ್ಞಾನಿಗಳು ಗಂಡು ಹೆಣ್ಣಿನ ಮಿದುಳಿನ ರಚನೆಯಲ್ಲಿಯ ವ್ಯತ್ಯಾಸಗಳನ್ನು ಗುರುತಿಸಿ, ಆ ಮೂಲಕ ವಿಕಾಸದ ದಾರಿಯಲ್ಲಿ ಹೆಣ್ಣು, ಗಂಡುಗಳಿಗಿಂತ ಬಹಳ ಹಿಂದೆ ಉಳಿದಿದ್ದಾಳೆಂದು ಸಮರ್ಥಿಸಲು ಬಳಸಿದರು. ಆಕೆಯ ಮಿದುಳಿನ ರಚನೆಯ ವ್ಯತ್ಯಾಸಗಳಿಂದ ಆಕೆ ಕಡಿಮೆ ಬುದ್ಧಿವಂತಳೆಂದು ನಿರ್ಣಯಿಸಿಬಿಟ್ಟರು.

೧೮೬೧ ರಲ್ಲಿ ಪ್ರಸಿದ್ಧ ಫ್ರೆಂಚ್ ಮನಶಾಸ್ತ್ರಜ್ಞ ಪಾಲ್ ಬ್ರೋಕಾ, ಸತ್ತ ಗಂಡಸರ ಹಾಗೂ ಹೆಂಗಸರ ಮಿದುಳುಗಳನ್ನು ತೂಕ ಮಾಡಿ, ಹೆಂಗಸರ ಮಿದುಳು ಗಂಡಸರ ಮಿದುಳಿಗಿಂತ ಸರಾಸರಿ ೨೦೦ ಗ್ರಾಂ.ಗಳಷ್ಟು ಕಡಿಮೆ ತೂಗುತ್ತದೆಂದು ಹೇಳಿದ. ಆತನ ವಿದ್ಯಾರ್ಥಿಯೊಬ್ಬ ಗುರುವನ್ನೂ ಮೀರಿಸಿ 'ಹೆಂಗಸರ ಮಿದುಳಿನ ಅಳತೆ ಗೊರಿಲ್ಲಾ ಮಿದುಳಿಗೆ ಹತ್ತಿರವಾಗಿದೆ' ಎಂದು ಸಾರಿದ! ಆತ 'ಹೆಂಗಸರ ಮಿದುಳನ್ನು ಅಧ್ಯಯನ ಮಾಡಿರುವ ಮನಶ್ಶಾಸ್ತ್ರಜ್ಞರೆಲ್ಲರೂ, ಆಕೆಯ ಕೀಳು ವಿಕಾಸವನ್ನು ಗುರುತಿಸಿದ್ದಾರೆಂದೂ, ಹೆಣ್ಣಿನ ಬುದ್ಧಿಮಟ್ಟ ಒಂದು ಮಗುವಿನ ಬುದ್ಧಿಮಟ್ಟಕ್ಕೆ ಸಮನೆಂದೂ' ಸಾಧಿಸಿದ.



ಹತ್ತೊಂಬತ್ತನೆಯ ಶತಮಾನದ ವಿಜ್ಞಾನಿಗಳು 'ಬುದ್ಧಿವಂತಿಕೆ' ಮಿದುಳಿನ ಮುಂಭಾಗದಲ್ಲಿರುವುದಾಗಿ (frontal lobe) ಸಂಪೂರ್ಣ ನಂಬಿದ್ದರು. ಹಾಗೆಂದೇ ಯಾವ ಸಾಕ್ಷ್ಯಾಧಾರಗಳೂ ಇಲ್ಲದೆಯೇ ಹೆಂಗಸರ ಮಿದುಳಿನ ಮುಂಭಾಗ ಚಿಕ್ಕದಾಗಿರುವುದೆಂದೂ ನಂಬಿದರು. ೧೮೮೪ರಲ್ಲಿ ಪ್ರಕಟವಾದ ವೈಜ್ಞಾನಿಕ ಪುಸ್ತಕದಲ್ಲಿ ಗಂಡಸರನ್ನು 'ಹೋಮೋ ಫ್ರಂಟಾಲಿಸ್' ಎಂದು ಕರೆಯಲಾಗಿತ್ತು. ಅಂದರೆ ಗಂಡಸರ ಮಿದುಳಿನ ಮುಂಭಾಗ ಅತಿ ದೊಡ್ಡದಾಗಿ, ಪ್ರಮುಖವಾಗಿದ್ದು ಗಂಡಸರು ಬಹು ಬುದ್ಧಿಶಾಲಿಗಳೆಂದು ಬೆನ್ನು ತಟ್ಟಿಕೊಂಡ ಬುದ್ಧಿವಂತರು ಇವರು. ಆದರೆ ಅವರ ದುರಾದೃಷ್ಟಕ್ಕೆ ಹೆಣ್ಣಿನ ಬುರುಡೆಯನ್ನು ಬಿಚ್ಚಿ ಮಿದುಳನ್ನು ಬಿಡಿಸಿ ನೋಡಿದಾಗ ಇಂಥಾ ವಿಜ್ಞಾನಿಗಳು ಬಯಸಿದ ಚಿಕ್ಕ 'ಫ್ರಂಟಲ್ ಲೋಬ್' ಅಲ್ಲಿರದಿದ್ದದ್ದು ನಿರಾಶೆ ತರಿಸಿರಬೇಕು. ಹೆಂಗಸರ ಮಿದುಳಿನ ಮುಂಭಾಗ, ಗಂಡಸರ ಅದೇ ಭಾಗಕ್ಕಿಂತಲೂ ದೊಡ್ಡದಿರುವುದು ಅರಿವಾದೊಡನೆ ತಟ್ಟನೆ ಈ ವಿಜ್ಞಾನಿಗಳು, 'ಹಾಗಾದರೆ ಮಿದುಳಿನ ಮುಂಭಾಗದಲ್ಲಿ ಬುದ್ಧಿವಂತಿಕೆ ಇಲ್ಲ, ಅದಿರುವುದು ಹಿಂಭಾಗದಲ್ಲಿ' ಎಂದು ತೀರ್ಮಾನಿಸಿಬಿಟ್ಟರು. ವಾಸ್ತವ ಸತ್ಯ, ನಿಜ ಸಂಗತಿ ತಮ್ಮ ನಂಬಿಕೆಗಳಿಗೆ ವಿಪರೀತವಿದ್ದಾಗ, ನಿಜವಾದ ವಿಜ್ಞಾನಿಗಳಂತೆ ಸತ್ಯಶೋಧನೆಗೆ ಮುಕ್ತ ಮನಸ್ಸಿನಿಂದ ಮುನ್ನುಗ್ಗಿ, ತಮ್ಮ ಪೂರ್ವಾಗ್ರಹಗಳನ್ನು ತಿದ್ದಿಕೊಳ್ಳುವ ಬದಲು, ತಮ್ಮ ಕುರುಡು ನಂಬಿಕೆಗಳಿಗೆ ಸಮರ್ಥನೆಗಳನ್ನು ಕಂಡುಕೊಂಡು ತೃಪ್ತರಾದರು.

ವಿಜ್ಞಾನಿಗಳೆಂದರೆ ಅಪ್ಪಟ ವಾಸ್ತವವಾದಿಗಳು, ಪೂರ್ವಾಗ್ರಹವಿಲ್ಲದವರು, ಸತ್ಯದ ಅನ್ವೇಷಕರು ಎಂಬೆಲ್ಲ ಮಹತ್ತರದ ಕಲ್ಪನೆಗಳಿವೆ. ಆದರೆ ಮಹಿಳೆಯ ವಿಷಯ ಬಂದಾಗ ದೊಡ್ಡ ದೊಡ್ಡ ವಿಜ್ಞಾನಿಗಳೂ ಅತ್ಯಂತ ಅವೈಜ್ಞಾನಿಕ ರೀತಿಯಲ್ಲಿ ತಮ್ಮ ಸ್ತ್ರೀ ವಿರೋಧಿ ನಂಬಿಕೆಗಳಿಗೆ, ಪ್ರತಿಗಾಮಿ ಚಿಂತನೆಗಳಿಗೆ ತೆತ್ತು ಕೊಂಡಿರುವುದನ್ನು ಇತಿಹಾಸದುದ್ದಕ್ಕೂ ಕಾಣುತ್ತೇವೆ. ಹತ್ತೊಂಬತ್ತನೇ ಶತಮಾನದ ಕೊನೆಯಲ್ಲಿ ಮತ್ತೊಂದು ವಿಚಿತ್ರ ವಾದ ಜನ್ಮ ತಳೆಯಿತು. ಹೆಚ್ಚಿಗೆ ಓದಿದ ಹೆಣ್ಣು ಬಂಜೆಯಾಗುತ್ತಾಳೆಂಬ ನಂಬಿಕೆಯನ್ನು ಬಿತ್ತತೊಡಗಿದ್ದು ಅದರ ಒಂದು ಭಾಗ. ಸಾಲದ್ದಕ್ಕೆ ಇಂಥಾ ಅವೈಜ್ಞಾನಿಕ ನಂಬಿಕೆಗಳನ್ನು ವಿಜ್ಞಾನದ ಹೆಸರಲ್ಲಿ ಪ್ರಚಾರಪಡಿಸಿದ್ದೂ ಆಯಿತು. 'ಮಹಿಳೆಯ ಉನ್ನತ ವ್ಯಾಸಂಗ ಆಕೆಯ ಸಂತಾನೋತ್ಪತ್ತಿಗೆ ಮಾರಕ' ಎಂದು ಸಾಧಿಸಿತು ಡಾ|| ಇ. ಎಚ್. ಕ್ಲಾರನ ವೈಜ್ಞಾನಿಕವೆಂದು ಹೇಳಿಕೊಂಡ ಪುಸ್ತಕ. ಗಾಬರಿಗೊಂಡ ಹೆಣ್ಣುಮಕ್ಕಳ ತಂದೆ ತಾಯಿಯರು ತಮ್ಮ ಹೆಣ್ಣುಮಕ್ಕಳಿಗೆ ನೀಡುತ್ತಿದ್ದ ಅಲ್ಪ ವಿದ್ಯಾಭ್ಯಾಸವನ್ನೂ ತುಂಡರಿಸಿದ ಪ್ರಸಂಗಗಳಿದ್ದವು.

ಗಂಡು ಹೆಣ್ಣಿನ ಮಿದುಳುಗಳಲ್ಲಿ ವ್ಯತ್ಯಾಸವಿರುವುದು ಅಚ್ಚರಿಯ ವಿಷಯವಾಗಬೇಕಿಲ್ಲ. ಅದರಲ್ಲೂ ೬೦೦ ಕೋಟಿ ಜನಸಂಖ್ಯೆಯಲ್ಲಿ ಹದಿನೈದು ಜನರ ಮಿದುಳನ್ನು ಅಳತೆ ಮಾಡಿ ಹೊರಬಿದ್ದ ನಿರ್ಣಯಗಳು ಅಂತಿಮವೂ ಅಲ್ಲ. ಗಂಡು ಹೆಣ್ಣಿನ ಮಿದುಳಿನ ನಡುವೆ ವ್ಯತ್ಯಾಸ ಇರುವುದು ಇರಲಿ, ಇಬ್ಬರು ಗಂಡಸರ ಮಿದುಳನ್ನು ತೆಗೆದು ನೋಡಿದ್ದರೂ ವ್ಯತ್ಯಾಸಗಳಿವೆ, ಎಲ್ಲ ಗಂಡಸರ ಮಿದುಳು ಐನ್‌ಸ್ಟೈನ್‌ರ ಮಿದುಳಿನ ಪಡಿಯಚ್ಚಲ್ಲ ಎಂದು ತಿಳಿಯುತ್ತಿತ್ತು. ಆದರೆ ಇರುವುದು ವ್ಯತ್ಯಾಸವೇ ಹೊರತು ಹೆಚ್ಚುಗಾರಿಕೆ ಅಲ್ಲ.

ಸ್ತ್ರೀವಾದಿ ಜರ್ಮೈನ್ ಗ್ರಿಯರ್ ಮಾತುಗಳನ್ನು ಇಲ್ಲಿ

ನೇಮಿಚಂದ್ರ

ನೆನೆಯಬೇಕು. 'ನಮ್ಮ ದೇಹದೊಳಗಿನ ಜೀವಕೋಶದಲ್ಲಿ ೪೫ ವರ್ಣತಂತುಗಳು ಗಂಡು ಹೆಣ್ಣಿನ ನಡುವೆ ಒಂದೇ ಆಗಿದ್ದು, ೪೬ ನೇ ವರ್ಣತಂತು ಮಾತ್ರ 'ವೈ' ಇದ್ದಾಗ ಗಂಡಿನ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ' ಎಂಬತ್ತ ಆಕೆ ಗಮನ ಸೆಳೆಯುತ್ತಾ, 'ಗಂಡು ಹೆಣ್ಣುಗಳ ನಡುವಿನ ವ್ಯತ್ಯಾಸಗಳನ್ನು ವಿಪರೀತವಾಗಿ ಉತ್ಪ್ರೇಕ್ಷಿಸಿ ಒತ್ತು ಕೊಡುತ್ತಿದ್ದೇವೆ' ಎಂದಳು. ಜೀವಶಾಸ್ತ್ರೀಯವಾಗಿ ಗಂಡು ಹೆಣ್ಣಿನ ನಡುವಿರುವ ಅಲ್ಪ ವ್ಯತ್ಯಾಸವನ್ನು, ಸಮಾಜ ಹಾಗೂ ಸಂಸ್ಕೃತಿ ಹೇರುವ ಮೌಲ್ಯಗಳು ಹಿಗ್ಗಿಸುತ್ತವೆ.

'ಮಹಿಳೆಯ ಬಲಭಾಗದ ಮಿದುಳು ಪುರುಷನ ಬಲಭಾಗದ ಮಿದುಳಿಗಿಂತ ದೊಡ್ಡದು. ಪುರುಷರ ಎಡಭಾಗದ ಮಿದುಳು ಮಹಿಳೆಯರದಕ್ಕಿಂತ ದೊಡ್ಡದು' ಎಂದು ವಿಜ್ಞಾನಿಗಳು ಈಚೆಗೆ ಕಂಡುಹಿಡಿದಿದ್ದರೆ, ಇದು ಮಹಿಳೆಯರಿಗೆ ಅಪ್ರಿಯವಾದ ವಿಚಾರವೇನೂ ಅಲ್ಲ. ಕಾರಣ ನಮ್ಮ ಮಿದುಳಿನ ಎಡಭಾಗ ತಾರ್ಕಿಕವಾಗಿ, ವಿಶ್ಲೇಷಣಾತ್ಮಕವಾಗಿ ಚಿಂತಿಸಬಲ್ಲದು. ಆದರೆ ಮಿದುಳನ್ನು ಸಂಶೋಧಿಸಿರುವ ತಜ್ಞರು ತಿಳಿಸುವಂತೆ, ಕಲ್ಪನೆ, ಒಳ ಅರಿವು, ಒಳನೋಟ, ಸುಪ್ತಪ್ರಜ್ಞೆ, ಸೃಜನಶೀಲತೆ ಚಿಮ್ಮುವುದು ಮಿದುಳಿನ ಬಲ ಭಾಗದಿಂದ.

ಕ್ಯಾಲಿಫೋರ್ನಿಯಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ರೋಜರ್ ಸ್ಪೆರ್ರಿ, 'ಸೀಳು-ಮಿದುಳಿ' ನ ಕಾರ್ಯವನ್ನು ಕುರಿತ ಸಂಶೋಧನೆಗೆ ೧೯೮೧ರಲ್ಲಿ ನೊಬೆಲ್ ಪಾರಿತೋಷಕವನ್ನು ಪಡೆದ ವಿಜ್ಞಾನಿ. ಮಿದುಳಿನ ಎಡ-ಬಲ ಭಾಗಗಳ ವ್ಯತ್ಯಾಸಗಳತ್ತ ಒಳನೋಟ ನೀಡಿದ ಪ್ರಥಮ ವಿಜ್ಞಾನಿ ಈತ. ಮಿದುಳಿನ ಎಡಭಾಗ ಹೆಸರುಗಳನ್ನು ನೆನಪಿನಲ್ಲಿಟ್ಟುಕೊಳ್ಳಬಲ್ಲದು, ಅಂಕಿ ಸಂಖ್ಯೆಗಳನ್ನು ಗುಣಿಸಬಲ್ಲದು, ವಾಕ್‌ಶಕ್ತಿಯನ್ನು ನಿಯಂತ್ರಿಸಬಲ್ಲದು, ತಾರ್ಕಿಕವಾಗಿ ಯೋಚಿಸಬಲ್ಲದು. ಆದರೆ ಎಡಭಾಗದ ಮಿದುಳಿನಲ್ಲಿ ಹಾಯುವ ವಿಚಾರಗಳನ್ನು ಒಂದರ ನಂತರ ಒಂದರಂತೆ ಸರದಿಯ ಪ್ರಕಾರ ಅರ್ಥ ಮಾಡಿಕೊಳ್ಳುತ್ತದೆ. ಬಲಭಾಗ ನಿಗೂಢವಾದ ಮಿದುಳಿನ ಕಲಾತ್ಮಕ ಅಭಿರುಚಿಗಳ ತಾಣವಾಗಿದೆ. ಬಲಭಾಗದ ಮಿದುಳು ಮಾತುಗಳಿಗಿಂತ ಹೆಚ್ಚಾಗಿ ಪ್ರತಿಮೆಗಳನ್ನು, ಸಂಕೇತಗಳನ್ನು ಅರ್ಥಮಾಡಿಕೊಳ್ಳಬಹುದು. ಹತ್ತುಹಲವು ವಿಚಾರಗಳನ್ನು ಏಕಕಾಲದಲ್ಲಿ ಒಟ್ಟಿಗೇ ಗುಣಿಸಬಲ್ಲ, ಗ್ರಹಿಸಬಲ್ಲ ಸಾಮರ್ಥ್ಯ ಬಲಭಾಗಕ್ಕಿದೆ. ಬಲಭಾಗ ಭಾವನೆಗಳು, ಕಲ್ಪನೆಗಳು, ಕನಸುಗಳು, ಪ್ರತಿಭಾಶಕ್ತಿ ಉದ್ಭವಿಸುವ ತಾಣ.

ಇಂದು 'ರೈಟ್ ಬ್ರೇನ್ ಥಿಂಕಿಂಗ್' ನತ್ತ ಹೇರಳವಾಗಿ ಒತ್ತು ಬಿದ್ದಿರುವ ಸಮಯದಲ್ಲಿ, ಗಂಡಸರ ಎಡಮಿದುಳು ಹೆಚ್ಚು ಬೆಳೆದದ್ದು ಹೆಚ್ಚುಗಾರಿಕೆ ಕಾಣುವುದಿಲ್ಲ. ನಿಜಕ್ಕೂ ಇಂದು ನಮಗಿರುವ ಕೊರತೆ ಮಿದುಳಿನದಲ್ಲ, ಇರುವಷ್ಟು ಮಿದುಳನ್ನು ಬಳಸುವುದು. ಇತಿಹಾಸದ ಸಾಧನೆಗಳೆಲ್ಲ ಮಿದುಳಿನ ಬಲದಿಂದಲೇ ಸಾಧಿಸಿದ್ದಲ್ಲ. ಜಾನ್ ಹಾಪ್ಕಿನ್ಸ್ ಗಂಡು ಹೆಣ್ಣಿನ ಮಿದುಳಿನ ವ್ಯತ್ಯಾಸಗಳಿಗೆ ದುರ್ಬೀನು ಹಿಡಿದು ನೋಡುತ್ತಿರುವ ಈ ಸಮಯದಲ್ಲಿಯೇ, ಕ್ಯಾಲಿಫೋರ್ನಿಯಾದ ಸಾಲ್ಕ್ ಇನ್‌ಸ್ಟಿಟ್ಯೂಟಿನ ನರವಿಜ್ಞಾನಿ ಡಾ॥ ಫ್ರೆಡ್ ಎಚ್. ಗೇಗ್ 'ನಾವು ಹುಟ್ಟಿನಿಂದಲೇ ಬುದ್ಧಿವಂತರಾಗಿ ಹುಟ್ಟುವುದಿಲ್ಲ' ಎಂದು ತಿಳಿಸಿದ್ದಾರೆ. 'ನಮ್ಮೆಲ್ಲಾ ಮಿದುಳಿನ ಜೀವಕೋಶಗಳು ಹುಟ್ಟಿದಾಗಲೇ ಇರುವುದಿಲ್ಲ. ಮಕ್ಕಳು, ಕಿಶೋರ ವಯಸ್ಸಿನವರು ತಮ್ಮ ಪರಿಸರದೊಡನೆ ಕ್ರಿಯೆ-ಪ್ರತಿಕ್ರಿಯೆಗೆ ತೊಡಗಿದಂತೆ, ಮಿದುಳು ಬಿಲಿಯಗಟ್ಟಲೆ ಹೊಸ ಜೀವಕೋಶಗಳನ್ನು, ಹೊಚ್ಚ ಹೊಸ ನರಕೋಶಗಳನ್ನು, ಸೃಷ್ಟಿಸಿ ಸೇರ್ಪಡಿಸುವುದು ಕಾಣಿಸುತ್ತದೆ. ಈ ಕ್ರಿಯೆ ಹುಟ್ಟಿನಿಂದ ಆರಂಭವಾಗಿ ತರುಣಾವಸ್ಥೆಯ ಕೊನೆಯವರೆಗೂ ಮುಂದುವರೆಯುತ್ತದೆ. ಹೊಸ ನರಕೋಶಗಳು ಸೇರ್ಪಡೆಯಾಗುವ ಈ ಪ್ರಕ್ರಿಯೆ, ವ್ಯಕ್ತಿ ಪ್ರೌಢಾವಸ್ಥೆಯನ್ನು ತಲುಪಿದಾಗ ನಿಧಾನವಾಗುತ್ತದೆ' ಎಂದು ಈ ವಿಜ್ಞಾನಿ ತಿಳಿಸಿದ್ದಾರೆ. ಆರಂಭದ ಹಂತದಲ್ಲಿರುವ ಸಂಶೋಧನೆ ಇದಾದರೂ, 'ಮಿದುಳು ವಿಕಾಸಗೊಳ್ಳುತ್ತದೆ ಮತ್ತು ಹೊಸ ನರಕೋಶಗಳನ್ನು ಸೇರ್ಪಡಿಸುತ್ತದೆ' ಎಂಬ ಈ ವಿಷಯವೇ ಕ್ರಾಂತಿಕಾರಿಯಾಗಿದೆ. ಈ ಪ್ರಕ್ರಿಯೆಯಲ್ಲಿ 'ಪರಿಸರ' ಪಾತ್ರ ವಹಿಸುತ್ತದೆ, ಎಂಬುದು ಬಹಳ ಮುಖ್ಯವಾದದ್ದು.

'ವ್ಯತ್ಯಾಸಗಳು ಹುಟ್ಟಿನಿಂದಲೇ ಉಂಟಾಗುವುದಿಲ್ಲ; ಹುಡುಗ ಮತ್ತು ಹುಡುಗಿ ಬೆಳೆಯುವ ಪರಿಸರ ಮುಖ್ಯ' ಎಂಬುದನ್ನು ತಿಳಿಯಲು ವಿದೇಶದ ವೈಜ್ಞಾನಿಕ ಸಂಸ್ಥೆಗಳು ಹೇಳುವುದನ್ನು ಕಾಯಬೇಕಿಲ್ಲ, ಸಾಮಾನ್ಯ ಜ್ಞಾನಕ್ಕೆ ನಿಲುಕುವ ಸತ್ಯ ಇದು. ಸ್ತ್ರೀ ಸಮಾನತಾವಾದಿಗಳು ಸ್ತ್ರೀ ಪುರುಷರ ನಡುವಿನ ಅಸಮಾನತೆಯು ಪ್ರಕೃತಿ ಸಹಜವಲ್ಲ, ಜೈವಿಕವಲ್ಲ, ಅದು ಸಾಂಸ್ಕೃತಿಕ ಹಿನ್ನೆಲೆಯದ್ದಾಗಿದ್ದು, ಪರಿಸರದ ಕಾರಣದಲ್ಲಿ ಉದ್ಭವಿಸಿದ್ದು ಎಂದು ಪ್ರತಿಪಾದಿಸುತ್ತಾರೆ. ಹೆಣ್ಣು ಗಂಡು ಪರಸ್ಪರ ವಿರುದ್ಧ ವ್ಯಕ್ತಿತ್ವಗಳೆಂಬ ಕಲ್ಪನೆಯನ್ನು, ಅವರನ್ನು ವಿರುದ್ಧವಾಗಿ ಸೃಷ್ಟಿಸಲ್ಪಟ್ಟಿದ್ದಾರೆ ಎಂಬ ತಪ್ಪು ಕಲ್ಪನೆಯನ್ನು ಮೊದಲು ತೊಡೆಯಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತಾರೆ.

ಮಹಿಳಾ ಸಮಾನತೆಯ ಪ್ರತಿಪಾದಕರು ಮಹಿಳೆಗೆ ಸಮಾನ ಅವಕಾಶಗಳು ಬೇಕು, ಮಹಿಳೆಗೆ ಸಮಾನ ಹಕ್ಕುಗಳು ಬೇಕು, ಎಂದು ವಾದಿಸುತ್ತಾರೆ. ಶತಶತಮಾನಗಳಿಂದ ಮಹಿಳೆಯರು ಅವಕಾಶಗಳಿಂದ ವಂಚಿತರಾಗಿದ್ದಾರೆ. ಒಂದೂವರೆ ಶತಮಾನದ ಹಿಂದೆ ಮಹಿಳೆಯರಿಗೆ ಮೆಡಿಕಲ್ ಕಾಲೇಜಿಗೆ ಪ್ರವೇಶವಿರಲಿಲ್ಲ. ಅರ್ಧ ಶತಮಾನದ ಹಿಂದಷ್ಟೇ ಮಹಿಳೆಯರಿಗೆ ಇಂಜಿನಿಯರಿಂಗ್ ಕಾಲೇಜಿಗೆ ಪ್ರವೇಶ ಸಿಕ್ಕಿತು. ಇಪ್ಪತ್ತನೆಯ ಶತಮಾನದ ಕೊನೆಯ ದಶಕದವರೆಗೂ ಭಾರತದ ಮಹಿಳೆಯರಿಗೆ ಸೇನೆಗೆ ಪ್ರವೇಶವಿರಲಿಲ್ಲ. ಆಸ್ತಿ ಹಕ್ಕಿನಂಥಾ ಅನೇಕ ಲಿಂಗತಾರತಮ್ಯದ ಕಾನೂನುಗಳಿದ್ದವು. ಭಾರತದಂಥಾ ದೇಶದಲ್ಲಿ ಹೆಣ್ಣು ಮಗುವಿಗೆ ಬೇರೆಲ್ಲಾ ಅವಕಾಶಗಳಿರಲಿ, ಬದುಕುಳಿಯುವ ಅವಕಾಶವೂ ಇಲ್ಲದ ಸಂದರ್ಭಗಳಿವೆ. ಗರ್ಭದಲ್ಲಿಯೇ ಹೆಣ್ಣು ಭ್ರೂಣಗಳನ್ನು ಕೊಲ್ಲುವ, ಹೆಣ್ಣು ಶಿಶುಹತ್ಯೆಗಳ ಜ್ವಲಂತ ಸಮಸ್ಯೆಗಳು ಜೀವಂತವಾಗಿವೆ. ಇಪ್ಪತ್ತೊಂದನೇ ಶತಮಾನಕ್ಕೆ ದಾಪುಗಾಲಿಟ್ಟ ಈ ಸಂದರ್ಭದಲ್ಲೂ ಆಫ್ಘಾನಿಸ್ತಾನದಂತಹ ಜಗತ್ತಿನ ಅನೇಕ ಕಡೆಗಳಲ್ಲಿ ಹೆಣ್ಣು ಮಕ್ಕಳಿಗೆ ಶಾಲೆಗೆ ಹೋಗುವ ಕನಿಷ್ಠ ಅವಕಾಶವಿಲ್ಲ. ಸ್ತ್ರೀ ಸಮಾನತೆಯ ಪ್ರತಿಪಾದಕರು ಕೇಳುವುದು ಸಮಾನ ಅವಕಾಶಗಳನ್ನು. ಮಾನವತಾವಾದಿ ಸ್ತ್ರೀ-ಪುರುಷರೆಲ್ಲರ ಕನಸಿನ ಈ ಸಮಾನತೆ ಹೊಸ ಸಹಸ್ರಮಾನದಲ್ಲಿ ಸತ್ಯವಾಗುವತ್ತ ನಮ್ಮ ಚಿಂತನೆಗಳಿರಲಿ, ವಿಚಾರಗಳಿರಲಿ, ಪ್ರಯತ್ನವಿರಲಿ, ಹೋರಾಟವಿರಲಿ.

ನೇಮಿಚಂದ್ರ
೪೦೧, 'ವಿಜಯ ಟವರ್ಸ್', ೨ನೇಯ ಮೈನ್, ಆರ್. ಪಿ. ಸಿ. ಲೇಔಟ್,
ವಿಜಯನಗರ ೨ನೇ ಹಂತ, ಬೆಂಗಳೂರು-೫೬೦ ೦೪೦

# ವಿಗ್ರಹ ಭಂಜಕ ಲಂಕೇಶ್

ಡಾ|| ಜಿ. ರಾಮಕೃಷ್ಣ

''ಹೇಗೆ ನಡೀತಾ ಇದೇರೀ ನಿಮ್ಮ ಕ್ರಾಂತಿ?''-ಲಂಕೇಶ್ ಭೇಟಿಯಾದಾಗಲೆಲ್ಲಾ ನನಗೆ ಅದೇ ಅವರ ಮೊದಲ ಪ್ರಶ್ನೆಯಾಗಿರುತ್ತಿತ್ತು. ''ಕುಂಟಿಕೊಂಡು ಸಾಗ್ತಾ ಇದೆ, ನೀವು ಹೇಗಿದ್ದೀರಿ?'' - ಅದು ಸಾಮಾನ್ಯವಾಗಿ ನನ್ನ ಉತ್ತರ. ಅವರ ಪತ್ರಿಕೆಯಲ್ಲಿ ನನಗೆ ''ಬ್ರಾಹ್ಮಣ ಕಮ್ಯುನಿಸ್ಟ್'' ಎಂದು ಒಂದೆರಡು ಬಾರಿ ಹಣೆಪಟ್ಟಿಯನ್ನೂ ನೀಡಿದ್ದರು. ''ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ'' ಎಂಬ ಲೇಖನದಲ್ಲಿ ಯಾಕೂಬ್ ಕೊಲಾಸ್‌ನ ಒಂದು ಕವನವನ್ನು ಉದ್ಧರಿಸಿದ್ದೆ. ಅದು ಹೀಗಿದೆ:

*ಯಾಚಿಸದಿರು ಮತ್ತು ಅರಸದಿರು*
*ಉಲ್ಲಾಸಕರ ನಾಡುಪದವನ್ನು ನನ್ನ ವೀಣೆಯಲ್ಲಿ,*
*ಏಕೆಂದರೆ, ನಾನು ಹಾಡಹೊರಟಾಗ*
*ಬೆಂಕಿಗಿಂತಲೂ ಪ್ರಖರವಾಗಿ ಉರಿಯುತ್ತದೆ ವ್ಯಸನ ನನ್ನಲ್ಲಿ.*

*ನಾನೂ ನಗಬೇಕು, ನಗಿಸಬೇಕೆಂಬ ಉತ್ಕಟೇಚ್ಛೆ ಇದೆ,*
*ನಿನಗೊಂದೆರಡು ವಿನೋದಗಳ ನಿವೇದಿಸಬೇಕು;*
*ಆದರೆ ಸುತ್ತಲ ಜೀವನ ನೋಡುತ್ತಾ*
*ಹೃದಯ ತುಂಬುತ್ತದೆ ನೋವುಗಳ ಭಾರದಿಂದ.*

*ನಾವದೆಷ್ಟು ಅಸುಖಿಗಳು;*
*ನಮ್ಮ ಪಾಲಿಗೆ ಬರಲಿಲ್ಲ ಒಂದೂ ನೆಮ್ಮದಿ,*
*ತಂಪು ಹುಲ್ಲು ಮಾಳದ ಹೂವನ್ನು ನನ್ನಲ್ಲಿ ಕೇಳಬೇಡ,*
*ನಮಗಿನ್ನೂ ಬಂದೆ ಇಲ್ಲ ಆ ವಸಂತ.*

ಕವನದ ಭಾಷಾಂತರ ಬಿಡಿ, ಅದು ಕೆಟ್ಟದ್ದಾಗಿದೆಯೆಂದು ಯಾರಾದರೂ ಒಪ್ಪಿಕೊಳ್ಳಬೇಕಾಗಿದೆ. ಆದರೆ ಅದನ್ನುದ್ಧರಿಸಿ ಒಂದು ವಾಕ್ಯ ಬರೆದಿದ್ದೆ: ''ಮಾನವ ಸಮುದಾಯವನ್ನು ಆ ವಸಂತದೆಡೆಗೆ ಕೊಂಡೊಯ್ಯುವುದು ಕೇವಲ ಸಾಹಿತ್ಯದಿಂದ ಸಾಧ್ಯವಾಗದ ಕೆಲಸ ಹೌದು; ಆದರೆ ಆ ವಸಂತದ ಸುಂದರ ಸೌರಭವನ್ನು ಮಾನವ ಸಮುದಾಯಕ್ಕೆ ದೊರಕಿಸಿಕೊಡುವುದರಲ್ಲಿ ಸಾಹಿತ್ಯದ್ದೂ ಮಹತ್ವದ ಕೊಡುಗೆ ಇದೆ. ಇದು ಮಾರ್ಕ್ಸ್‌ವಾದಿ ವಿಮರ್ಶೆಯ ಸಾಹಿತ್ಯನೋಟದ ಮೂಲಭೂತ ಸಂಗತಿ.''

ಇದನ್ನು ಲಂಕೇಶ್ ತಮ್ಮ ಪತ್ರಿಕೆಯಲ್ಲಿ ಒಮ್ಮೆ ಟೀಕಿಸುವಾಗ ಹೇಳಿದರು: ಇದಕ್ಕೇ ಹೇಳೋದು ರಾಮಕೃಷ್ಣನಂತಹವರಿಗೆ ಪದ್ಯ ಓದಲು ಬರುವುದಿಲ್ಲವೆಂದು, ಕವಿಯ ಇಂಗಿತವೇ ಬೇರೆ, ಇವರು ಗ್ರಹಿಸಿರುವುದೇ ಬೇರೆ. ಕಮ್ಯುನಿಸ್ಟ್ ಸಮಾಜದ ಅನಿಷ್ಟವನ್ನು ಕವಿ ಸೂಚಿಸಿದ್ದರೆ ಅಂತಹ ಸಮಾಜದ ಹಾದಿ ಕಾಯುತ್ತಿದ್ದಾನೆಂದು ರಾಮಕೃಷ್ಣ ಭಾವಿಸುತ್ತಾನೆ, ಎಂದು. ಕೊಲಾಸ್ ಕ್ರಾಂತಿಪೂರ್ವದ ಬೈಲೋರಷ್ಯದ ಕವಿ ಎಂಬುದನ್ನು ಲಂಕೇಶ್ ಬಹುಶಃ ಉಪೇಕ್ಷಿಸಿದ್ದಿರಬೇಕು. ಆಡೆನ್ನನ ಫ್ಯಾಸಿಸಂ ವಿರೋಧಿ ಕವನವೊಂದಕ್ಕೆ ಇಂತಹುದೇ ದುರ್ಗತಿ ಬಂದಿದ್ದುದನ್ನು ನೆನೆಯಬಹುದು.

ಅನ್ಯಾದೃಶ ವ್ಯಕ್ತಿತ್ವದ ಲಂಕೇಶ್ ತೀರಿಕೊಂಡ ನಂತರ ನಾನಿದನ್ನು ನೆನೆದರೆ ಅವರಿಗೆ ಅಪಚಾರ ಬಗೆಯುವ ಉದ್ದೇಶದಿಂದಲ್ಲ. ಅವರ ವ್ಯಾಪಕ ಕ್ರಿಯಾಶಾಲಿತ್ವ ನಾನು ಬಲ್ಲೆ. ಅವರಿಗೆ ಬಹಳ ಹತ್ತಿರದವನು ನಾನಾಗಿರಲಿಲ್ಲವಾದರೂ ಸಾಕಷ್ಟು ಅನ್ಯೋನ್ಯವಾಗಿದ್ದವರಲ್ಲಿ ಬಹುಶಃ ನಾನೂ ಒಬ್ಬ. ಇದೇ ಫೆಬ್ರವರಿ ಒಂದರಂದು ದಲಿತ ಸಂಘರ್ಷ ಸಮಿತಿಯವರು ಲಂಕೇಶ್ ನೆನಪಿನ ಸಭೆಯನ್ನು ನಡೆಸಿದಾಗ ಮಂಗ್ಳೂರು ವಿಜಯ, ಅಗ್ರಹಾರ ಕೃಷ್ಣಮೂರ್ತಿ, ಡಾ|| ಕೆ. ಮರುಳಸಿದ್ದಪ್ಪ, ಪ್ರೊ|| ಕಿ. ರಂ. ನಾಗರಾಜ ಮತ್ತು ಡಾ|| ಸಿದ್ದಲಿಂಗಯ್ಯ ಲಂಕೇಶರ ವಿಶಿಷ್ಟ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟರು. ಅವರ ಪ್ರತಿಭೆ, ದಿಟ್ಟತನ, ಬರವಣಿಗೆಯ ಶೈಲಿ, ಇತ್ಯಾದಿಗಳು ಲಂಕೇಶ್ ಬದುಕಿದ್ದಾಗಲೇ ಜನಜನಿತವಾಗಿತ್ತು. ಅವರು ಕಾಲವಾದ



ಮೇಲೆ ಆ ಬಗ್ಗೆ ಬೇಕಾದಷ್ಟು ಲೇಖನಗಳು, ಮಾತುಗಳು ಬಂದಿವೆ. ಅದನ್ನು ಕುರಿತು ಮರುವ್ಯಾಖ್ಯಾನ ಅನಗತ್ಯ. ಒಂದು ಮಾತನ್ನಂತೂ ಹೇಳಬೇಕು: ಅನಾರೋಗ್ಯ, ಕೌಟುಂಬಿಕ ಮುಗ್ಗಟ್ಟು, ಇವೆಲ್ಲ ಕಿತ್ತು ತಿನ್ನುತ್ತಿದ್ದಾಗ ಅಯ್ಯಯ್ಯಪ್ಪ ಅಂತ ಅವರು ಅಯ್ಯಪ್ಪ, ಸಾಯಿಬಾಬಾ, ಮಾತೆ ಮುಂತಾದವರ ಬಳಿಗೆ ಓಡಲಿಲ್ಲ; ರಕ್ತದೊತ್ತಡ ಹತೋಟಿಯಲ್ಲಿಡಲು ಮಣಿ ಧರಿಸಲಿಲ್ಲ; ಒಂದು ಕಣ್ಣು ಕಳೆದುಕೊಂಡಿದ್ದರೂ ಬೇರೆಯವರಿಗೆಲ್ಲಾ ಕಣ್ಣು ಕೊಡುವ ಕೆಲಸವನ್ನು ಕೈ ಬಿಡಲಿಲ್ಲ. ಇದು ಗಟ್ಟಿತನದ ವ್ಯಕ್ತಿತ್ವದ ಲಕ್ಷಣ. ಅದಕ್ಕೆ ಎಷ್ಟು ಗೌರವ ಸಂದರೂ ಅದು ಕಡಿಮೆಯೇ.

ಅಂದಿನ ಸಭೆಯಲ್ಲಿ ಲಂಕೇಶರನ್ನು ಮೂರ್ತಿ ಅಥವಾ ವಿಗ್ರಹ ಭಂಜಕನೆಂದು ಬಣ್ಣಿಸಲಾಯಿತು. ಮೂರ್ತಿಗೆ ಶರಣಾದರೆ ಸ್ವಂತಿಕೆ ನಷ್ಟ; ಚಿಂತನೆಗೂ ಮಾರಕ. ಎಲ್ಲದನ್ನೂ ಸಮಾನ ನೆಲೆಯಿಂದ ಕಾಣುವುದು ಅವರ ಅತಿಶಯ ಗುಣ. ಆದ್ದರಿಂದ ನಾವು ಲಂಕೇಶರನ್ನೇ ವಿಗ್ರಹವನ್ನಾಗಿ ಮಾಡಿಕೊಳ್ಳಹೊರಟರೆ ಅವರ ಮಾರ್ಗಕ್ಕೆ, ಮೌಲ್ಯಕ್ಕೆ ಚ್ಯುತಿ. ಅವರಾದರೂ ಬೇರೆಯವರಂತೆ ಬೆಳೆದವರೇ ತಾನೆ? ''ತಮ್ಮದೇ ಮಾರ್ಗದಲ್ಲಿ'' ಎನ್ನುವುದು ಅವರ ಹೆಗ್ಗಳಿಕೆಯಷ್ಟೆ. ಅವರ ಹಿರಿತನವನ್ನು ಮುಕ್ಕು ಮಾಡದೆಯೇ ಅವರ ಮತ್ತು ನನ್ನ ಸ್ವಲ್ಪಮಟ್ಟಿನ ಒಡನಾಟದಲ್ಲಿ ಜರುಗಿದ ಕೆಲವು ಘಟನೆಗಳನ್ನು ನೆನಪಿಸಿಕೊಳ್ಳುತ್ತಾ ಅವರಿಗೆ ಗೌರವ ಸಮರ್ಪಣೆ ಮಾಡಲಿಚ್ಛಿಸುತ್ತೇನೆ.

* * *

ಬಹಳ ವರ್ಷಗಳ ಹಿಂದೆ ದೆಹಲಿಯ ಯುವಜನೋತ್ಸವಕ್ಕೆ ಬೆಂಗಳೂರಿನ ವಿದ್ಯಾರ್ಥಿಗಳನ್ನು ಕರೆದೊಯ್ದಿದ್ದ ಲಂಕೇಶ್ ವಿಚಿತ್ರವಾದ ನಿಲುಮೆ ತಾಳಿ ಅಂದಿನ ಉಪಕುಲಪತಿ ಟಿ. ಕೆ. ತುಕೋಳರ ಅವಗ್ರಹಕ್ಕೆ ಪಾತ್ರರಾಗಿದ್ದರು. ಯಾರ ಅನುಗ್ರಹಕ್ಕೂ ಕಾಯುತ್ತಿರದಿದ್ದ ಲಂಕೇಶ್‌ಗೆ ಇದು ಮುಗ್ಗಟ್ಟಿನ ಸನ್ನಿವೇಶ. ಹಣಕ್ಕೆ ಸಂಬಂಧಿಸಿದ ವಿಷಯ. ಲೆಕ್ಕ ಸರಿಯಾಗಿ ಸಲ್ಲಿಸಿಲ್ಲವೆಂದು ಅದೆಷ್ಟೋ ಹಣ ಹಿಂತಿರುಗಿಸಬೇಕಾಗಿ ಸೂಚಿಸಲಾಗಿತ್ತು. ''ಅದೆಲ್ಲಾ ನನಗೆ ತಿಳಿಯದು, ನಾನೇನು ಅಕೌಂಟೆಂಟೆ?'' ಎಂದು ಲಂಕೇಶ್ ಹೇಳಿದ್ದರಿಂದ ಸನ್ನಿವೇಶ ಬಿಗಡಾಯಿಸಿತು. ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ|| ಭರತರಾಜ ಸಿಂಗ್ ಅವರು ನಮ್ಮ ಕಾಲೇಜಿಗೆ ಬಂದು ''ಯಾರಿಗೂ ಹೊಟ್ಟೆ ಮೇಲೆ ಹೊಡೀಬಾರದಪ್ಪಾ'' ಎಂದು ನನಗೆ ಬುದ್ಧಿ ಹೇಳಿದರು. ನಾನು ಅಧ್ಯಾಪಕ ಸಂಘದ ಕಾರ್ಯಕರ್ತನಾಗಿದ್ದುದರಿಂದ ನನಗೆ ಹಾಗೆ ಹೇಳಿದ್ದು. ನಾನು ವಿಚಾರಣೆ ಬಗ್ಗೆ ಉಪಕುಲಪತಿಗಳಿಗೆ ಬರೆದಿದ್ದ ಪತ್ರದ ಸಮಾಚಾರ ಅವರಿಗೆ ತಿಳಿದಿತ್ತು. ಡಾ|| ಜಿ. ಎಸ್. ಶಿವರುದ್ರಪ್ಪ ಮುಂತಾದವರು ಮಧ್ಯ ಪ್ರವೇಶ ಮಾಡಿ ಸಮಸ್ಯೆಯನ್ನು ತಣ್ಣಗಾಗಿಸಿದರು. ಈಗ ಮೂರು, ನಾಲ್ಕು ವರ್ಷಗಳ ಹಿಂದೆ ಜಿ. ಎಸ್. ಎಸ್. ಬಗ್ಗೆ ಲಂಕೇಶ್ ಅನುಚಿತವಾಗಿ, ಖಾರವಾಗಿ ಏನೋ ಬರೆದಿದ್ದರು. ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದು ಜಿ.ಎಸ್.ಎಸ್. ಒಂದು ವಿವರಣೆ ಕಳಿಸಿದ್ದಕ್ಕೆ ಲಂಕೇಶ್ ಒಂದೇ ಒಂದು ವಾಕ್ಯದ ಉತ್ತರವನ್ನು ಯಾರೋ ಅನಾಮಿಕನಿಗೆ ಬರೆಯುವಂತೆ ಬರೆದರು. ವಿವರಣೆಯನ್ನು ಪ್ರಕಟಿಸಲಿಲ್ಲ. ಅವರ ಪತ್ರವನ್ನು ನಾನು ನೋಡಿ ಬೇಸರಪಟ್ಟಿದ್ದೇನೆ. ಅದೇನು ಉಪೇಕ್ಷೆಯೇ, ಅಹಂಕಾರವೇ, ವ್ಯವಹಾರದ ಮಾದರಿಯೇ?

* * *

ಎಪ್ಪತ್ತರ ದಶಕದ ಆದಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರೊ|| ಎ. ರಾಮಲಿಂಗಂ ಮೇಲೆ ಹಲ್ಲೆ ನಡೆಯಿತು. ಅವರು ಪೊಲೀಸರಿಗೆ ದೂರಿತ್ತರು. ವರದಿಗಳು ಪತ್ರಿಕೆಗಳಲ್ಲಿ ಬಂದವು. ಅವರೊಡನೆ ಕೆಲವು ಮಂತ್ರಿಗಳನ್ನು ಕಾಣಲು ಹೋಗಿದ್ದೆವು. ಆಮೇಲೆ ಬೆಂಗಳೂರಿನ ಮೈಸೂರು ಬ್ಯಾಂಕ್ ಚೌಕದಲ್ಲಿ ವಿದ್ಯಾರ್ಥಿ-ಯುವಜನ ಸಭಾದಿಂದ ಒಂದು ಪ್ರತಿಭಟನಾ ಸಭೆ ಏರ್ಪಡಿಸಿದೆವು. ನಾನು ಮೊದಲ ಭಾಷಣಕಾರ. ಮಾತನಾಡಲು ಆರಂಭಿಸಿದ ಕೂಡಲೆ ಮೆಡಿಕಲ್ ಕಾಲೇಜಿನ ಒಬ್ಬ ತರುಣ ಬಂದು ಮೈಕ್ ಕಿತ್ತುಕೊಂಡು

''ಇದೆಲ್ಲಾ ಬ್ರಾಹ್ಮಣರ ಪಿತೂರಿ. ರಾಮಲಿಂಗಂ ಬ್ರಾಹ್ಮಣನಾದ್ದರಿಂದ ಇವರೆಲ್ಲಾ ಇಲ್ಲಿ ಬಂದಿದ್ದಾರೆ. ಅದೇ ಸೆಂಟ್ರಲ್ ಕಾಲೇಜಿನಲ್ಲಿ ಲಂಕೇಶ್‌ರ ಮೇಲೆ ಹಲ್ಲೆಯಾದಾಗ ಇವರೇಕೆ ಪ್ರತಿಭಟಿಸಲಿಲ್ಲ'', ಎಂದೆಲ್ಲಾ ಹೇಳಿ ಸಭೆಯನ್ನು ಮುಂದುವರೆಯದಂತೆ ತಡೆದ. ಅಲ್ಲೇ ಲಾ ಕಾಲೇಜು ಎದುರು ಲಂಕೇಶ್, ಪ್ರೊ॥ ನಂಜುಂಡ ಸ್ವಾಮಿ, ಮುಂತಾದವರು ನಿಂತಿದ್ದರು. ಆಮೇಲೆ ಹೊರಟು ಹೋದರು. ಮೈಕನ್ನು ಕಿತ್ತುಕೊಂಡಿದ್ದವನು ಅವರ ರಾಜಕೀಯ ಶಿಷ್ಯ. ಈಗ ಅವರು ನಿಷ್ಣಾತ ವೈದ್ಯರು. ರಾಮಲಿಂಗಂಗೂ ಜಾತಿಯ ಜಾಡ್ಯ ಅಂಟಿಸಿದ್ದ ಈ ಜನಕ್ಕೆ ಏನನ್ನಬೇಕು?

* * *

ಲಂಕೇಶರ ಮೇಲೆ ಸೆಂಟ್ರಲ್ ಕಾಲೇಜಿನಲ್ಲಿ ಹಲ್ಲೆ ನಡೆದಾಗ ನಾನೂ ಅವರೊಡನಿದ್ದೆ.(ಅದು ಬೂಸಾ ಪ್ರಕರಣದ ಕಾಲ.) ಅಂದು ಇಂಗ್ಲಿಷ್ ಅಧ್ಯಾಪಕರೆಲ್ಲರ ಒಂದು ಸಭೆ ನಡೆಯುವುದಿತ್ತು. ಮೊದಲು ಕಾಫಿ ಕುಡಿದು ಲಂಕೇಶ್ ಮತ್ತು ನಾನು ಹೊರಬಂದೆವು. ಸಭೆಗೆ ಇನ್ನೂ ಸಮಯವಿತ್ತು. ರಸಾಯನಶಾಸ್ತ್ರ ವಿಭಾಗದೆದುರು ಬರುತ್ತಿದ್ದಾಗ ಸುಮಾರು ೧೫ ಮಂದಿ ನಮ್ಮನ್ನು ಸುತ್ತುವರೆದರು. ''ಈ ಕಮ್ಯುನಿಷ್ಟ ಯಾಕೋ ಇಲ್ಲಿ ಬಂದಿದ್ದಾನೆ?'' ಎಂದು ಒಬ್ಬ ಅರಚಿದ. ಅದನ್ನು ಬಿಟ್ಟರೆ ಮಿಕ್ಕಿದ್ದೆಲ್ಲಾ ಲಂಕೇಶ್‌ರನ್ನು ಉದ್ದೇಶಿಸಿದ್ದು. ಬೈಗುಳದ ಸುರಿಮಳೆ. ಸಾವಧಾನವಾಗಿ ಲಂಕೇಶ್ ಕೇಳಿದರು: ''ಹೀಗೆಲ್ಲಾ ಏಕೆ ಮಾಡುತ್ತಿದ್ದೀರಿ?'' ಅವರನ್ನು ಎಳೆದಾಡಲು ಆ ಯುವಕ ಗೂಂಡಾಗಳು ಸಿದ್ಧರಾಗುತ್ತಿದ್ದಂತೆ ಈಗ ನಾಟಕ ಅಕಾಡೆಮಿ ಅಧ್ಯಕ್ಷರಾದ ಸಿ. ಜಿ. ಕೃಷ್ಣಸ್ವಾಮಿ ಪ್ರತ್ಯಕ್ಷರಾಗಿ ''ಅವರ ಮೈ ಮುಟ್ಟಿ, ನಿಮ್ಮನ್ನು ಸಿಗಿದು ಬಿಡುತ್ತೇನೆ,'' ಎಂದು ಆರ್ಭಟಿಸಿದರು. ಇದಾದನಂತರ ಇನ್ನೊಂದು ಹಲ್ಲೆಯೂ ಅವರ ಮೇಲೆ ಜರುಗಿತು. ಆಗ ಅವರೊಡನೆ ನಾನಿರಲಿಲ್ಲ, ಮೊದಲ ದಿನ ನಾವಿಬ್ಬರೂ ಅಧ್ಯಾಪಕರ ಸಭೆಗೆ ಹೋಗದೆ ಲಂಕೇಶರ ಮನೆಗೆ ರಿಕ್ಷಾದಲ್ಲಿ ಬಂದುಬಿಟ್ಟೆವು.(ಅವರ ಮನೆ ನಮ್ಮ ಕಾಲೇಜಿನ ಬಳಿಯೇ ಇತ್ತು.)

ಲಂಕೇಶ್ ಯಾರಿಗೂ ದೂರು ನೀಡಲಿಲ್ಲ. ಅದು ಪತ್ರಿಕೆಗಳಲ್ಲಿ ಬಂದು ಸಾರ್ವಜನಿಕ ವಿಷಯವಾಗಲಿಲ್ಲ. ಇನ್ನು ಪ್ರತಿಭಟನೆ ಎಲ್ಲಿಯದು? ಆದರೂ ರಾಮಲಿಂಗಂ ಮೇಲಿನ ಹಲ್ಲೆಯನ್ನು ನಾವು ಪ್ರತಿಭಟಿಸಬೇಕೆಂದಿದ್ದಾಗ ಅಡ್ಡಿಯುಂಟಾದ್ದು ನಿಜ. ಆ ಬಗ್ಗೆ ಆಮೇಲೆ ಲಂಕೇಶರ ಮನೆಗೆ ಹೋಗಿ ವಿಚಾರಿಸಿದೆ. (ಕಾಲೇಜಿನ ಬಳಿ ಆಗಾಗ್ಗೆ ಸಿಕ್ಕುತ್ತಿದ್ದುದರಿಂದ ಜೊತೆಗೆ ಅವರ ಮನೆಗೆ ಹೋಗುವ ಸಂದರ್ಭಗಳಿದ್ದವು). ''ಮೇಲ್ನೋಟಕ್ಕೆ ಕಾಣುವಷ್ಟು ಸರಳವಲ್ಲ ಇದು; ಅದೂ ಅರ್ಥವಾಗದಿದ್ದರೆ ನೀವೆಂಥ ರಾಜಕೀಯ ಮಾಡುತ್ತೀರಿ?'' ಎಂದರು.

* * *

ಇದಾದ ಇನ್ನೊಂದಷ್ಟು ವರ್ಷಗಳ ನಂತರ ಒಂದು ದಿನ ಗಾಂಧೀಬಜಾರಿನ ಒಂದು ಹೋಟೆಲಿನಲ್ಲಿ ಕಾಫಿ ಕುಡಿಯಲು ಹೋಗಿದ್ದೆವು. ಅವರ ಒಬ್ಬ ಮಗಳು ನಮ್ಮ ಕಾಲೇಜಿನಲ್ಲಿ ಓದುತ್ತಿದ್ದರು. ಆಕೆಯ ಪರಿಚಯ ನನಗೆ ಇರಲಿಲ್ಲ. ಲಂಕೇಶ್ ನಗುನಗುತ್ತಾ ಹೇಳಿದರು: ''ಏನ್ರೀ ನನ್ನ ಮಗಳು ನಿಮ್ಮ ಕಾಲೇಜಿನಲ್ಲಿ ಗೊಂದಲ ಎಬ್ಬಿಸಿದ್ದಾಳಂತೆ. ನಿಮ್ಮ ನರಸಿಂಹಯ್ಯನವರಿಗೆ ಹಾಗೇ ಆಗಬೇಕು. ಅದೆಂಥಾ ಗೊಡ್ಡು ಸಂಪ್ರದಾಯಾರೀ ಅವರದು? ಅವರಿಗೆ ಹಾಗೇ ಆಗಬೇಕು, ಸುಮ್ಮನಿರಿ. ನೀವೆಲ್ಲಾ ಏನು ಮಾಡುತ್ತಿದ್ದೀರಿ ಆ ಕಾಲೇಜಿನಲ್ಲಿ? ವಿದ್ಯಾರ್ಥಿಗಳಿಗೆ ಫ್ರೀ ಆಗಿ ಇರಲು ಕಲಿಸಿ ಮೊದಲು.''

* * *

ಇನ್ನಷ್ಟು ವರ್ಷಗಳು ಉರುಳಿದವು. ಪತ್ರಿಕೆ ಪ್ರಾರಂಭವಾಗಿತ್ತು. ಹೆಗಡೆ ಮುಖ್ಯಮಂತ್ರಿ. ಕ್ಯಾಪಿಟೇಷನ್ ಫೀ ಕಾಲೇಜುಗಳ ಭರಾಟೆ ಜೋರಾಗಿತ್ತು. ಒಮ್ಮೆ ಲಂಕೇಶ್ ಬರೆದರು (ಛೇ ಛೇ ಕಾಲಮ್ಮಿನಲ್ಲಿರಬೇಕು): ಬಿ. ಕೆ. ಚಂದ್ರಶೇಖರ್ ಮತ್ತು ರಾಮಕೃಷ್ಣ ಇಬ್ಬರೂ ಹೆಗಡೆಗೆ ಕ್ಯಾಪಿಟೇಷನ್‌ಫೀ ಸಲಹೆಗಾರರು, ಎಂದು. ಆಗ ತಾನೆ ಇಂತಹ ಪಿಡುಗಿನ ವಿರುದ್ಧವಾಗಿ ಚರ್ಚೆಗಳಲ್ಲಿ ಭಾಗಿಯಾಗಿದ್ದು, ಅಂದಿನ ಪ್ರಧಾನಿಗೆ ಡಾ॥ ಜ. ಎನ್. ರೆಡ್ಡಿಯವರೊಂದಿಗೆ ದೀರ್ಘವಾದ ಪತ್ರ ಬರೆದು ಹೆಗಡೆ ಅನಾಚಾರವನ್ನು ಬಯಲಿಗೆಳೆದಿದ್ದ ನನಗೆ ಇದು ಆಶ್ಚರ್ಯವೆನಿಸಿತು. ಜೊತೆಗೆ ಮಂತ್ರಿಗಳ ಬೆನ್ನುಹತ್ತಿ ಹೋಗುವ ರೋಗವನ್ನು ನನಗೆ ಅಂಟಿಸಿದ್ದು ಬೇಸರ ತಂದಿತ್ತು. ಲಂಕೇಶ್‌ರನ್ನು ಅವರ ಕಚೇರಿಯಲ್ಲಿ ಕಂಡು ಪ್ರಧಾನಿಗೆ ಬರೆದಿದ್ದ ಪತ್ರವನ್ನು ತೋರಿಸಿ ನನ್ನನ್ನು ಹೆಗಡೆ ಸಲಹೆಗಾರನೆಂದು ಕರೆದಿದ್ದಕ್ಕೆ ಆಕ್ಷೇಪಿಸಿದೆ. ಅವರೆಂದರು: ''ಇದೆನ್ನೆಲ್ಲಾ ಅಷ್ಟು ಸೀರಿಯಸ್ ಆಗಿ ತೆಗೆದುಕೊಳ್ಳಬಾರದು, ರೀ. ಸಾರ್ವಜನಿಕ ಜೀವನದಲ್ಲಿರುವವರಿಗೆ ಸ್ವಲ್ಪ ಸೆನ್ಸ್ ಆಫ್ ಹ್ಯೂಮರ್ ಇರಬೇಕು. ನನಗೆ ತಿಳಿಯದೇ ನಿಮ್ಮ ಅಭಿಪ್ರಾಯ! ಬಿಡಿ, ಒಂದು ಕಡುಬು ತಿನ್ನಿ, ತಗೊಳ್ಳಿ. ಅಥವಾ ಒಂದು ಸಿಗರೇಟ್ ಸೇದಿ ಹೋಗಿ.'' ಗಣೇಶ ಚತುರ್ಥಿಯ ದಿನಗಳವು. ನಾನೆಂದೆ: ''ಅಲ್ಲ ಸ್ವಾಮಿ, ನಾನು ಸಾರ್ವಜನಿಕ ಜೀವನದಲ್ಲಿದ್ದೇನೆ ಅಂತ ಯಾಕೆ ಭಾವಿಸುತ್ತೀರಿ, ನಾನು ಬರೀ ಮೇಷ್ಟ್ರು.'' ''ಹೌದೌದು, ಮೇಷ್ಟ್ರಾಗೆ ಎಷ್ಟು ರಾಜಕೀಯ ಮಾಡ್ತೀರಿ ಅಂತ ನನಗೆ ಗೊತ್ತು'', ಎನ್ನುತ್ತಾ ನಕ್ಕರು.

* * *

ಪೀಠಜ್ಞಾನ ಪ್ರಶಸ್ತಿ ಹೇಗೋ ಪಡೆದ ನಮ್ಮ ಉದ್ದಾಮ ಸಾಹಿತಿಯೊಬ್ಬರು ಡಾಲರ್ ಕಾಲೋನಿಯ ಒಂದು ಮನೆಯನ್ನು ಹೇಗೋ ಪಡೆದುಕೊಂಡ ತರುವಾಯದಲ್ಲಿ ಕೆ. ಆರ್. ವೃತ್ತದಲ್ಲಿ ಒಂದು ಪ್ರತಿಭಟನಾ ಧರಣಿಯನ್ನು ಏರ್ಪಡಿಸಲಾಗಿತ್ತು. ಮಧ್ಯಾಹ್ನ ಲಂಕೇಶ್ ಅಲ್ಲಿಗೆ ಬಂದು ಒಂದರ್ಧ ಗಂಟೆ ನಮ್ಮೊಡನೆ ಕೂತಿದ್ದರು. ''ಈ ನಾಚಿಕೆ ಇಲ್ಲದವರಿಗೆ ಇಂತಹ ಧರಣಿಯಿಂದ ಏನಾಗುತ್ತೆ? ಈ ಜನಕ್ಕಾದರೂ ಏನಾಗಿದೇರೀ? ಇಷ್ಟೇ ಜನವೇ ಇಲ್ಲಿ ಸೇರೋದು? ಜನ ಸೇರಬೇಕ್ರಿ, ಆಗಲೆ ಏನಾದರೂ ಆಗೋದು,'' ಎಂದು ಹೇಳಿ ಅಂದಿನ ಕಾರ್ಯಕ್ರಮದ ಖರ್ಚಿಗೆ ಸ್ವಲ್ಪ ಹಣ ನೀಡಿದರು. ಮನೆಗೆ ಸಂಬಂಧಿಸಿದ ದಾಖಲೆಗಳ ಬಗ್ಗೆ ಪ್ರಶ್ನಿಸಿದ್ದಕ್ಕೆ ಉತ್ತರ ನೀಡಲು ಮುಂದಾಗಲಿಲ್ಲ. ಅವರ ಆರೋಗ್ಯ ಸಾಕಷ್ಟು ಕ್ಷೀಣವಾಗಿತ್ತು. ಅದರ ಬಗೆಗೇ ಸ್ವಲ್ಪ ಹೊತ್ತು ಮಾತನಾಡುತ್ತಿದ್ದೆವು. ಅದಾದ ನಂತರ ಒಂದೆರಡು ಬಾರಿ ಅವರ ಭೇಟಿಯಾಗಿತ್ತು. ಆದರೆ ಅಷ್ಟು ಮಾತುಕತೆ ಮತ್ತೆ ಕೂಡಿಬರಲಿಲ್ಲ.

* * *

ಎಷ್ಟೋ ವರ್ಷಗಳ ಹಿಂದೆ ಅಲಸೂರಿನಲ್ಲಿ ಉಪನ್ಯಾಸ ನೀಡಲು ಹೋಗಿದ್ದ ಲಂಕೇಶರ ಮೇಲೆ ಹಲ್ಲೆ ನಡೆಸಿ ಯಾವುದೋ ಕ್ಷುದ್ರ ಗುಂಪು ದಾಂಧಲೆ ಎಬ್ಬಿಸಿತ್ತು. ಅನೇಕ ಸಂಘ ಸಂಸ್ಥೆಗಳು, ರಾಜಕೀಯ ಪಕ್ಷಗಳು ದೊಡ್ಡ ಮೆರವಣಿಗೆ ನಡೆಸಿ ರಾಜಭವನಕ್ಕೆ ತೆರಳಿ ರಾಜ್ಯಪಾಲರಿಗೆ ಪ್ರತಿಭಟನಾ ಮನವಿ ಸಲ್ಲಿಸಿದ್ದೆವು. ಗೇಟಿನೆದುರೇ ಸಭೆ ನಡೆಸಿ, ಭಾಷಣಗಳನ್ನು ಮಾಡಿ, ಘೋಷಣೆ ಕೂಗಿ, ಮನವಿ ಸಲ್ಲಿಸಿದ್ದೆವು. ಅಂದಿನ ಸಭೆಯಲ್ಲಿ ಕಮ್ಯುನಿಸ್ಟರು, ಕೆಂಬಾವುಟಗಳು ಬೇಕಾದಷ್ಟಿದ್ದವು. ಅದಾದ ಒಂದೆರಡು ವಾರಗಳ ನಂತರ ಲಂಕೇಶ್ ಭೇಟಿಯಾಗಿತ್ತು. ಅವರೆಂದರು: ''ಪರವಾಗಿಲ್ಲಾರೀ ಆ ಕಮ್ಯುನಿಸ್ಟರು, ಅವರೇ ಹೆಚ್ಚಾಗಿದ್ದರಂತಲ್ಲಾ ಅವತ್ತು. ಇಂತಹ ದಾಂಧಲೆಗಳನ್ನು ಇನ್ನೂ ಹೆಚ್ಚಿಸುತ್ತಾರೆ, ಬೇರೆಯವರೂ ಸೇರಿಕೊಳ್ಳುತ್ತಾರೆ. ಎಂಥಾ ಅವಿವೇಕಿಗಳೋ ನೋಡಿ!'' ನಾನು ಹೇಳಿದೆ: ''ನೀವು ಕಮ್ಯುನಿಸ್ಟರನ್ನು ಬಯ್ಯುತ್ತಲೇ ಇರಿ, ಅವರು ಅವರ ಕೆಲಸ ಆದಷ್ಟು ಮಾಡುತ್ತಲೇ ಇರುತ್ತಾರೆ. ನಮಗೇ ಹೊಡೆಯಬೇಕೆಂದು ಕಾಯುತ್ತಾ ಕುಳಿತಿರುವುದಿಲ್ಲ. ಇಂಥ ಅನಿಷ್ಟಗಳು ಶಾಶ್ವತವಾದ ಪಿಡುಗುಗಳು. ಇವತ್ತು ನಿಮಗೆ ಮಾತನಾಡಲು ಅಡ್ಡಿಪಡಿಸಿದ್ದಾರೆ. ದೌರ್ಜನ್ಯವೆಸಗಿದ್ದಾರೆ. ನಾಳೆ ಇವರಿಂದ ಮತ್ತು ಬೇರೆಯವರಿಂದ ಬೇರೆಯವರಿಗೂ ಕುತ್ತು ಕಾದಿರಿಸಿದ್ದೆ''.

''ಏನು ಹಾಳು ಜನಾ ರೀ!'' ಎಂದರು ಲಂಕೇಶ್.

* * *

ಹಾಗೆ ನೋಡಿದರೆ ಅವರು ಯಾರನ್ನೂ ನಿಜವಾಗಿ ''ಹಾಳು ಜನ'' ಎಂದು ಭಾವಿಸಲೇ ಇಲ್ಲ. ಅದು ಅವರ ಭಾಷೆ ಅಷ್ಟೇ ಭಾವನೆ ಅಲ್ಲ. ಲಂಕೇಶ್‌ರ ಅತ್ಯುಚ್ಚ ಸಾಹಸದ ಕೊಡುಗೆಯೆಂದರೆ ಬೇರೆ ಬೇರೆ ರೀತಿಯ 'ಹಾಳು ಜನಕ್ಕೆ' ಮಾತಿನಲ್ಲೇ ಒದೆಯುವುದು, ಇತರರನ್ನು ಒದೆಯಲು ಹುರಿದುಂಬಿಸುವುದು. ಲಂಕೇಶ್ ಮಾಡಿದಷ್ಟನ್ನು, ಅವರು ಮಾಡಿದ ರೀತಿಯಲ್ಲಿಯೇ ಮಾಡುತ್ತಿದ್ದರೆ ಸಾಕೆಂಬುವವರು ಇರಬಹುದು. ಮೂದಲಿಕೆಯ ಮಾತುಗಳು ತಟ್ಟದಿರುವ ಮಟ್ಟದಲ್ಲಿರುವ ದುಷ್ಟರಿಗೆ ಅದು ಏನೇನೂ ಅಲ್ಲ. ಸರ್ವಾಂಗೀಣ ಬದಲಾವಣೆಯೊಂದೇ ಮದ್ದು; ಅದಕ್ಕೆ ಲಂಕೇಶ್ ಒಂದೆರಡು ಮೆಟ್ಟಿಲು ನಿರ್ಮಿಸಿಕೊಟ್ಟಿದ್ದಾರೆ. ಇನ್ನಷ್ಟನ್ನು ಹೇಗೆ ನಿರ್ಮಿಸಿಕೊಳ್ಳಬೇಕೆಂಬುದು ಇಂದಿನ ಪ್ರಬುದ್ಧರಿಗೆ ಬಿಟ್ಟದ್ದು. ''ಹೇಗೆ ನಡೆದಿದೆ ನಿಮ್ಮ ಕ್ರಾಂತಿ?'' ಎಂದು ಲಂಕೇಶ್ ಕೇಳುತ್ತಲೇ ಇದ್ದಾರೇನೋ ಎನ್ನುವ ರೀತಿಯಲ್ಲಿ ಅವರನ್ನು ಭಾವಿಸಿಕೊಳ್ಳುವುದೇ ಅವರಿಗೆ ನನ್ನ ಗೌರವ, ಆತ್ಮೀಯ ವಂದನೆ. – ಅವರ ಜಾಣ - ಜಾಣೆಯರ ಪಟ್ಟಿಗೆ ಸೇರಿಲ್ಲದಿದ್ದರೂ.

○○

# ನಾವು ಮತ್ತು ಅಸ್ತವ್ಯಸ್ತತೆ

ಸೂರಿ ಹಾರ್ದಳ್ಳಿ

ನಾವು ಅನಿಮಿಯತತೆಯ ನಿಯಮಿತತೆಗೆ ಎಷ್ಟು ಹೊಂದಿಕೊಂಡಿದ್ದೇವೆಂದರೆ ಎಲ್ಲವೂ ಕ್ರಮಬದ್ಧವಾದರೆ ತುಂಬಾ ಇರಿಸುಮುರಿಸಾಗುತ್ತದೆ ಎಂಬುದಕ್ಕೆ ಇತ್ತೀಚೆಗೆ ಪಶ್ಚಿಮ ಬಂಗಾಳದ ಸೋನಾಪುರ ರೈಲು ನಿಲ್ದಾಣದಲ್ಲಿ ನಡೆದ ಘಟನೆಯೇ ಸಾಕ್ಷಿ. ನೀವು ಓದಿರಬಹುದು, ರೈಲೊಂದು ಸಮಯಕ್ಕೆ ಸರಿಯಾಗಿ ಬಂದು ಹೋದದ್ದರಿಂದ ಕೋಪಗೊಂಡ ಪ್ರಯಾಣಿಕರು ಸ್ಟೇಷನ್ ಮಾಸ್ಟರಿಗೆ ಥಳಿಸಿದರು ಎಂಬ ವರದಿಯನ್ನು. ಬೇಕಾಬಿಟ್ಟಿ ಆಗಮಿಸುವ, ಬೇಕಾದಾಗ ಹೊರಡುವ ಅಸ್ತವ್ಯಸ್ತತೆಗೆ ಹೊಂದಿಕೊಂಡ ಜನರಿಗೆ ಇದರಿಂದ ತೊಂದರೆ ಯಾಗಿರುವುದು ಸಹಜ, ಅಲ್ಲವೆ ?

ಇಲ್ಲೊಂದು ಸುಂದರ ಉದಾಹರಣೆಯನ್ನು ಕೊಡಬಹುದು. ಒಂದು ರೈಲು ನಿಲ್ದಾಣದಲ್ಲಿ ನಾಲ್ಕು ಗಡಿಯಾರಗಳಿದ್ದವಂತೆ. ನಾಲ್ಕೂ ಬೇರೆ ಬೇರೆ ಸಮಯ ತೋರಿಸುತ್ತಿದ್ದವಂತೆ. ಕುತೂಹಲಿಯೊಬ್ಬ ಕಚೇರಿಗೆ ಹೋಗಿ ದೂರಿದನಂತೆ. ಬಂದ ಉತ್ತರವೇನು ಗೊತ್ತೇ ?

'ಈಗಿನ ಕಾಲದಲ್ಲಿ ಯಾವ ಗಡಿಯಾರವನ್ನೂ ನಂಬೋಕೆ ಆಗೋಲ್ಲ. ಒಂದು ನಿಂತಿರುತ್ತೆ, ಒಂದು ಮುಂದಕ್ಕೆ ಓಡುತ್ತೆ, ಇನ್ನೊಂದು ಹಿಂದಿರುತ್ತೆ, ಹಾಗಾಗಿ ಒಂದಾದರೂ ಸರಿಯಾದ ಸಮಯ ತೋರಿಸಲಿ ಎಂದು ನಾಲ್ಕು ಹಾಕಿದ್ದೇವೆ' ಎಂದು. ಒಪ್ಪುವಿರಾ ? ಇಲ್ಲಿ ಒಂದು ಖಚಿತ ನಿರ್ಧಾರಕ್ಕೆ ಬರುವುದು ಕಷ್ಟವಾಗುತ್ತದೆ. ಯಾಕೆಂದರೆ ಎರಡೂ ಸರಿ, ಎರಡೂ ತಪ್ಪು.

ಎಲ್ಲವೂ ಸರಿಯಾದ ಕಾಲಕ್ಕೆ ಸರಿಯಾಗಿ, ಅದು ಕೆಟ್ಟದ್ದೇ ಆಗಿರಬಹುದು. ನಡೆಯುತ್ತಿದ್ದರೆ ಜನ ಅದಕ್ಕೆ ಹೊಂದಿಕೊಳ್ಳುತ್ತಾರೆ ಎಂಬುದಕ್ಕೆ ಎಂ. ಎಸ್. ನರಸಿಂಹಮೂರ್ತಿ ಬರೆದ ಲೇಖನವೊಂದರ ಸಾಲನ್ನು ಇಲ್ಲಿ ಉದ್ಧರಿಸ ಬಹುದು. ಒಬ್ಬ ತನ್ನ ಅಕ್ಕನನ್ನು ಕೇಳುತ್ತಾನೆ: 'ಅಕ್ಕಾ ಭಾವನಿಗೆ ನನ್ನ ಮೇಲೆ ಕೋಪಾನಾ ?'

'ಯಾಕೋ ?' ಕೇಳಿದಳು ಅಕ್ಕ.

'ಏನಿಲ್ಲ, ಇವತ್ತು ಬೆಳಗಿನಿಂದ ನನ್ನನ್ನು ಅವರು ಬೈದಿಲ್ಲ, ಅದಕ್ಕೇ.'

ಕುಡಿದುಕೊಂಡು ಬಂದು ಗಲಾಟೆ ಮಾಡುವ ಪತಿರಾಯ ಮದ್ಯದಿಂದ ದೂರ ಉಳಿದರೆ, ಸದಾ ರೇಗುತ್ತಾ ತನ್ನೆಲ್ಲಾ ತಪ್ಪನ್ನು ದೂಷಿಸುವ ಅತ್ತೆ ಹೊಗಳತೊಡಗಿದರೆ, ಹೊತ್ತುಗೊತ್ತಿಲ್ಲದೆ ಮನೆಗೆ ಬರುವ ಗಂಡ ಸಮಯಕ್ಕೆ ಸರಿಯಾಗಿ ಆಗಮಿಸಲು ತೊಡಗಿದರೆ, ದೂರದರ್ಶನದಲ್ಲಿ ಒಳ್ಳೆಯ ಕಾರ್ಯಕ್ರಮಗಳು ಪ್ರಸಾರವಾಗತೊಡಗಿದರೆ, ಮುಖ ಗಂಟಿಕ್ಕುವ ಬಾಸ್ ನಗುನಗುತ್ತಾ ಮಾತನಾಡ ತೊಡಗಿದರೆ ಏನಾಗಬಹುದು ? ತಲೆಯಲ್ಲಿ ಸಂಶಯದ ಹುಳು ಕೊರೆಯತೊಡಗುತ್ತದೆ. ಕೆಟ್ಟ ಕೆಟ್ಟ ಕಾರಣಗಳನ್ನು ಮನಸ್ಸು ಕೆದಕತೊಡಗುತ್ತದೆ.

ರಾಜಕಾರಣ ಎಂಬ ವ್ಯವಸ್ಥೆ ಹೊಲಸಾಗಿ ನಾರುತ್ತಿರುವಾಗ ಒಬ್ಬನೇ ಒಬ್ಬ ವ್ಯಕ್ತಿ ತನ್ನ ನಿಷ್ಠೆ, ಸದಾಚಾರ, ಸತ್ಕಾರ್ಯಗಳಲ್ಲಿ ತೊಡಗಿದರೆ ಏನಾಗಬಹುದು? ಅವನು ರಾಜಕಾರಣಕ್ಕೆ ಕ್ಷಿಪ್ರದಲ್ಲಿಯೇ ಅನರ್ಹನಾಗುತ್ತಾನೆ. ಅಲ್ಲಿಂದ ವಿರಮಿಸುತ್ತಾನೆ. ಕುರುಡರ ಊರಲ್ಲಿ ಒಕ್ಕಣ್ಣಿನವನು ಕುರೂಪಿ.



ದೂರದರ್ಶನದವರನ್ನೇ ಬೇಕಾದರೆ ತೆಗೆದುಕೊಳ್ಳಿ. ದೂರದರ್ಶನದಲ್ಲಿ ಬೆಳಗಿನ ಕಾರ್ಯಕ್ರಮ ಎಂದರೆ ನಿರೂಪಕರ ಎದುರು ಕಾಫಿ ಕಪ್ ಇರಬೇಕು, ಅವರು ಕಾಫಿ ಕುಡಿಯುತ್ತಿರಬೇಕು ಅಥವಾ ಹಿನ್ನೆಲೆಯಲ್ಲಿ ಸುಪ್ರಭಾತ ಕೇಳಿಸುತ್ತಿರಬೇಕು, ಕಾಗೆಗಳು ಕಾಕಾ ಎನ್ನುತ್ತಿರಬೇಕು, ಎಂಬ ಅನಧಿಕೃತ ಕಾನೂನನ್ನೇ ರೂಪಿಸಿಕೊಂಡಿದ್ದಾರಾದ ಕಾರಣ, ನಾವು ಅದಕ್ಕೆ ಹೊಂದಿಕೊಂಡಿದ್ದೇವೆ. ರಾತ್ರಿ ಎಂದರೆ ದೂರದಲ್ಲಿ ನಾಯಿ ಬೊಗಳುವ ಶಬ್ದ, ಕಾರ್ಖಾನೆಯ ಸೈರನ್, ಇವು ಇರಲೇಬೇಕು. ಹಾಗಿಲ್ಲವಾದರೆ ನಮ್ಮಲ್ಲಿ ಸಂಶಯ ಮೊಳಕೆಯೊಡೆಯುತ್ತದೆ.

ಸಿನೆಮಾದ ಪೊಲೀಸರನ್ನೆ ತೆಗೆದುಕೊಳ್ಳಿ. ಅವರೆಂದರೆ ಪೆಕರಪೆಕರಾಗಿರಬೇಕು. ಕೆಟ್ಟ ಭಾಷೆಯಲ್ಲಿ ಮಾತನಾಡುತ್ತಾ ಲೇವಡಿ ಮಾಡುತ್ತಾ ನಗೆಪಾಟಲಿಗೀಡಾಗಬೇಕು ಎಂದು ನಿರ್ಧರಿಸಿಬಿಟ್ಟಿದ್ದಾರೆ ಸಿನಿಮಾ ನಿರ್ದೇಶಕರು ಅಷ್ಟೇ ಆಯಿತೆ ? ಇಲ್ಲ, ಸಿನೆಮಾದ ರೌಡಿಗಳು, ಗೂಂಡಾಗಳ ಹೆಸರು ಕ್ರಿಶ್ಚಿಯನ್ ಹೆಸರಾಗಿರಬೇಕು, ನಾಯಕ-ನಾಯಕಿಯರು ಮುಂಜಾನೆ ಜಾಗಿಂಗ್ ಹೋಗಬೇಕು, ಅವರ ಜೊತೆಯಲ್ಲಿ ವಿದೇಶೀ ತಳಿಯ ನಾಯಿಯಿರಬೇಕು (ಸಹಜವಾಗಿ ಅದರ ಹೆಸರೂ ಟಿಪ್ಪೂ, ಜಾನಿ, ರಾಬರ್ಟ್ ಮೊದಲಾಗಿರಬೇಕು). ನಾಯಿಯ ಜೊತೆ ಇಂಗ್ಲಿಷಿನ ಲ್ಲಿಯೇ ಮಾತನಾಡಬೇಕು, ಮೊದಲಾದ ಭಾವನೆಯನ್ನು ಅನುಷ್ಠಾನಕ್ಕೆ ತಂದಿದ್ದಾರೆ.

ದೂರದರ್ಶನ ಪ್ರಸಾರಿಸುತ್ತಿದ್ದ ಒಂದು ಚಲನ ಚಿತ್ರವನ್ನು ನೋಡುತ್ತಿದ್ದ ನನ್ನ ಮಗಳು ನಾಯಕಿಯ ಮಾನಭಂಗ ನಡೆಯುತ್ತಿರುವ ಸಂದರ್ಭದಲ್ಲಿ ಕೂಗಿ ಹೇಳಿದಳು, ಎಲ್ಲಿದ್ದೀಯೋ ಹೀರೋ ? ಬೇಗ ಬರಬಾರದೆ ? ಎಂದು. ಹಾಗೆಯೇ ಕಾರು ವೇಗವಾಗಿ ಓಡುತ್ತಿದ್ದರೆ, ಅದರಲ್ಲಿಯೂ ಅದು ರಾತ್ರಿಯಾಗಿದ್ದರೆ ಅದು ಅಪಘಾತದಲ್ಲಿ ಕೊನೆಗೊಳ್ಳುವುದು ಖಾತರಿ ಎಂಬ ಅನುಭವ ನಮಗೆಲ್ಲಾ ಆಗೇ ಆಗಿದೆ. ಅಕಸ್ಮಾತ್ ಹಾಗಾಗದಿದ್ದರೆ ಮಾತ್ರ ಜನ ನಿರಾಶರಾಗುತ್ತಾರೆ.

ಇನ್ನು ನಮ್ಮ ಪತ್ರಿಕೆಗಳ ಬಗ್ಗೆ ಮಾತನಾಡೋಣ. ಅವೂ ಹಾಗೆಯೇ: ರಾಜಕಾರಣಿಯ ಬಾಯಿಯಿಂದ ಹೊರ ಬಂದಿದ್ದೆಲ್ಲಾ ಪ್ರಕಟಣೆಗೆ ಯೋಗ್ಯ, ಜನರಿಗೆ ತಿಳಿಸಲು ಅರ್ಹವಾದದ್ದು ಎಂದು ಭಾವಿಸಿ ಅವನ್ನು ಮುಖಪುಟದಲ್ಲಿ ಸಚಿತ್ರವಾಗಿ ಪ್ರಕಟಿಸುತ್ತಾರೆ. ಈ ಬೊಗಳೆಗಳು, ನಿರರ್ಥಕ ಕಿರಿಚಾಟಗಳು ಪತ್ರಿಕೆಗಳ ಇಷ್ಟೊಂದು ಕಾಲಂಗಳನ್ನು ಆಕ್ರಮಿಸಿ, ವ್ಯರ್ಥವಾಗಿ ಕಾಗದದ ವೆಚ್ಚಕ್ಕೆ, ಪರಿಣಾಮವಾಗಿ ಮರಗಳ ನಾಶಕ್ಕೆ, ಕಾರಣವಾಗುತ್ತದೆ ಎಂದು ಯಾಕೆ ಅವರು ಯೋಚಿಸಬಾರದು ? ಸಾಧ್ಯವಿಲ್ಲ ಯಾಕೆಂದರೆ ನಮ್ಮ ದೇಶದಲ್ಲಿ ಪ್ರತಿಯೊಂದು ದಿನಪತ್ರಿಕೆಯೂ ಕೆಲ ವಾರಪತ್ರಿಕೆಗಳೂ ರಾಜಕೀಯ ಪಕ್ಷಗಳ ಮುಖವಾಣಿಯೇ ಆಗಿವೆ. ಪಾಪ, ಅವೂ ಬದುಕಬೇಕಲ್ಲ !

ನಮ್ಮ ನಿಯತಕಾಲಿಕಗಳನ್ನೇ ತೆಗೆದುಕೊಳ್ಳಿ. ಪತ್ರಿಕೆಯಲ್ಲಿ ಇಷ್ಟು ಪುಟಗಳು ಕಥೆಗಳಿಗೆ, ಇಷ್ಟು ಸಿನೆಮಾಗಳಿಗೆ, ಇಷ್ಟು ವರದಿಗಳಿಗೆ ಮೀಸಲು ಎಂಬ ಅಲಿಖಿತ ನಿಯಮಗಳನ್ನು ಮಾಡಿಕೊಳ್ಳಲಾಗಿದೆ. ಹಾಸ್ಯ ಲೇಖನಗಳು ಮತ್ತು ವಿಡಂಬನೆಗಳು ಮತ್ತು ವ್ಯಂಗ್ಯಚಿತ್ರಗಳು ಸ್ಥಾನ ಊಟದೆಲೆಯ ತುದಿಯ ಉಪ್ಪಿನಷ್ಟೇ ಪ್ರಾಮುಖ್ಯತೆ ಪಡೆದಿವೆ, ಅಂದರೆ ಅವಿಲ್ಲದಿದ್ದರೂ ಆದೀತು ಎಂಬುದು

# ಕವಿರಾಜ ಮಾರ್ಗ: ಎನಿದರ ಹೆಚ್ಚಳ ?

*ಸಾಹಿತ್ಯ ರಚನೆಗಿಂತಲೂ ಮುಂಚೆ ಸಾಹಿತ್ಯದ ಕೆಲವು ಲಕ್ಷಣಗಳನ್ನು ನಿರೂಪಿಸುವ ಗ್ರಂಥ 'ಕವಿರಾಜ ಮಾರ್ಗ' ಎಂಬ ಮಾತೊಂದಿದೆ. ಅದರ ಚಾರಿತ್ರಿಕ ಹಿನ್ನೆಲೆಯನ್ನು ಗುರುತಿಸಿದರೆ ಮೂಡಿಬರುವ ತಿಳಿವಳಿಕೆಯೇ ಬೇರೆ ಎಂಬುದನ್ನು ಭಾಷಾವಿಜ್ಞಾನದ ಪ್ರಾಧ್ಯಾಪಕರಾದ ಡಾ|| ಕೆ. ವಿ. ನಾರಾಯಣ ಸಮಗ್ರವಾಗಿ ಪ್ರತಿಪಾದಿಸಿದ್ದಾರೆ. ಈ ಮೂಲ ಲೇಖನದ ಇಂಗ್ಲಿಷ್ ಭಾಷಾಂತರವು ಇಂಗ್ಲಿಷ್ ದೈನಿಕವೊಂದರಲ್ಲಿ ಈಗಾಗಲೆ ಪ್ರಕಟವಾಗಿದೆ.*

ಡಾ|| ಕೆ. ವಿ. ನಾರಾಯಣ

೧೮೯೮ರಲ್ಲಿ ಕೆ. ಬಿ. ಪಾಠಕರು ಕವಿರಾಜ ಮಾರ್ಗವೆಂಬ ಗ್ರಂಥವನ್ನು ಮುದ್ರಣ ರೂಪದಲ್ಲಿ ಪ್ರಕಟಿಸಿದರು. ಈ ಗ್ರಂಥವನ್ನು ಕ್ರಿ. ಶ. ೮೫೦ರಲ್ಲಿ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಆಸ್ಥಾನದ ಕವಿ ಶ್ರೀವಿಜಯನು ರಚಿಸಿದನೆಂದು ವಿದ್ವಾಂಸರು ಈಗ ಬಹುಮಟ್ಟಿಗೆ ಒಪ್ಪಿದ್ದಾರೆ. ರಚನೆಯಾದ ಒಂದು ಸಾವಿರ ವರ್ಷಗಳವರೆಗೆ ಕನ್ನಡದ ಕವಿಗಳು, ಮೀಮಾಂಸಕರು ಈ ಗ್ರಂಥವನ್ನು ಆಗಾಗ ಉಲ್ಲೇಖಿಸುತ್ತಲೇ ಬಂದಿದ್ದಾರೆ. ಕಳೆದ ಒಂದು ಶತಮಾನದಲ್ಲಿ ಈ ಗ್ರಂಥವನ್ನು ನಾಲ್ಕು ಬಾರಿ ಪರಿಷ್ಕರಿಸಿ ಪ್ರಕಟಿಸಲಾಗಿದೆ. ನಾವೀಗ ಈ ಗ್ರಂಥವನ್ನು ಎರಡು ರೀತಿಗಳಿಂದ ಪರಿಶೀಲಿಸುವುದು ಸಾಧ್ಯ. ಕವಿರಾಜಮಾರ್ಗ ಕೃತಿಯನ್ನು ಅದು ರಚನೆಯಾದ ಕಾಲದ ಹಿನ್ನೆಲೆಯನ್ನು ಗಮನದಲ್ಲಿ ಇರಿಸಿಕೊಂಡು ನೋಡುವುದು ಒಂದು ಬಗೆ. ಈ ಕೃತಿಯನ್ನು ಮತ್ತೆ ನಮ್ಮ ಸಾಹಿತ್ಯ ಸಂಸ್ಕೃತಿಯ ಭಾಗವನ್ನಾಗಿ ಮಾಡಿಕೊಂಡ ಕಳೆದ ಒಂದು ಶತಮಾನದ ನಿಟ್ಟಿನಿಂದ ನೋಡುವುದು ಇನ್ನೊಂದು ಬಗೆ.

## ಕನ್ನಡ ಅಸ್ಮಿತೆಯ ಕಾಲ

ಕವಿರಾಜ ಮಾರ್ಗವನ್ನು ಬರೆದ ಕಾಲವನ್ನು ನಾವು ಕನ್ನಡದ ಅಸ್ಮಿತೆಯ ಉದಯದ ಕಾಲ ಎಂದು ಕರೆಯಬೇಕು. ದೇಶೀಯ ಸಂಸ್ಕೃತಿಗಳು ತಮ್ಮ ಚಹರೆಗಳನ್ನು ಕ್ರಿಸ್ತ ಶಕೆಯ ಮೊದಲ ಸಹಸ್ರಮಾನದ ವಿವಿಧ ಹಂತಗಳಲ್ಲಿ ಕಂಡುಕೊಂಡವು. ಕವಿರಾಜಮಾರ್ಗ ಕೃತಿಯಲ್ಲಿಯೂ ಈ ಅಸ್ಮಿತೆಯನ್ನು ಕಂಡುಕೊಳ್ಳುವ ಪ್ರಕ್ರಿಯೆ ಕಾಣುತ್ತದೆ. ಕನ್ನಡ ನಾಡು, ನುಡಿ ಮತ್ತು ನಾಡವರ ಬಗೆಗೆ ಮಾತು ಬಂದಾಗಲೆಲ್ಲ ಬಿಡದೆ ಈ ಕೃತಿಯ ಮಾತುಗಳನ್ನು ಉಲ್ಲೇಖಿಸುತ್ತಾರೆ. ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ವಿಸ್ತಾರವಾಗಿತ್ತು , ಕನ್ನಡಿಗರು ಅಕ್ಷರಸ್ಥರಲ್ಲದಿದ್ದರೂ ಕಾವ್ಯಗಳನ್ನು ನೆನಪಿನಿಂದ ಹಾಡುವುದರಲ್ಲಿ ಪ್ರವೀಣರಾಗಿದ್ದರು ಎಂದು ಶ್ರೀವಿಜಯನು ಹೇಳುತ್ತಾನೆ. ಈಗ ಕನ್ನಡದ ಪರವಾದ ಅಭಿಮಾನವನ್ನು ಬೆಳೆಸಲು ಯೋಚಿಸುವವರೆಲ್ಲರೂ ಈ ಮಾತುಗಳನ್ನು ನೆನಪಿಸುತ್ತಲೇ ಇದ್ದಾರೆ. ಕರ್ನಾಟಕದ ಭೌಗೋಳಿಕ ವ್ಯಾಪ್ತಿ ಕುಗ್ಗಿದೆಯೆಂದು, ಕನ್ನಡಿಗರು ಈಗ ಅಭಿಮಾನಶೂನ್ಯರಾಗಿದ್ದಾರೆಂದು ಹೇಳುತ್ತಾ ಕವಿರಾಜ ಮಾರ್ಗದ ಕಾಲದ ಕರ್ನಾಟಕದ ಚಿತ್ರವನ್ನು ನಮ್ಮ ಮುಂದಿಡುತ್ತಾರೆ. ಇಲ್ಲಿ ನಾವು ಗಮನಿಸಬೇಕಾದ ಸಂಗತಿಯೊಂದಿದೆ. ಕವಿರಾಜ ಮಾರ್ಗ ರಚನೆಯಾದ ಕಾಲದ ಅಸ್ಮಿತೆಯ ಸಮಸ್ಯೆಯು ಈಗ ನಮ್ಮನ್ನು ಬೇರೊಂದು ರೀತಿಯಲ್ಲಿ ಕಾಡುತ್ತಿದೆ. ಈ ಎರಡು ಸಂದರ್ಭಗಳಲ್ಲಿ ಗುಣಾತ್ಮಕ ವ್ಯತ್ಯಾಸವಿದೆ. ಕ್ರಿ. ಶ. ೮೫೦ರ ಸುಮಾರಿನಲ್ಲಿ ಕನ್ನಡಕ್ಕೆ ಎದುರಾಗಿ ಇದ್ದುದು ಸಂಸ್ಕೃತದ ಸವಾಲುಗಳು ಎಂದು ಸಾಮಾನ್ಯವಾಗಿ ತಿಳಿಯುತ್ತೇವೆ. ಆದರೆ ಆ ಹೊತ್ತಿಗೆ ಸಂಸ್ಕೃತಕ್ಕೆ ರಾಜಮನ್ನಣೆ ಕಳೆದುಹೋಗಿತ್ತು. ಸಾಂಸ್ಕೃತಿಕವಾಗಿಯೂ ಅದು ದೇಶೀಯ ಭಾಷೆಗಳ ಸವಾಲುಗಳನ್ನು ಎದುರಿಸುವುದು ಅನಿವಾರ್ಯವಾಗಿತ್ತು. ಅಂದರೆ ಕನ್ನಡದಂತಹ ದೇಶೀ ಭಾಷೆಗಳು ಸಂಸ್ಕೃತದೊಡನೆ ಸಂವಾದವನ್ನು ಮಾಡುವ ನೆಲೆಯಲ್ಲಿ ಇದ್ದವು. ಕವಿರಾಜ ಮಾರ್ಗದಲ್ಲಿ ಕನ್ನಡ ಮತ್ತು ಸಂಸ್ಕೃತಗಳ ಸಂಪರ್ಕದಿಂದ ಉಂಟಾಗಿರುವ ಸಮಸ್ಯೆಗಳನ್ನು ಹೇಗೆ ಎದುರಿಸಬೇಕೆಂಬ ಬಗೆಗೆ ಚರ್ಚಿಸಲಾಗಿದೆ. ಸಂಸ್ಕೃತದ ಪದಗಳನ್ನು ಪ್ರತ್ಯಯಗಳನ್ನು ಕನ್ನಡದ ಪದ ಪ್ರತ್ಯಯಗಳ ಜೊತೆಗೆ ಹೇಗೆ ಬೆರೆಸುವುದು ಎಂಬ ಬಗೆಗೆ ಕೈಪಿಡಿಯ ಮಾದರಿಯ ಮಾತುಗಳನ್ನು ಇಲ್ಲಿ ಹೇಳಿದ್ದಾನೆ. ಈ ಮಾತುಗಳು ಕನ್ನಡ ಮತ್ತು ಸಂಸ್ಕೃತಗಳ ನಡುವೆ ಅಸಮ ಸಂಬಂಧ ಇದ್ದಾಗ ಬರುವಂತವಲ್ಲ. ಸಂಸ್ಕೃತದೊಡನೆ ಸಮಾನಸ್ಕಂದವಾಗಿ ನಿಂತು ನಡೆಸುತ್ತಿರುವ ವ್ಯವಹಾರದ ಮಾತುಗಳಿವು. ಅಧಿಕಾರದ ಭಾಷೆಯೊಡನೆ ಇಂಥ ಹೊಂದಾಣಿಕೆಯ ಮಾತುಗಳನ್ನು ಸೂಚಿಸುವುದು ಸಾಧ್ಯವಾಗುವುದಿಲ್ಲ. ಕನ್ನಡವು ಸಂಸ್ಕೃತದಿಂದ ಏನನ್ನು ಪಡೆಯಬಹುದು ಎನ್ನುವುದನ್ನು ಗುರುತಿಸುತ್ತಲೇ ಯಾವ ಯಾವ ಅಂಶಗಳನ್ನು ನಿರಾಕರಿಸಬೇಕು, ಹಾಗೆ ನಿರಾಕರಿಸಲು ಇರುವ ನಿಯಮಗಳು ಯಾವುವು ಎಂಬುದನ್ನು ಕವಿರಾಜ ಮಾರ್ಗಕಾರನು ಹೇಳುತ್ತಾನೆ. ಕ್ರಿ. ಶ. ೮೫೦ರಿಂದ ಒಂದು ಸಾವಿರ ವರ್ಷ ಕಳೆಯುವ ಹೊತ್ತಿಗೆ ನಮ್ಮ ಎದುರು ನಿಂತಿರುವ ಭಾಷೆ ಇಂಗ್ಲಿಷ್. ನಾವು ಇಂಗ್ಲಿಷಿನೊಡನೆ ಕವಿರಾಜಮಾರ್ಗಕಾರನ ಹಾಗೆ ವ್ಯವಹರಿಸುವುದು ಆಗುವುದಿಲ್ಲ. ಕಾರಣ ಕನ್ನಡ ಮತ್ತು ಇಂಗ್ಲಿಷ್‌ಗಳ ಸಂಬಂಧ ಭಿನ್ನ ರೀತಿಯದು. ಇಂಗ್ಲಿಷಿಗೆ ಹಲವು ಬಗೆಯ ಅಧಿಕಾರದ ಒತ್ತಾಸೆ ಇದೆ. ನಮ್ಮ ಆತಂಕಗಳನ್ನು ಮೀರಲು ನಮಗೆ ಕವಿರಾಜ ಮಾರ್ಗದಿಂದ ಉತ್ತರಗಳು ಸಿಗಬಹುದೆಂದು ನನಗೆ ತೋರುತ್ತಿಲ್ಲ.

## ಮೂರು ಭಾಗ

ಕವಿರಾಜಮಾರ್ಗಕಾರನ ಕೃತಿಯಲ್ಲಿ ಮೂರು ಭಾಗಗಳಿವೆ. ಮೊದಲ ಭಾಗದಲ್ಲಿ ಹಲವು ದೇಶ, ಭಾಷೆ, ಜನಗಳಿಗೆ ಸಂಬಂಧಿಸಿದ ಸಂಗತಿಗಳಿವೆ. ಜೊತೆಗೆ ಕಾವ್ಯಭಾಷೆಯಲ್ಲಿ ಯಾವ ಬಗೆಯ ದೋಷಗಳು ಇರಬಾರದು ಎಂಬುದನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಶಬ್ದಾಲಂಕಾರಗಳ ವಿವರಣೆ ಇದೆ. ಮೂರನೆಯ ಭಾಗದಲ್ಲಿ ಅರ್ಥಾಲಂಕಾರಗಳನ್ನು ವಿವರಿಸಲಾಗಿದೆ. ಹಾಗಾಗಿ ಈ ಗ್ರಂಥವನ್ನು ಅಲಂಕಾರ ಗ್ರಂಥವೆಂದು ತಿಳಿಯುತ್ತಾರೆ, ನಿಜ. ಶ್ರೀವಿಜಯನು ತನ್ನ ಗ್ರಂಥವು ಕವಿಗಳಿಗೆ ಕೈಪಿಡಿಯಾಗಬೇಕೆಂದು ಆಶಿಸಿದ್ದನು. ಆದರೆ ಇದು ಕವಿರಾಜ ಮಾರ್ಗ. ಇದು ಕವಿಗಳ ಮತ್ತು ರಾಜರ ಮಾರ್ಗ. ಏಕಕಾಲಕ್ಕೆ ಕವಿಗಳ ಮತ್ತು ರಾಜರ ಮಾರ್ಗವನ್ನು ಹೇಳುವುದು ಶ್ರೀವಿಜಯನ ಗುರಿಯಾಗಿದೆ. ಅಂದರೇನು ? ಮಾರ್ಗವೆಂದರೆ ಸರಿಯಾದ ದಾರಿ. ಕಾವ್ಯಕ್ಕೆ ಕವಿಗಳು ಮಾತ್ರ ದಾರಿ ತೋರಿಸಿದರೆ ಸಾಲದು, ರಾಜರೂ ಒಪ್ಪಬೇಕು. ಇದು ಮುಖ್ಯ. ಮತ್ತೆ ಕ್ರಿ. ಶ. ೮೫೦ರ ಪರಿಸ್ಥಿತಿಯನ್ನು ಗಮನಿಸೋಣ. ರಾಷ್ಟ್ರಕೂಟರ ಸಾಮ್ರಾಜ್ಯ ನಿರ್ಮಾಣವಾಗುತ್ತಿದ್ದ ಕಾಲವದು. ಉತ್ತರಾಪಥದಿಂದ ಬೇರಾಗಿ ತನ್ನದೇ ನೆಲೆಗಳನ್ನು ಕಂಡುಕೊಳ್ಳಲು ಇಲ್ಲಿನ ರಾಜರು ಯತ್ನಿಸುತ್ತಿದ್ದರು. ರಾಜ್ಯಾಡಳಿತದ ಪರಿಕರಗಳನ್ನು ರೂಪಿಸುವುದು ಮುಖ್ಯವಾಗಿತ್ತು. ಅಂಥ ಪರಿಕರಗಳಲ್ಲಿ ಪ್ರಮಾಣ ಭಾಷೆ ಕೂಡ ಒಂದು. ಕವಿರಾಜ ಮಾರ್ಗಕಾರನು ಕನ್ನಡದಲ್ಲಿ ಇದ್ದ ಪ್ರಭೇದಗಳನ್ನು ಕುರಿತು ಹೀಗೆ ಹೇಳುತ್ತಾನೆ: ಈ ಭೂಮಿಯನ್ನು ಹೊತ್ತಿರುವ ವಾಸುಕಿಗೆ ಸಾವಿರ ನಾಲಗೆಗಳು. ಅಷ್ಟು ನಾಲಗೆಗಳಿರುವ ವಾಸುಕಿಗೂ ಕನ್ನಡದ ಬಗೆಗಳನ್ನು ವರ್ಣಿಸುವುದು ಬೇಸರದ, ಅಂದರೆ ಕಷ್ಟದ ಸಂಗತಿ. ಕನ್ನಡದಲ್ಲಿ ಅಷ್ಟು ಬಗೆಗಳು ಇದ್ದವೋ ಇಲ್ಲವೋ ಎಂಬುದು ಮುಖ್ಯವಲ್ಲ. ಈ ಎಲ್ಲ ಭೇದಗಳಲ್ಲಿ ಒಂದು ಮಾತ್ರ ಪ್ರಮಾಣ ಭಾಷೆಯಾಗಬೇಕು. ಅಂಥ ಒಂದು ಪ್ರಭೇದವನ್ನು ಬಳಸುತ್ತಿದ್ದ ಪ್ರದೇಶವನ್ನು ಶ್ರೀವಿಜಯನು ಗುರುತಿಸಿದ್ದಾನೆ. ಇಂದಿನ ಕರ್ನಾಟಕದ ಕೊಪ್ಪಳ, ಪಟ್ಟದಕಲ್ಲು, ಲಕ್ಷ್ಮೇಶ್ವರ, ಒಕ್ಕುಂದ ಎಂಬ ಊರುಗಳನ್ನು ಗಡಿಗಳನ್ನಾಗಿ ಹೊಂದಿದ್ದ ಪ್ರದೇಶವದು. ಕುತೂಹಲದ ಸಂಗತಿ ಎಂದರೆ ಶ್ರೀವಿಜಯನು ಇದ್ದ ನೃಪತುಂಗನ ರಾಜಧಾನಿ ಮಾನ್ಯಖೇಟ (ಮಳಖೇಡ) ಇಂದಿನ ಗುಲಬರ್ಗಾ ಜಿಲ್ಲೆಯಲ್ಲಿದೆ. ಆ ಊರು ಈ ಪ್ರಮಾಣ ಕನ್ನಡವನ್ನು ಆಡುತ್ತಿದ್ದ ಪ್ರದೇಶದಿಂದ ಹೊರಗೆ ಇದೆ. ನಮಗೆ ಗೊತ್ತಿರುವ ನಿದರ್ಶನಗಳನ್ನು ನೋಡಿದರೆ ಅಧಿಕಾರದ ಕೇಂದ್ರ ಭೌಗೋಳಿಕವಾಗಿ ಎಲ್ಲಿ ಇರುವುದೋ ಅಲ್ಲಿನ ಭಾಷಾ ಪ್ರಭೇದವೇ ಪ್ರಮಾಣ ಭಾಷೆಯಾಗಿ ಮನ್ನಣೆ ಪಡೆಯುತ್ತದೆ. ಆದರೆ ಇಲ್ಲಿ ಅಧಿಕಾರದ ಕೇಂದ್ರದಿಂದ ಹೊರಗಿರುವ ಭಾಷಾ ಪ್ರಭೇದವು ಪ್ರಮಾಣ ಭಾಷೆಯೆಂದು ಗುರುತಾಗುವುದು ಗಮನಾರ್ಹವಾಗಿದೆ. ಶ್ರೀವಿಜಯನ ಈ ಕೃತಿಯು ಕನ್ನಡದ ಒಂದು ಪ್ರಭೇದವನ್ನು ಮಾರ್ಗಭಾಷೆ (ಇಂದಿನ ಪರಿಭಾಷೆಯಲ್ಲಿ ಪ್ರಮಾಣ ಭಾಷೆ) ಎಂದು ಗುರುತಿಸುತ್ತಾನೆ.

ಆಧುನಿಕ ಚಿಂತಕರು ಶ್ರೀವಿಜಯನ ಚಿಂತನೆಯಲ್ಲಿ ಒಡಕನ್ನು ಗುರುತಿಸುವುದು ಸಾಧ್ಯ. ಒಂದು ಕಡೆ ಕನ್ನಡದ ಒಂದು ಬಗೆಯನ್ನು ಪ್ರಮಾಣವೆಂದು ಹೇಳುತ್ತಾ ಇನ್ನೊಂದು ಕಡೆ

ಕನ್ನಡಿಗರು ಓದಿನಲ್ಲಿ ಪ್ರವೀಣರಲ್ಲದಿದ್ದರೂ ಕಾವ್ಯ ಪ್ರಯೋಗದಲ್ಲಿ ಪರಿಣತರಾಗಿದ್ದರೆಂದು ಹೇಳುವುದು ವಿಚಿತ್ರವಾಗಿ ಕಾಣುತ್ತದೆ. ಆದರೆ ಶ್ರೀವಿಜಯನ ವಿಚಾರದಲ್ಲಿ ಗೊಂದಲವಿದ್ದಂತಿಲ್ಲ. ಕಾವ್ಯ ರಚಿಸುವುದಕ್ಕೇ ಬೇಕಾದ ಭಾಷೆಯ ಲಕ್ಷಣವನ್ನು ಗುರುತಿಸಿದ ಮಾತ್ರಕ್ಕೆ ಆ ಭಾಷೆ ಜನರಿಂದ ದೂರವೆಂದು ತಿಳಿಯಬೇಕಾಗಿಲ್ಲ. ಹಾಗೆ ನೋಡಿದರೆ ಜನರನ್ನು ಅವರ ಭಾಷೆಯಲ್ಲಿ ಮಾತ್ರವಲ್ಲದೆ ಆಸ್ಥಾನದ ಭಾಷೆಯಲ್ಲೂ ಪಳಗುವಂತೆ ಮಾಡುವುದರಲ್ಲಿ ಆಡಳಿತದ ಯಶಸ್ಸು ಅಡಗಿದೆ. ಜನರು ಹೀಗೆ ಭಾಷಾ ದ್ವಿ ಸ್ತರ ಪರಿಸ್ಥಿತಿಗೆ ಹೋಗುವುದೇ ಅವರು ಪಡೆಯುವ ತರಬೇತಾಗಿರುತ್ತದೆ; ಆಡಳಿತದ ಗುರಿಯಾಗಿರುತ್ತದೆ. ಆದ್ದರಿಂದ ಶ್ರೀವಿಜಯನು ಪ್ರಮಾಣ ಭಾಷೆಯನ್ನು ಎತ್ತಿಹಿಡಿಯುತ್ತಿರುವಾಗಲೇ ಜನರು ಆ ಭಾಷೆಯ ಬಳಕೆಯಲ್ಲಿ ಆಸಕ್ತರಾಗಿದ್ದರೆಂಬುದನ್ನೂ ಹೇಳುತ್ತಿದ್ದಾನೆ.

### ಆಡುಭಾಷೆ - ಬರೆಹದ ಭಾಷೆ

ಇನ್ನೂ ಒಂದು ಮುಖ್ಯ ಸಂಗತಿಯನ್ನು ನಾವಿಲ್ಲಿ ಗುರುತಿಸಬೇಕಾಗಿದೆ. ಜನರು ಆಡುತ್ತಿದ್ದ ಕನ್ನಡ ಮತ್ತು ಬರವಣಿಗೆಯಲ್ಲಿ ಬಳಕೆಯಾಗುತ್ತಿದ್ದ ಕನ್ನಡ, ಇವೆರಡಕ್ಕೂ ಇರುವ ಅಂತರವನ್ನು ಶ್ರೀವಿಜಯನು ಗುರುತಿಸುತ್ತಿದ್ದಾನೆ. ಮಾತು ಬರೆಹವಾಗುವಾಗ ಅಧಿಕಾರವನ್ನು ಪಡೆದುಕೊಳ್ಳುತ್ತದೆ; ಅಧಿಕೃತತೆಯನ್ನು ಪಡೆದುಕೊಳ್ಳುತ್ತದೆ. ಕನ್ನಡ ಮಾತು ಕನ್ನಡ ಬರವಣಿಗೆಗೆ ಇಳಿಯುತ್ತಿದ್ದಾಗ ಈ ಇಕ್ಕಟ್ಟು ಸಹಜವಾಗಿಯೇ ಎದುರಾಗಿದೆ. ಜನರು ಆಡುವ ಭಾಷೆಯಲ್ಲಿ ಬಗೆಗಳು ಹಲವು ಇರಬಹುದು. ಅವು ಹಾಗೇ ಇರಲಿ. ಆದರೆ ಬರೆಯುವ ಭಾಷೆಯಲ್ಲಿ ಮಾತ್ರ ಈ ಭಿನ್ನಭಿನ್ನ ರೀತಿಗಳಿಗೆ ಅವಕಾಶವಿಲ್ಲ ಎನ್ನುವುದು ಕವಿರಾಜಮಾರ್ಗದ ನಿಲುವು. ಈ ಮಾತಿಗೆ ಸಮರ್ಥನೆಯಾಗಿ ಆ ಕೃತಿಯ ಇನ್ನೊಂದು ವಿಚಾರವನ್ನು ನೋಡಬಹುದು. ಕಾವ್ಯ ಭಾಷೆಯಲ್ಲಿ ಉಂಟಾಗುವ ದೋಷಗಳನ್ನು ಕುರಿತು ಹೇಳುವಾಗ ಮೊದಲಲ್ಲಿ ಶ್ರುತಿಕಷ್ಟ (ಕೇಳಿಸಿಕೊಳ್ಳಲು ಕಷ್ಟ) ಮತ್ತು ಶ್ರುತಿದುಷ್ಟ (ಕೇಳಿಸಿಕೊಳ್ಳಲು ಅಸಹ್ಯ) ಎಂಬ ದೋಷಗಳನ್ನು ಚರ್ಚಿಸಿದ್ದಾನೆ. ಈ ದೋಷಗಳ ಲಕ್ಷಣಗಳೇನೇ ಇರಲಿ, ಅವನು ಬರವಣಿಗೆಯ ಭಾಷೆಯನ್ನು ಕುರಿತು ವಿವರಿಸುತ್ತಿರುವುದೆಂಬುದು ನಮ್ಮ ನೆನಪಿನಲ್ಲಿ ಇರಬೇಕು. ಅಂದರೆ ಓದಿನ ಭಾಷೆಯ ಲಕ್ಷಣವನ್ನು ಹೇಳುತ್ತಿದ್ದಾನೆ. ಆದರೆ ಆ ಭಾಷೆಯಲ್ಲಿ ಕಿವಿಯ ಅನುಭವಕ್ಕೆ ಸಂಬಂಧಿಸಿದ ದೋಷಗಳನ್ನು ಗುರುತಿಸುತ್ತಿದ್ದಾನೆ. ಇದನ್ನು ಹೇಗೆ ಅರ್ಥಮಾಡಿಕೊಳ್ಳುವುದು? ಬರೆಹದ ಭಾಷೆಯನ್ನು ಮೌನವಾಗಿ ಓದಿದರೆ ಈ ದೋಷಗಳು ಇರುವುದಿಲ್ಲ. ಆದರೆ ಬರೆದದ್ದನ್ನು ಗಟ್ಟಿಯಾಗಿ ಓದಿದಾಗ ಅದು ಕಿವಿಯ ಅನುಭವವಾಗುತ್ತದೆ. ಆಗ ಕಿವಿಯ ಅನುಭವಕ್ಕೆ ಸಂಬಂಧಿಸಿದ ದೋಷಗಳು ನಿಜವಾಗುತ್ತವೆ. ಕವಿರಾಜ ಮಾರ್ಗಕಾರನ ನಿಜವಾದ ಸಮಸ್ಯೆ ಇಲ್ಲಿ ನಮಗೆ ಗೊತ್ತಾಗುತ್ತದೆ. ಯಾವುದು ಮಾತಾಗಿರುತ್ತದೋ ಅದು ಕಿವಿಯ ಅನುಭವವಾಗುವುದಕ್ಕೂ ಬರೆಹದ ಭಾಷೆ ಉಕ್ತವಾಗಿ ಕಿವಿಯ ಅನುಭವವಾಗುವುದಕ್ಕೂ ಇರುವ ವ್ಯತ್ಯಾಸವನ್ನು ಶ್ರೀವಿಜಯನು ಗಮನಿಸುತ್ತಿದ್ದಾನೆ. ಆದ್ದರಿಂದ ಯಾವ ಬಗೆಯ ರಚನೆಗಳು ಆಡುಮಾತಿನಲ್ಲಿ ದೋಷಗಳಾಗುವುದಿಲ್ಲವೋ ಅವೇ ರಚನೆಗಳು ಬರೆಹದ ಭಾಷೆಯಲ್ಲಿ ದೋಷಗಳಾಗುತ್ತವೆ. ಇಪ್ಪತ್ತನೇ ಶತಮಾನದ ಕೊನೆಗೆ ಬಂದಿರುವ ನಮಗೆ ಈ ಸಮಸ್ಯೆ ಈಗ ಬೇರೊಂದು ರೀತಿಯಲ್ಲಿ ಕಾಡತೊಡಗಿದೆ. ಆಡು ಮಾತಿನ ನೆಲೆಯಲ್ಲಿ ಜನರಲ್ಲಿ ಇದ್ದ ಕನ್ನಡದ ಹತ್ತಾರು ಬಗೆಗಳು ಈಗ ಅವುಗಳನ್ನು ಬಳಸುವವರ ಅಸ್ಮಿತೆಯ ಲಕ್ಷಣವಾಗಿವೆ; ಸೂಚಕಗಳಾಗಿವೆ. ಈ ಮಾತಿನ ಬಗೆಗಳನ್ನು ಬರೆಹಕ್ಕೆ ತರುವ ಯತ್ನಗಳು ನಡೆಯುತ್ತಿವೆ. ಈಗ ಕನ್ನಡದ ಪ್ರಮಾಣ ಭಾಷೆಯ ಚೌಕಟ್ಟುಗಳು ಈ ಕನ್ನಡದ ಪ್ರಭೇದಗಳ ಬರವಣಿಗೆ ಇಕ್ಕಟ್ಟುಗಳನ್ನು ರೂಪಿಸಿದಂತಿದೆ. ಆ ಪ್ರಭೇದಗಳು ಆಡುರೂಪದಲ್ಲಿದ್ದಾಗ ಇದ್ದ ಬೀಸನ್ನು ಬರೆಹದಲ್ಲೂ ಉಳಿಸಿಕೊಳ್ಳುವುದು ಹೇಗೆ ಎಂಬ ಸಮಸ್ಯೆಯನ್ನು ಎದುರಿಸುತ್ತಿವೆ. ಈ ಸಮಸ್ಯೆ ಸಾಹಿತ್ಯದ ಭಾಷೆಯಲ್ಲಿಯೂ ಹಲವಾರು ರೀತಿಯಲ್ಲಿ ಕಾಣಿಸಿಕೊಂಡಿದೆ.

"ಋಣ ಮುಕ್ತ"

ಹೆತ್ತವರ ಋಣ
ಅವರಿದ್ದಾಗ
ತೀರಿಸಲು
ಅಸಮರ್ಥನಾಗಿ
ಹೆತವರು ಸತ್ತಾಗ
ಎಲ್ಲರೂ ಅತ್ತಾಗ
ಆಡಂಬರದಿ
ತಿಥಿ ಮತಿಯ ಮಾಡಿ
ಋಣಮುಕ್ತನಾದೆನೆಂದು
ತಿಳಿದ ತಾ ||

ಕೊಪ್ಪರಂ ಅನ್ನಪೂರ್ಣ
೩೮, ಹಿನೇ ಟೆಂಪಲ್ ರಸ್ತೆ,
[illegible] ಅಡ್ಡರಸ್ತೆ, ಮಲ್ಲೇಶ್ವರಂ.
ಬೆಂಗಳೂರು-೫೬೦ ೦೦೩

### ಮೊದಲ ಶಾಸ್ತ್ರಗ್ರಂಥ

ಈ ಕೃತಿಯನ್ನು ಕನ್ನಡದ ಮೊದಲ ಶಾಸ್ತ್ರ ಗ್ರಂಥವೆಂದು ಗುರುತಿಸುತ್ತಾರೆ. ಇದರಲ್ಲಿ ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ವಿಚಾರಗಳಿರುವಂತೆ ವ್ಯಾಕರಣಕ್ಕೆ ಸಂಬಂಧಿಸಿದ ವಿಚಾರಗಳೂ ಇವೆ. ಕೃತಿಕಾರನಿಗೆ ಏನನ್ನು ಹೇಳಬೇಕು ಮತ್ತು ಏನನ್ನು ಹೇಳಬೇಕಾಗಿಲ್ಲ ಎನ್ನುವ ವಿವೇಚನೆ ಇಲ್ಲದೆ ಹೀಗೆ ಮಾಡಿರುವುದಲ್ಲ. ಇದು ಈಗಾಗಲೇ ಹೇಳಿರುವಂತೆ ಭಾಷೆಯನ್ನು ಕುರಿತ ಗ್ರಂಥ. ಹಾಗಾಗಿ ವ್ಯಾಕರಣ ವಿಷಯಗಳು ಬರುವುದು ಸಹಜ. ಹಾಗೆಯೇ ಛಂದಸ್ಸಿಗೆ ಸಂಬಂಧಿಸಿದ ವಿವರಗಳೂ ಬರುತ್ತವೆ. ಮುಂದಿನ ಶಾಸ್ತ್ರಕಾರರು ಕವಿರಾಜ ಮಾರ್ಗದ ವಿಚಾರಗಳನ್ನು ಎತ್ತಿಕೊಂಡೇ ಮುಂದುವರೆಯುವುದು ಅನಿವಾರ್ಯವಾಯಿತು. ಬರೆಹದ ಕನ್ನಡದ ಲಕ್ಷಣವನ್ನು ಮೊದಲ ಬಾರಿಗೆ ನಿರೂಪಿಸುವ ಕೆಲಸವನ್ನು ಮಾಡಿದ ಶ್ರೀವಿಜಯನು ಹೀಗೆ ಎಲ್ಲ ನಿಟ್ಟಿನಿಂದಲೂ ಸಾಮಗ್ರಿಯನ್ನು ತಂದಿದ್ದಾನೆ. ಈ ಮಾದರಿ ಸಂಸ್ಕೃತದಿಂದ ಬಂದದ್ದಲ್ಲ. ನಮ್ಮ ವಿದ್ವಾಂಸರು ಕವಿರಾಜ ಮಾರ್ಗವನ್ನು ಕುರಿತು ವಿವೇಚಿಸುವಾಗ ಅದು ಎಷ್ಟರಮಟ್ಟಿಗೆ ಸಂಸ್ಕೃತ ಮೂಲಗಳಿಂದ ವಿಚಾರಗಳ ಮಾದರಿಯನ್ನು ತೆಗೆದುಕೊಂಡಿದೆ ಎನ್ನುವುದನ್ನು ಗುರುತಿಸಲು ಯತ್ನಿಸುತ್ತಾರೆ. ಇದು ಈ ಶತಮಾನದ ಚಿಂತನೆಯ ವಿಧಾನ. ಆದರೆ ನಾವೀಗ ಈ ಮಾದರಿಯಲ್ಲಿ ಕವಿರಾಜಮಾರ್ಗವನ್ನು ನೋಡಬೇಕಾಗಿಲ್ಲ. ತನ್ನ ವಿಚಾರಗಳನ್ನು ಹೇಳಲು ತಕ್ಕ ಮಾದರಿಗಳನ್ನು ಹುಡುಕಿಕೊಳ್ಳಬೇಕಾದ ಸನ್ನಿವೇಶ ಶ್ರೀವಿಜಯನ ಎದುರಿಗೆ ಇತ್ತು. ಕವಿರಾಜಮಾರ್ಗ ಕನ್ನಡ ಆಡುಮಾತು ಕಾವ್ಯಭಾಷೆಯಾಗಿ ರೂಪುಗೊಳ್ಳುತ್ತಿದ್ದ ಕಾಲದಲ್ಲಿ ರಚನೆಯಾಗಿದೆ. ಅಲಂಕಾರ ಗ್ರಂಥಗಳಿಗೆ ಅವಶ್ಯವಾದ ಬಲವಾದ ಸಾಹಿತ್ಯ ಪರಂಪರೆ ಕವಿರಾಜ ಮಾರ್ಗಕ್ಕೆ ಇರಲಿಲ್ಲ. ಸಂಸ್ಕೃತ ಅಲಂಕಾರ ಗ್ರಂಥಗಳನ್ನು ಶ್ರೀವಿಜಯನು ಗಮನಿಸಿಲ್ಲವೆಂದಲ್ಲ. ಸಂಸ್ಕೃತವು ಕಾವ್ಯ ಭಾಷೆಯ ಬಗೆ ರೂಪಿಸಿಕೊಂಡಿದ್ದ ಮಾದರಿಗಳು ಕನ್ನಡಕ್ಕೆ ಹೊಂದಿಕೊಳ್ಳುತ್ತವೆಯೇ ಎಂಬುದನ್ನು ಶ್ರೀವಿಜಯನು ಪರಿಶೀಲಿಸುತ್ತಿರುವುದು ಖಚಿತ. ಎಲ್ಲಿ ಆ ಮಾದರಿಯು ಹೊಂದಿಕೊಳ್ಳುವುದಿಲ್ಲವೋ ಅಲ್ಲಿ ಕನ್ನಡಕ್ಕೆ ವಿಶಿಷ್ಟವಾದ ಲಕ್ಷಣವನ್ನು ನಿರೂಪಿಸುತ್ತಾನೆ. ಸಂಸ್ಕೃತದ ಛಂದಸ್ಸನ್ನು ಕನ್ನಡಕ್ಕೆ ಅಳವಡಿಸುವ ಅವನ ಪ್ರಯತ್ನವನ್ನು ಉದಾಹರಣೆಯಾಗಿ ನೋಡಬಹುದು.

### ಸಂಸ್ಕೃತದೊಡನೆ ಮುಖಾಮುಖಿ

ಶ್ರೀವಿಜಯ ಸಂಸ್ಕೃತದೊಡನೆ ನಡೆಸಿರುವ ಮುಖಾಮುಖಿ ಇನ್ನೂ ಹಲವು ನೆಲೆಗಳಲ್ಲಿ ಕಾಣಿಸುತ್ತಿದೆ. ಶಬ್ದಾಲಂಕಾರಗಳಿಗಾಗಿ ಒಂದು ಅಧ್ಯಾಯವನ್ನು ಮೀಸಲಾಗಿರಿಸಿದ್ದಾನೆಂದು ಈ ಮೊದಲೇ ಹೇಳಿದ್ದೇನೆ. ಶಬ್ದಾಲಂಕಾರಗಳು ಭಾಷೆಯ ಶಬ್ದರಸವನ್ನು ಅವಲಂಬಿಸಿರುತ್ತವೆ. ಪ್ರತಿ ಭಾಷೆಗೂ ಅದರದ್ದೇ ಆದ ಶಬ್ದ ಸ್ತರವಿರುತ್ತದೆ. ಶಬ್ದರಚನೆಗೆ ಸಂಬಂಧಿಸಿದ ನಿಯಮಗಳು ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗುತ್ತ ಹೋಗುತ್ತವೆ. ಸಂಸ್ಕೃತ ಆಲಂಕಾರಿಕರು ಆ ಭಾಷೆಯ ಶಬ್ದ ರಚನೆಯ ಸಾಧ್ಯತೆಗಳನ್ನು ಅವಲಂಬಿಸಿ ಶಬ್ದಾಲಂಕಾರಗಳನ್ನು ನಿರೂಪಿಸಿರುವುದು ಖಚಿತ. ಆ ಶಬ್ದಾಲಂಕಾರಗಳನ್ನು ಯಥಾವತ್ತಾಗಿ ಕನ್ನಡಕ್ಕೆ ಹೊಂದಿಸಿಕೊಳ್ಳುವುದು ಆಗದ ಮಾತು. ಏಕೆಂದರೆ, ಕನ್ನಡಕ್ಕೆ ಅದರದೇ ಆದ ಶಬ್ದ ರಚನೆಯ ನಿಯಮಗಳು ಇವೆ. ಈ ಇಕ್ಕಟ್ಟನ್ನು ಶ್ರೀವಿಜಯನು ಎದುರಿಸಿರುವ ವಿಧಾನ ಆಸಕ್ತಿದಾಯಕವಾಗಿದೆ. ಕನ್ನಡ ಕಾವ್ಯ ಭಾಷೆಯು ಸಂಸ್ಕೃತ ಕಾವ್ಯ ಭಾಷೆಯ ಹಾಗೆ ತೋರಬೇಕು. ಆದರೆ ಕನ್ನಡದ ಸಹಜ ಲಕ್ಷಣಗಳು ಆ ಕಾವ್ಯಭಾಷೆಯಿಂದ ದೂರವಾಗಬಾರದು; ಈ ಹೊಂದಾಣಿಕೆಯ ಮಾದರಿಯಲ್ಲಿ ಅವನು ಕನ್ನಡ ಕಾವ್ಯ ಭಾಷೆಯ ಲಕ್ಷಣಗಳನ್ನು ನಿರೂಪಿಸುತ್ತಾನೆ. ಸಂಸ್ಕೃತಕ್ಕೆ ಅಪರಿಚಿತವಾದ ಆದಿಪ್ರಾಸವನ್ನು ಕನ್ನಡಕ್ಕೆ ನಿಗದಿಪಡಿಸಿದನು. ಪದ್ಯದ ಎರಡನೆಯ ಅಕ್ಷರದ ಆದಿ ವ್ಯಂಜನ ಮತ್ತು ಸ್ವರ

ಕೇಂದ್ರಗಳು ಪ್ರತಿ ಪಾದದಲ್ಲೂ ಪುನರಾವರ್ತನೆಯಾಗುವುದನ್ನು ನಿಗದಿಪಡಿಸುವಾಗ ಅವನು ಸಂಸ್ಕೃತದ ಮಾದರಿಯನ್ನು ಮೀರುತ್ತಿದ್ದಾನೆ. ಹೀಗೆ ಹೊಸ ನಿಯಮವನ್ನು ರೂಪಿಸಲು ಕಾರಣ ಕನ್ನಡ ಭಾಷೆಯ ರಚನೆಯಲ್ಲೇ ಅಡಗಿದೆ. ಈ ಹೊಸ ಮಾದರಿ ಮುಂದೆ ಒಂದು ಸಾವಿರ ವರ್ಷ ಕಾಲ ಕನ್ನಡದ ಪದ್ಯ ರಚನೆಯನ್ನು ನಿಯಂತ್ರಿಸಿತ್ತು, ಅಥವಾ ಪದ್ಯ ರಚನೆಗೆ ವಿಶೇಷ ಸೌಲಭ್ಯವನ್ನು ಕಲ್ಪಿಸಿಕೊಟ್ಟಿತ್ತು. ಈ ದಿನಗಳಲ್ಲಿ ಶ್ರೀವಿಜಯನ ಈ ಮಾದರಿ ರಚನೆ ತುಂಬಾ ಸರಳವಾಗಿ ನಮಗೆ ತೋರಬಹುದು. ಈಗ ನಾವು ಎದುರಿಸುತ್ತಿರುವ ಸಮಸ್ಯೆಯನ್ನು ಗಮನಿಸಿದರೆ ಶ್ರೀವಿಜಯನ ಮಾದರಿಯ ಮಹತ್ವ ಗೊತ್ತಾಗುತ್ತದೆ. ಇಂಗ್ಲಿಷ್ ಭಾಷಾ ರಚನೆ ಮತ್ತು ಕನ್ನಡ ಭಾಷಾ ರಚನೆಗಳ ಮುಖಾಮುಖಿಯಲ್ಲಿ ಯೋಗ್ಯವಾದ ಮಾದರಿಯನ್ನು ನಾವಿನ್ನೂ ಹುಡುಕುವುದು ಸಾಧ್ಯವಾಗಿಲ್ಲ. ಕೇವಲ ಭಾಷಾ ಮಿಶ್ರಣದಿಂದ ಸಮಸ್ಯೆಯನ್ನು ಪರಿಹರಿಸಿಕೊಳ್ಳಬಹುದು ಎಂದುಕೊಂಡಿದ್ದೇವೆ.

ಕವಿರಾಜ ಮಾರ್ಗದ ಹುಡುಕಾಟ ಕನ್ನಡಕ್ಕೊಂದು ಕಾವ್ಯ ಭಾಷೆಯನ್ನು ರೂಪಿಸಿಕೊಡುವುದಾಗಿತ್ತು. ಆ ಕಾವ್ಯ ಭಾಷೆ ರಾಜಾಸ್ಥಾನದ ಮನ್ನಣೆಯ ಭಾಷೆಯೂ ಆಗಿರಬೇಕೆಂಬುದು ಕೃತಿಯ ಆಶಯ. ರಾಜಮನ್ನಣೆಯ ಭಾಷೆ ಮತ್ತು ಸಾಹಿತ್ಯ ಸಂಸ್ಕೃತಿಯ ಭಾಷೆಗಳು ಬೇರೆ ಬೇರೆಯಾಗಿರುವುದಿಲ್ಲ. ಇವೆರಡರ ನಡುವೆ ವಿಚಿತ್ರ ಹೊಂದಾಣಿಕೆ ಇರುತ್ತದೆ. ಕೆಲವು ಕಾಲಗಳಲ್ಲಿ ಕವಿಗಳು ರಾಜಾಸ್ಥಾನದ, ಅಂದರ ಅಧಿಕಾರ ಕೇಂದ್ರದ ಭಾಷೆಯಲ್ಲಿ ಮಾತಾಡುತ್ತಿದ್ದಾರೆಂದು ಅನಿಸಿದರೆ ಮತ್ತೆ ಕೆಲವೊಮ್ಮೆ ಅಧಿಕಾರ ಕೇಂದ್ರವು ಸಾಹಿತ್ಯ ಸಂಸ್ಕೃತಿಯ ಭಾಷೆಯಲ್ಲಿ ಮಾತಾಡುತ್ತಿದೆ ಎಂದು ಕಾಣುತ್ತದೆ. ಚರಿತ್ರೆಯಲ್ಲಿ ಇವೆರಡೂ ಮಾದರಿಗಳಿಗೆ ನಿದರ್ಶನಗಳಿವೆ. ಕನ್ನಡದ ಮಟ್ಟಿಗೆ ಈ ಎರಡೂ ಪ್ರಭೇದಗಳು ಒಂದೇ ಹಂತದಲ್ಲಿ ಮೈತಳೆದವು. ಸಾಮ್ರಾಜ್ಯಗಳ ನಿರ್ಮಿತಿಯೊಡನೆ ಸಾಹಿತ್ಯ ಸಂಸ್ಕೃತಿಯಲ್ಲಿ ಆಗುವ ಬದಲಾವಣೆಯನ್ನು ನಾವು ಕಳೆದ ಒಂದು ಸಾವಿರ ವರ್ಷದ ಚರಿತ್ರೆಯಲ್ಲಿ ನೋಡುತ್ತೇವೆ. ಈಗಲೂ ಬೇರೊಂದು ರೀತಿಯಲ್ಲಿ ಇದೇ ತಾಕಲಾಟ ಮುಂದುವರೆದಿದೆ.

ಕವಿರಾಜಮಾರ್ಗವನ್ನು ಕೇವಲ ಕನ್ನಡಿಗರ ಅಭಿಮಾನವನ್ನು ರೂಪಿಸಲು ಅನುಕೂಲವಾಗುವ ಕೃತಿಯೆಂದು ನೋಡುವ ಬಗೆಯಾಗಲೀ, ಈ ಕೃತಿಯು ವ್ಯರ್ಥವಾಗಿ ಸಂಸ್ಕೃತ ಆಲಂಕಾರಿಕರ ಮಾದರಿಯನ್ನು ಕನ್ನಡಕ್ಕೆ ಕಲ್ಪಿಸಲು ಅನುಕರಣೆಯ ಹಾದಿಯನ್ನು ಹಿಡಿದಿದೆ ಎಂದು ತಿಳಿಯುವುದಾಗಲೀ ಅತಿರೇಕಗಳು. ಕನ್ನಡದಂತಹ ಭಾಷೆಗಳು ಅಧಿಕಾರದ ಭಾಷೆಯ ನೆರಳಿನಲ್ಲಿ ಇರುತ್ತಲೇ ತಮ್ಮದೇ ಒಂದು ಅಧಿಕಾರದ ಕೇಂದ್ರವನ್ನು ರೂಪಿಸಿಕೊಳ್ಳುವಾಗ, ಅಸ್ಮಿತೆಯನ್ನು ಕಾಯ್ದುಕೊಳ್ಳಲು ಯತ್ನಿಸುವಾಗ ಎದುರಿಸುವ ಸಮಸ್ಯೆಗಳೇನು ಎನ್ನುವುದನ್ನು ತಿಳಿಯಲು ಕವಿರಾಜ ಮಾರ್ಗವನ್ನು ಒಂದು ಪಠ್ಯವನ್ನಾಗಿ ಓದುವುದು ಸರಿಯಾದ ಮಾರ್ಗ.

**ಡಾ|| ಕೆ. ವಿ. ನಾರಾಯಣ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬




(೧೫ನೇ ಪುಟದಿಂದ)

ಅವರ ಭಾವನೆ. ಇಷ್ಟು ಮಾತ್ರವೇ ? ಅಲ್ಲಲ್ಲ, ಅವು ಯಾವ ಯಾವ ಪುಟಗಳಲ್ಲಿ ಇರಬೇಕೆಂದು ಕೂಡ ನಿರ್ಧರಿಸಲಾಗಿದೆ. ಮುಖಪುಟ ತೆರೆಯುತ್ತಲೇ ಸಂಪಾದಕೀಯ, ಒಳಪುಟಗಳಲ್ಲಿ ಓದುಗರ ಪತ್ರಗಳು, ನಂತರ ಒಂದು ಅನುಭವ ಕಥನ ಅಥವಾ ಪ್ರವಾಸದ ಬಗ್ಗೆ ತಿಳಿವಳಿಕೆ, ಕೊನೆಯ ಪುಟದಲ್ಲಿ ಸಿನೆಮಾ ಅಂತೂ ಇರಲೇಬೇಕು, ಅಲ್ಲಿ ಒಬ್ಬ ನಟಿಯ ಚಿತ್ರ, ಒಂದಿಷ್ಟು ಗಾಸಿಪ್. ಆಗಲೇ ಅದೊಂದು ಸಮಗ್ರ ಪತ್ರಿಕೆ ಎಂದು ಭಾವಿಸಲಾಗುತ್ತದೆ.

ಮತ್ತೆ ಎಲ್ಲಕ್ಕಿಂತಲೂ ಪ್ರಮುಖವಾದುದು, ಭವಿಷ್ಯ. ಪತ್ರಿಕೆಗಳು ಜಾಹಿರಾತಿಲ್ಲದೆಯೂ ಬದುಕಬಹುದು, ಭವಿಷ್ಯದ ಕಾಲಂ ಇಲ್ಲದಿದ್ದರೆ ಸಾವು ಖಚಿತ ಎಂದು ಬೀಚಿ ಹೇಳಿಲ್ಲವೆ ? ಅದು ಇಂದಿಗೂ ದಿಟ. ನಾನವುಗಳನ್ನು ನಂಬುವುದಿಲ್ಲವಾದರೂ ನೋಡಬೇಕೆಂಬ ತುಡಿತ ಕಾಡದಿರುವುದಿಲ್ಲ.

ಇನ್ನು ಈ ಸೌಂದರ್ಯ ಸಾಮಗ್ರಿಗಳ ತಯಾರಕರನ್ನು ಗಮನಿಸಿ. ಅವರಿಗೆ ಈ ಜನಗಳು ಸ್ನಾನ ಮಾಡುವುದಿಲ್ಲ, ಸರಿಯಾಗಿ ಬಟ್ಟೆ ಒಗೆಯುವುದಿಲ್ಲ, ಕೇಶರಾಶಿಯನ್ನು ಕೊಳಕಾಗಿರಿಸಿಕೊಳ್ಳುತ್ತಾರೆ, ಹಲ್ಲುಗಳನ್ನು ಉಜ್ಜುವುದಿಲ್ಲ ಅವರ ಮುಖಗಳು ಗಲೀಜು ಎಂದೆಲ್ಲಾ ಒಂದು ನಂಬಿಕೆಯಿದೆ. ಆ ಸಮಸ್ಯೆಗಳ ಪರಿಹಾರವೊಂದೇ. ತಮ್ಮ ಎಲ್ಲಾ ಶ್ರಮದ ಹಿಂದಿನ ಗುರಿ ಎಂಬಂತೆ ಯಾವ ಚಾನಲ್ ಹಾಕಲಿ, ಅಲ್ಲೊಂದು ಜಾಹಿರಾತು ಕಾಣಸಿಕೊಳ್ಳುತ್ತದೆ. ಹೀಗೆ ಮಾಡಿ, ಹಾಗೆ ಮಾಡಿ, ನೀವು ಸುಂದರವಾಗಿ ಕಾಣುತ್ತೀರಿ, ನಿಮ್ಮತ್ತ ತರುಣಿಯರು/ತರುಣರು ಒಲಿದು ಬರುತ್ತಾರೆ ಎಂದು ಕೂರೆಯುತ್ತಾರೆ. ಈ ಬುದ್ಧಿವಾದ ಹೇಳುವುದರಲ್ಲಿ ಸಿನೆಮಾ ನಟಿಯರು, ನಟರು, ಕ್ರಿಕೆಟ್ ಪಟುಗಳು ಮುಂಚೂಣಿಯಲ್ಲಿದ್ದಾರೆ. ದೇಶಕ್ಕಾಗಿ ಕ್ರಿಕೆಟ್ ಆಡುವುದು, ಸಿನೆಮಾಗಳಲ್ಲಿ ನಟಿಸುವುದರ ಬಗ್ಗೆ ಮಾತ್ರ ತಮ್ಮ ಚಟುವಟಿಕೆಗಳನ್ನು ಸೀಮಿತಗೊಳಿಸದೆ ಇವರು ಹೀಗೆ ಜನಸೇವೆಯಲ್ಲಿ ತೊಡಗಿಕೊಂಡಿದ್ದಾರೆ. ನಾವು ಯಾವ ಯಾವುದೋ ದ್ರವ್ಯಗಳನ್ನು ಕುಡಿದು ಆರೋಗ್ಯ ಕೆಡಿಸಿಕೊಳ್ಳುತ್ತೇವೆ. ಇದು ಬೇಡ, ನೀವು ಕೋಲಾವನ್ನೇ ಕುಡಿದು (ಕೆಡಿಸಿಕೊಳ್ಳಿ) ಎಂದು ಕೂರೆಯುತ್ತಾರೆ. ಫಲ ? ಮಕ್ಕಳಿಗೆ ಕೇಳಿ, ನಿಮಗೆ ಸೇಬು ಹಾಲು ಜ್ಯೂಸ್ ಕೊಡಿಸಲೇ ಎಂದು. ಅವೆನ್ನುತ್ತವೆ, ಬೇಡ ಪೆಪ್ಸಿಯೇ ಬೇಕು, ಎಂದು. ಹೀಗಾಗಿ ನಾವು ಈ ಅಸ್ವಸ್ಥತೆಗೆ ಹಂತಹಂತವಾಗಿ ದಾಸರಾಗುತ್ತಿದ್ದೇವೆ.

ಇನ್ನು ನಮ್ಮ ವಿದ್ಯುತ್ ಮಂಡಲಿಯ ಬಗ್ಗೆ ಯೋಚಿಸೋಣ. ದಿನವೆಲ್ಲಾ ಕರೆಂಟ್ ಇದ್ದರೆ ನಮಗೆ ಅಚ್ಚರಿಯಾಗುತ್ತದೆ. ಕಡಿತವಿದ್ದ ಅವಧಿಯಲ್ಲಿ ಸಮಯಕ್ಕೆ ಸರಿಯಾಗಿ ಕಡಿತ ಮಾಡದಿದ್ದರೆ ಹುಬ್ಬೇರುತ್ತದೆ. ವರ್ಷಕ್ಕೆರಡು ಬಾರಿಯಾದರೂ ವಿದ್ಯುತ್ ದರ ಏರಿಸದಿದ್ದರೆ ಸರಕಾರ ನಿಷ್ಕ್ರಿಯ ಎಂದು ನಾವೇ ತೀರ್ಮಾನಕ್ಕೆ ಬರುತ್ತೇವೆ. ವಿದ್ಯುತ್, ನೀರು, ಬಸ್ ಪ್ರಯಾಣ ದರ, ಹೀಗೆ ದರ ಏರಿಕೆಯ ಒಂದು ಕೆಲಸವನ್ನಾದರೂ ತಪ್ಪದೇ ಮಾಡಿ ಸರಕಾರ ಜನರ ಮನಸ್ಸಿನಲ್ಲಿ ಉಳಿಯುತ್ತದೆ. ಇಲ್ಲವಾದರೆ ಅದು ಇದೆ ಎಂಬುದನ್ನೇ ಮರೆತೇವು.

ಅನೇಕತೆಯಲ್ಲಿ ಏಕತೆ ಎಂಬಂತೆ ಹೀಗೆ ಒಂದು ವಿಧಾನವಿಲ್ಲದ ವಿಧಾನಕ್ಕೆ ನಮ್ಮ ಬದುಕು ಹೊಂದಿಕೊಂಡಿದೆ. ತುಸುವೇ ಬದಲಾವಣೆಯಾದರೂ ನಾವು ಬೆಚ್ಚಿಬೀಳುತ್ತೇವೆ. ಹಾಗಾಗಿ ಈ ಅಸಮರ್ಪಕತೆಯೂ ಸಾಂಗವಾಗಿ ಸಾಗುತ್ತಿರಲಿ. ಇಲ್ಲವಾದರೆ ನಮ್ಮ ಬದುಕು ಕಿರಿಕಿರಿಯನ್ನುಂಟುಮಾಡೀತು.

ಕೊನೆಗೊಂದು ಹೇಳಿಕೆ, ಯಾರೋ ಹೇಳಿದ್ದು. 'ಈ ಹೆಂಗಸರಲ್ಲಿನ ಒಂದೇ ಸಾಮ್ಯತೆ ಎಂದರೆ ಅವರಲ್ಲಿ ಸಾಮ್ಯತೆಯಿಲ್ಲದಿರುವುದು' ಎಂದು. ಹೇಗಿದೆ ?

**ಹೆಚ್. ಸೂರ್ಯನಾರಾಯಣ ಕದಿಲಾಯ**
೨೧೬, ೫ನೇ 'ಎ' ಮೈನ್, ೧೬ನೇ ಕ್ರಾಸ್, ೪ನೇ ಹಂತ,
ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಬೇಕಾಗಿರುವ ಮನುಷ್ಯ

*ನಾವೆಲ್ಲಾ ವಿಚಾರಪ್ರಿಯರು. ಜಾಣತನದ ವಿಚಾರಪ್ರಿಯರು ಕೂಡ. ಎಲ್ಲದರಲ್ಲೂ ನಮ್ಮ ಬೇಳೆ ಬೇಯಿಸಿಕೊಳ್ಳುವ 'ವಿಚಾರ'. ಅತಿ ಚಿಕ್ಕ ವಿಷಯದಿಂದ ಹಿಡಿದು ರಾಷ್ಟ್ರದ ಪ್ರಮುಖ ಸಮಸ್ಯೆಗಳವರೆಗೆ ನಮ್ಮ 'ವೈಚಾರಿಕ' ದೃಷ್ಟಿ ಸ್ವ-ಪ್ರಯೋಜನದಿಂದ ಬಹಳವಾಗಿ ಪ್ರೇರಿತವಾಗಿದೆಯೆ? ಅದನ್ನು ಅಳೆದುನೋಡಲು ಒಂದು ಸಿಪ್ಪೆಯೇ ಸಾಕು.*

ಸ. ರಾ. ಸುಳಕೂಡೆ

ಸ್ವಭಾವಗಳ ವೈಚಿತ್ರ್ಯಗಳಲ್ಲಿ ಜೀವನವಿಂದು ತತ್ತರಿಸುತ್ತಲಿದೆ. ಸುತ್ತ-ಮುತ್ತ ಮೃಗಗಳ ಕಚ್ಚಾಟದ ಹುಚ್ಚಾಟಗಳು ಕರೆಯುತ್ತಲಿವೆ. ಜೀವನವು ಪ್ರತಿ ಹಂತದಲ್ಲೂ ತನ್ನ ಅನುಕೂಲಕರ ಆಸರೆಗಳನ್ನು ಚೌಕಾಸಿ ಮಾಡುತ್ತಲೇ ಸಾಗಿದೆ. ಪ್ರತಿ ಸಂಗತಿಯೊಳಗೆ ಏನಾದರೊಂದು ''ಬದುಕು'' ಮಾಡುವ ದಾರಿಯ ಎಳಿ ಸಿಗತೈತಿ ಎಂಬ ಕಾತುರ, ತವಕ, ನಿರೀಕ್ಷೆ ಇಟ್ಟುಕೊಂಡ ಜೀವ ನಿಂತಿರ್ತದ. ಎಲ್ಲದರಲ್ಲಿ ತನ್ನ ಉದ್ದೇಶ ಈಡೇರಿಕೆಗೆ ಏನಾದರ ಅವಕಾಶ ಮಾಡಬೇಕೆಂಬ ಹವಣಿಕೆ ತಲೆ ತುಂಬ ತುಂಬಿರ್ತದ. ಎಲ್ಲವನ್ನು ಬಳಸಿಕೊಳ್ಳಬೇಕೆಂಬ ''ಆಸೆ''ಗೆ ಅವಧಿನ್ಯ ಸಾಕಾಗುದುಲ್ಲ. ರಾತ್ರಿ ಹಗಲಿ ಹುಡುಕಾಟ, ವಿಪರೀತ ಕಾಟದಾಗ ಜೀವ ಎಲ್ಲಾನು ಸಿಕ್ಕರನ ''ಸುಖ'' ಅನಕೋತ, ಬಾಳ್ವೆ ಮಾಡಕೋತ ಹೋಗಬೇಕಾಗತದ. ಇದ್ದುದ ಬಿಟ್ಟು ಇಲ್ಲದಕ ಬಹಳಷ್ಟು ಮಹತ್ವ ಇರತದ ಅಂತ ತಿಳಕೊಂಡದ್ದ ಜಾಸ್ತಿ ಆಗಿರತದ. ಹಂಗೂ ಹಿಂಗೂ ಏನಾದರೂ ಸುಖ ದುಃಖ ಹೆಗಲಿಗೆ ಹೆಗಲ ಆಗಿ ಇರತಾವ ಅನ್ನುವ ಮಲ್ಲೇಶಿಯ ವಿಚಾರಧಾರೆಯಲ್ಲಿ ಹುರುಳೈತಿ, ವಿಚಾರದೊಳಗ ಮರ್ಮ ಅಡಗೇತಿ. ಅನೇಕ ದ್ವಂದ್ವ ಭಾವಗಳನ್ನು ಮಲ್ಲೇಶಿ ಚಿಕ್ಕವನಿದ್ದಾಗಿನಿಂದಲೂ ಎದುರಿಸುತ್ತ, ಆಲೋಚಿಸುತ್ತ ತನ್ನ ಹಿಂಡ ಮಂದ್ಯಾಗ ವಿಚಾರದ ಕುಳ-ಹುಳ ಅನ್ನಿಸ್ಕೊಂಡವ. ವಿಷಯಾಸಕ್ತಿ, ಆಲೋಚನೆಯ ಪರಿಸ್ಥಿತಿ ಅರ್ಥ ಮಾಡಿಕೊಂಡಿದ್ದ ಅವನ ಗೆಳೆಯರು ತಮ್ಮ ನಡುವೆ ''ಚಿಂತಕ'' ಮಲ್ಲೇಶಿ ಇರದಿದ್ದರ ಲೋಕಾಂತದ-ವೇದಾಂತದ ಕಳೆನ ಕಟ್ಟುದುಲ್ಲ ಅನ್ನುತ್ತಿದ್ದರು. ಮಲ್ಲೇಶಿ ವಿಚಾರ ಮಾಡಕ-ಹೇಳಾಕ ಮತ್ತು ವಿಷಯದಾಗ ಮುಳಗಾಕನ್ಯ ಹುಟ್ಟಿದಂಗ ವರ್ತಿಸುತ್ತಿದ್ದ. ಎಲ್ಲಾ ತಿಳಕೊಂಡು, ತುಳಕುಬೇಕು ಎಂಬ ಅವನ ಹಂಬಲಕ ಎಂದೂ ಬ್ರೆಕ್ ಹಾಕಿದವನಲ್ಲ.

ನಿರೀಕ್ಷೆ, ಪರೀಕ್ಷೆ, ಆಲೋಚನೆ ಮಲ್ಲೇಶಿಯ ಪರಮ ಮಿತ್ರರು. ಒಮ್ಮೊಮ್ಮೆ ಆಲೋಚನೆಯ ಸೂತ್ರ ಅವನ ಕೈಯಾಗ ಇದ್ದರ, ಕೆಲವು ಸಲ ಆಲೋಚನೆಯ ಕೈಯಾಗ ಸಿಲುಕಿ ಎಲ್ಲೆಲ್ಲೂ ವಿಹರಿಸಿ ಅಬ್ಬಾ! ಎಂದು ತಿರುಗಿ ಸ್ವಸ್ಥಳಕ ಬಂದಂಗ ಆಗಿ, ಅನಾಹುತದಿಂದ ಪಾರಾದಷ್ಟು ಖುಷಿ ಪಟ್ಟು, ತನ್ನ ಸಾಹಸದ ಹಿರಿಮೆಯನ್ನು ಗೆಳೆಯರಿಗೆ ಹೇಳಿದ್ದೇ ಹೇಳಿದ್ದು. ಮಲ್ಲೇಶಿಯ ಗೆಳೆಯರಂತೂ ಮಲ್ಲೇಶಿನ ಕಂಡಾಗೆಲ್ಲ ಏನಾದರೊಂದು ಹೊಸ ಸುದ್ದಿ ಪಡಕೊಂಡೇ ತೀರುತ್ತಿದ್ದರು. ಅಪ್ಪಿ ತಪ್ಪಿ ಒಂದೆರಡು ದಿನ



ಸಿಗದಿದ್ದರೆ ಏನೋ ಕಳಕೊಂಡಂತೆ ಅನಿಸದೇ ಅವರಿಗೆ ಬಿಡುತ್ತಿರಲಿಲ್ಲ.

ಒಂದು ಸಲ ಮಲ್ಲೇಶಿ ಜನಸಂದಣಿ ಭೇದಿಸಿಕೊಂಡು ಜಾಗ ಮಾಡಿಕೊಂಡ ಕುಳಿತು, ಯಾವದೋ ಗಹನ ವಿಷಯದಾಗ ಮುಳುಗಿ ವಿಚಾರಕ ಚಾಲನೆ ಕೊಡಬೇಕೆನ್ನುವುದರೊಳಗ, ಅಂವ ಕುಳಿತ ತುಸು ದೂರದಲ್ಲಿಯೇ ಅದ್ಯಾವನೋ ಬಂದು ತಟ್ಟ ಅಂತ ''ಬಾಳೆ ಹಣ್ಣಿನ ಸಿಪ್ಪಿ'' ಒಗೆದು ಸಟ್ಟಂತ ನೋಡು ನೋಡುವುದರಲ್ಲಿಯೇ ಮಾಯವಾಗಿಯೇ ಬಿಟ್ಟ. ಮಲ್ಲೇಶಿ ಪಕ್ಕದಲ್ಲಿ ಕುಳಿತವನೊಬ್ಬ ಕಣ್ಣ ಕಟ್ಟುವಂತೆ ಬಾಳೆ ಹಣ್ಣಿನ ಸಿಪ್ಪೆ ಒಗೆದದ್ದನ್ನು ವರ್ಣಿಸಿಯೇ ವರ್ಣಿಸಿದ. ಅಂವ ಅಪ್ಪಿ-ತಪ್ಪಿ ಕೈಗೆ ಸಿಕ್ಕಿದರೆ ಒಂದು ಎಲಬು ಉಳಿಯದಾಗುತ್ತಿದ್ದು, ಮಗಾ ಬಚಾವ ಆದ ಅನ್ನುತ್ತ ಕಳವಳಗೊಂಡು ಕಣ್ಣು ಕಿಸಿದು ಕುಂತ. ಮಲ್ಲೇಶಿಗೂ ಒಂದು ರೀತಿ ಕನಿಕರ ಬಂದು ಸಿಪ್ಪಿ ಹಿಂಗ ಒಗೆದದ್ದನ್ನು ನೋಡಿದರ ತನಗೂ ಕೆಡಕ ಅನಸ್ತದ ಎಂದು ರಾಗ ಎಳೆದು, ನಿಮ್ಮ ಮಾತು ಬಲು ಚೋಲು ಅದಾವ, ಅಂದರ ಬಾಳೆ ಹಣ್ಣು ತಿಂದಂಗ, ಬಾಳೆ ಹಣ್ಣಿನ ಸಿಪ್ಪಿ ಒಗೆದಂಗ ಎಂದು ಅಭಿಪ್ರಾಯ ಹೇಳೋದನ್ನು ಮರಿಲಿಲ್ಲ. ಇಷ್ಟ ಮಾತುಕತೆಯಾಗ ಮುಳಿಗಿಯೂ ಮಲ್ಲೇಶಿ ಬಿದ್ದ ಬಾಳೆ ಹಣ್ಣಿನ ಸಿಪ್ಪೆಯ ಮೇಲೆಯೇ ಕಣ್ಣಿಟ್ಟ. ಅಷ್ಟರೊಳಗೆ ಅಲ್ಲಿಗೆ ಕೈಯಲ್ಲಿ ಬೆತ್ತ ಹಿಡಕೊಂಡ ಬಂದ ಪೊಲೀಸ, ಇದನ ಯಾರು ಇಲ್ಲಿ ಚೆಲ್ಲಾರ, ಏ ಏನೋ ಬಾಳೆ ಹಣ್ಣು ತಿಂದ ಸಿಪ್ಪಿ ಹಿಂಗ ಚೆಲ್ಲೋದೇನೋ? ಎಂದು ಮಲ್ಲೇಶಿಯನ್ನೇ ಗದರಿಸಿ ಕೇಳಿಯೇ ಬಿಟ್ಟ. ಮಲ್ಲೇಶಿ ಹೌಹಾರಿದಂತ ಆಗಿ ಏನೋ ಹೇಳಬೇಕೆಂದು ಹೊರಟಾಗ, ಏನ್ರಿ ಸಾಹೇಬರ ಬರ್ರಿ ಚಹಾ ಕುಡಿಯೋಣ ಎಂದೆನುತ ಅಲ್ಲಿಗೆ ಬಂದ ಪೊಲೀಸನ ಗುರುತಿನವ ಪೊಲೀಸನನ್ನು ಸಮೀಪದ ಚಹಾದಂಗಡಿಗೆ ಕರಕೊಂಡು ಹೋದ. ಮಲ್ಲೇಶಿಗೆ ವರ್ಣನಾ ಲೋಕದಿಂದ ಜಂಗಲ್ ರಾಜ್ಯಕ್ಕೆ ಬಂದ ಭಾಸವಾಗಿ, ಸಿಪ್ಪೆಯೊಳಗೆ ಮತ್ತ ತನ್ನ ಆಸಕ್ತಿಯನ್ನು ಕ್ರೋಢೀಕರಿಸಿಕೊಂಡ. ''ಸಿಪ್ಪೆ'' ಸುತ್ತ ತನ್ನ ವಿಚಾರ ಮುಂದುವರಿಸಿದ.

ನಾನು ಇಲ್ಲಿ ಯಾಕಾರ ಬಂದು ಕುಳಿತೆ, ಒಬ್ಬ ಸಿಪ್ಪೆ ಒಗೆದು ಹೋಗತಾನ, ಇದು ನೀನ್ಯ ಒಗದದ್ದೆಂದು ಪೊಲೀಸ್ ನನ್ನ ಕೇಳತಾನ, ಇದರಾಗೇನಾದರೂ ಅರ್ಥ ಇರಬಹುದೆಂದು ತನ್ನ ವಿಚಾರ ಲಹರಿಯನ್ನು ಮಲ್ಲೇಶಿ ಆಳಕ್ಕೆ ಇಳಿಸುವ ಪ್ರಯತ್ನಕ್ಕೂ ಮುಂದಾದ. ಇದರ ವಿಚಾರದಾಗ ಮುಳುಗಿ-ಮುಳುಗಿ ಏಳಬೇಕೆನ್ನೋದರಾಗ ಪಂಚಕಿ ಮಾಡುವ ಪಂಚಪ್ಪ ಎಲ್ಲಿಂದಲೋ ಬಂದವನ, ಸಿಪ್ಪಿ ಕಡೆಗೆ ಲಕ್ಷ್ಯ ಹಾಕಿ, ಇದಕ್ಕೊಂದು ಏನಾದರೂ ಗತಿಗಾಣಿಸಬೇಕೆಂದು ಹಲಬುತ್ತ ''ಹಿಂಗ ಇದನ ಒಗದ ಹೋದಾಂವ ಲಫಂಗ ಇರಬೇಕು, ಈಗಿರುವ ಆಡಳಿತಿನ ಆಶಿಸ್ತೇ ಇದಕ್ಕೆಲ್ಲ ಹೊಣೆ. ಒಗೆದರೇನಾಯ್ತು ತಗ್ಯಾಕ ಒಂದಿಷ್ಟು ಹೆಚ್ಚಿಗೆ ಮಂದಿನ ನೇಮಸಾಕ ಸರಕಾರಕ ಏನ್ ಧಾಡಿ ಆಗೇತಿ, ಎಲ್ಲಾ ಮೂರಾಬಟ್ಟೆಯಾಗಿ ಹೋಗೇತಿ, ಸಾರ್ವಜನಿಕ ಸ್ಥಳದಾಗ ಹಿಂಗ ಸಿಪ್ಪಿ ಒಗೆಯೋದು

ಮಹಾಪರಾಧ ನೋಡ್ರಿ'', ಎನ್ನುತ್ತ ಒಂದು ಚಿಕ್ಕ ಭಾಷಣನ ಬಿಗಿದ. ಸಿಪ್ಪೆ ಮಾತ್ರ ಅನಾಥವಾಗಿ ಅಲ್ಲಿಯೇ ಬಿದ್ದಿತ್ತು.

ಮಲ್ಲೇಶಿ ತದೇಕ ಚಿತ್ತದಿಂದ ಸಿಪ್ಪಿ ಚಿಂತ್ಯಾಗನ ಮಗ್ನನಾಗಿದ್ದ. ಪಂಚಪ್ಪ ಮಲ್ಲೇಶಿನ ಅಲುಗಾಡಿಸಿ ಜೈ ಅನ್ನಲೇ ತಮ್ಮ ಎಂಥ ಎಬಡ ಇದಿ, ಇಷ್ಟು ತಿಳೀದಿದ್ದರೆ ಇಲ್ಯಾಕ ಬಂದಿದಿ ಎಂದ. ಇನ್ನೇನು ಹುರುಪಿನಿಂದ ಮಲ್ಲೇಶಿ ''ಜೈ'' ಎನ್ನುವವನಿದ್ದ; ಅಷ್ಟರೊಳಗೆ ಮತ್ತೊಬ್ಬ ವೇಷಧಾರಿ ಬಂದೇ ಬಿಟ್ಟ, ಸುಮ್ಮನಿರಿ! ಎಲ್ಲಾರು ಕೇಳರಿ ಲಕ್ಷ್ಯಕೊಟ್ಟು ಕೇಳರಿ ಆಳುವವರಿಗೆ ಕೇಳುವವರಿಗೆ ಇರಬೇಕು, ಆದರ ಇಷ್ಟ ಹಲಕಾ ಇರಬಾರದು. ಸಿಪ್ಪೆ ಬಿದ್ದದ್ದು ಖರೆ ಅದ, ಇದರಾಗ ಸರಕಾರ ಪಾಲು ಏನೈತಿ? ಇದನ್ನು ಇಲ್ಲಿ ಹಿಂಗ ಒಗ್ಯಾಕ ಹಚ್ಚಿದವನ ನಾವ ಹುಡುಕಿಯೇ ತೀರತೇವ, ಇದರಾಗ ಯಾವ ಸಂಶಯನು ನಿಮಗ ಬರಬಾರದು. ನಾ ಈಗಿಂದೀಗಲೇ ನಮ್ಮ ನಾಯಕರಿಗೆ ಈ ವಿಷಯ ತಿಳಿಸಿ ಇದಕ್ಕೊಂದು ಗತಿ ಹಚ್ಚತ್ತೇನಿ, ನಮ್ಮ ನೇತಾರರಿಗೆ ಜೈ ಅನ್ನಿರಿ, ವಿರೋಧಿಗಳಿಗೆ ಧಿಕ್ಕಾರ ಹಾಕರಿ ಎಂದು ಒಂದೇ ಉಸರಿನಲ್ಲಿ ಹೇಳಿ ಪಂಚಪ್ಪನ ಮುಖ ನೋಡಿದ. ಹೋಗುವಾಗ ಮಲ್ಲೇಶಿಗೆ-ಏ ತಮ್ಮಾ ನಿ ಬಾಳ ವಿಚಾರ ಮಾಡುಹಂಗ ಕಾಣತೈತಿ, ಹುಷಾರಾಗಿ ಇರು ಎಂದ.

ಮಲ್ಲೇಶಿ-ಸಿಪ್ಪೆ – ಸಿಪ್ಪೆ-ಮಲ್ಲೇಶಿ ವ್ಯಾಖ್ಯಾ ಕಳದಂತೆ ಒಂದು ರೀತಿಯ ಸಂಬಂಧದ ಗುದ್ದಾಟನ ಸುರುವಾದಂತೆ ಕಂಡಿತು. ಮಲ್ಲೇಶಿಯ ತಾಳ್ಮೆ ಕಟ್ಟಕಡೆಯ ಎಚ್ಚರಿಕೆ ಕೊಟ್ಟು, ಎದ್ದೇಳು ಆ ಸಿಪ್ಪೆ ತೆಗೆದು ಕಸದ ಡಬ್ಬಿಗೆ ಹಾಕು ಎಂದಿತು. ಆದರ ಮನಸ್ಸು ಸುಮ್ಮನಿರು ಇನ್ನೂ ವಿಚಾರ ಮಾಡೋದು ಬಹಳಷ್ಟು ಐತಿ ಎನ್ನುತ ಅವನನ್ನು ತೆಪ್ಪಗೆ ಕೂಡ್ರಿಸಿತು. ತಲೆಯೊಳಗೆ ವಿಚಾರ ಸರಮಾಲೆ ಬಿಚ್ಚಿ ತಲೆ ಚಿಟ್ ಅನ್ನಾಕ ಹತ್ತೋದರಾಗ ತಲಿ ತಂಪ ಮಾಡುವ ಡಾಕ್ಟರನೂ ಅಲ್ಲಿಗೆ ಬಂದ; ಸಿಪ್ಪಿ ಅವಾಂತರ ನೋಡಿ, ಇಲ್ಲಿ ಯಾರಾದರೂ ಬೀಳೋದು ನಕ್ಕಿ ಎಂದುಕೊಂಡು, ಸಿಪ್ಪೆ ಮ್ಯಾಲ ಕಾಲ ಕೊಟ್ಟು ಯಾರಾದರೂ ಜಾರಿ ಬಿದ್ದರ ಸೀದಾ ನಮ್ಮ ದವಾಖಾನೆಗೆ ಕರಕೊಂಡು ಬರ್ರಿ, ಕರಕೊಂಡ ಬಂದವರಿಗೆ ಕಮಿಷನ್ ಕೊಡತ್ತೇವಿ, ಅಂದು ದವಾಖಾನೆಯ ದಾರಿ ಹಿಡಿದ.

ಮಲ್ಲೇಶಿಗೆ ಹೊಸ ಹೊಸ ಅನುಭವ ಆಗಾಕ ಹತ್ತಿದಂತಾಗಿ, ತನ್ನ ವಿಚಾರಕ ಮತ್ತಷ್ಟು ಕೀಲಿ ಕೊಡುತ್ತ ಕುಳಿತ. ಅತಿ ಗೆಲುವಿನಿಂದ ಜೋರಿನಿಂದ ಇಬ್ಬರು ತರುಣರು ಯಾವುದೋ ಅವಿವೇಕದ ಪ್ರಕರಣ ಕುರಿತು ಮಾತನಾಡುತ್ತ ನೆಲ ನೋಡದ ಹಾಗ ಬಂದು ಸೀದಾ ಸಿಪ್ಪೆ ಮ್ಯಾಲ ಒಬ್ಬ ಕಾಲು ಇಟ್ಟ, ಜಾರಿ ಧೊಪ್ಪಂತ ಮುಖ ಮಾಗಿಲ್ಲ ಮಾಡಿ ಬಿದ್ದೇ ಬಿಟ್ಟ, ಸತ್ತೇ ಎಪ್ಪಾ ಎನ್ನುತ ಚೀರಿದ. ಏನ್ ಮಂಗ್ಯಾ ಇದಿ, ನೋಡಿಕೊಂಡ ಹೋಗಾಕ ನಿನಗೇನ ಆಗಿತ್ತ ಎಂದು ಅವನ ಗೆಳೆಯ ಎನ್ನುತ್ತ, ಏಳು ಹಾಗ್ಯಾ ಇದಿ ಎಂದು ಕೈ ಹಿಡಿದು ಎಬ್ಬಿಸಾಕ ಪ್ರಯತ್ನಸಿದ. ಅಷ್ಟರೊಳಗೆ ಅವರಿಬ್ಬರ ಸುತ್ತ ಅನೇಕ ಪ್ರತ್ಯಕ್ಷ ವ್ಯಕ್ತಿಗಳು ನಾ ಮುಂದ ನೀ ಮುಂದ ಎಂದು ಬಂದು, ಅಕ್ಸಿಡೆಂಟ್ ಕ್ಲೇಮ್ ನಾ ಕೊಡಸತ್ತೇನಿ, ಸಾರ್ವಜನಿಕ ಹಿತಾಸಕ್ತಿ ಕೇಸ್ ನಾ ಹಾಕತೇನಿ, ರಿಯಾಯಿತಿಯಾಗ ಚಿಕಿತ್ಸೆ ಮಾಡಸ್ತೇನಿ ಎನ್ನುವ ಧ್ವನಿಗಳು ಗದ್ದಲ ಎಬ್ಬಿಸಿದವು. ಅಂಗಾತ ಬಿದ್ದವ ನೋವು-ನೋವು ಎಳೆದಾಡಬೇಡಿ, ನೀರು ನೀರು ಎನ್ನುತ ಬೊಬ್ಬೆ ಹಾಕಿದರೂ ನೀರು ತರಾಕ ಯಾರೂ ಹೋಗದಕ, ಅವನ ಗೆಳೆಯಾನs ನೀರು ತಂದು ಕುಡಿಸಿದ. ಎಲ್ಲರ ಧ್ವನಿ ಕೇಳಿದ ಗೆಳೆಯ, ನೀವೆಲ್ಲರೂ ಹೇಳೋದು ಕೇಳಿದರೆ ''**ಬೀಳೋದನ ಚೋಲು ಅನಸತದ**'' ಅಂದ. ಇದನ್ನೆಲ್ಲ ವಿಚಾರದ ವರೆಗೆ ಹಚ್ಚುತ್ತ ಮಲ್ಲೇಶಿ ಅಲುಗಾಡದೇ ಅಲ್ಲೇ ನಿಂತಕೊಂಡಿದ್ದ.

ಮಲ್ಲೇಶಿ ಸಿಪ್ಪಿ ಜನಗಳ ಕಾಲಾಗ ಸಿಕ್ಕು ಇನ್ನಷ್ಟು ಅನಾಹುತಕ ಕಾರಣವಾಗಬಹುದೆಂದು ಲೆಕ್ಕ ಹಾಕೋತಿರುವಾಗ, ಅಲ್ಲಿಗೊಬ್ಬ ಬಂದ. ಬಾಳೇ ಹಣ್ಣಿನ ಸಿಪ್ಪೆ ಬಿದ್ದುದನ್ನು ಗಮನಿಸಿದ. ಅದರ ಹತ್ತಿರ ಹೋಗಿ ಬಗ್ಗಿ ಕೈಯಾಗ ತಕ್ಕೊಂಡು ಕಸದ ಗುಂಡಿಗೆ ಹಾಕಿ, ಕೈ ಜಾಡಿಸಿಕೊಂಡು ನಡೆದೇ ಬಿಟ್ಟ. ಇದನ್ನು ನೋಡುತ್ತಿದ್ದ ಮಲ್ಲೇಶಿಗೆ ಜ್ಞಾನೋದಯ ಆದಂಗ ಆಗಿ ಎಲ್ಲರಿಗೂ ಕೇಳಿಸುಹಂಗ ದೊಡ್ಡ ಧ್ವನಿಯಲ್ಲಿಯೇ ಕೂಗಿ ಹೇಳಿದ, ಇವನs **ನಮಗ ಈಗ ''ಬೇಕಾಗಿರುವ ಮನುಷ್ಯ'', ಇವನs ನಮಗೆ ಈಗ ''ಬೇಕಾಗಿರುವ ಮನುಷ್ಯ''**. ಇದ್ದವರಲ್ಲಿ ಎಷ್ಟು ಮಂದಿಗೆ ಈ ಮಾತು ಕೇಳಿಸಿತೋ ಗೊತ್ತಿಲ್ಲ, ಕೇಳಿಸಿದರೂ ವಿಚಾರ ಮಾಡುವ ಮಂದಿ ಅಷ್ಟಾಗಿ ಇರಾಕಿಲ್ಲ, ಎಂದು ಲೆಕ್ಕ ಹಾಕುತ್ತ ವಿಚಾರ ಲಹರಿಯನ್ನು ತೇಜಗೊಳಿಸುತ್ತ ಮಲ್ಲೇಶಿ ರೈಲು ಗಾಡಿ ಹತ್ತಿ ಮನೆ ಸೇರಿದ. ಮರುದಿನ ಇದs ಸುದ್ದಿಯೊಳಗ ಸುದ್ದಿಯಾದ.

ಸ. ರಾ. ಸುಳಕೂಡೆ
ಜಿಲ್ಲಾ ಸಂಖ್ಯಾ ಸಂಗ್ರಹಣ ಅಧಿಕಾರಿಗಳ ಕಛೇರಿ, ಬೆಳಗಾವಿ

# ದೇವ ಮಾನವ

ಮರಾಠಿ ಮೂಲ : ಶರಣಕುಮಾರ ಲಿಂಬಾಳೆ

ಸಾಹುಕಾರನ ಹೊಲದಲ್ಲಿಯ ಗಿಡ ಕಡಿದದ್ದರಿಂದ ನನ್ನ ಅಪ್ಪನ ಮೇಲೆ ಖಟ್ಲೆ ದಾಖಲು ಮಾಡಿದರು. ಮತ್ತು ಪೋಲೀಸರು ಅವನನ್ನು ಹಿಡಿದುಕೊಂಡು ಹೋದರು. ಅನಂತರ ಅವನಿಗೆ ಸಜೆಯಾಯಿತೆಂದು ತಿಳಿದುಬಂತು. ಆ ದಿನ ನಾವು ಬಹಳ ಅತ್ತೆವು. ಅವ್ವ ಸಾಲ ಮಾಡಿ ಅಪ್ಪನನ್ನು ನೋಡಿ ಬಂದಳು. ಬಸ್ ಖರ್ಚಿಗೂ ರೊಕ್ಕ ನಮ್ಮ ಹತ್ತಿರವಿಲ್ಲದ್ದರಿಂದ ನಾವು ಹೋಗಲಿಲ್ಲ. ಪೋಲೀಸರು ಅಪ್ಪನನ್ನು ಬಹಳ ಥಳಿಸಿದ್ದರಂತೆ. ಮೈಮೇಲೆ ಬಾರ್ ಎದ್ದಿದ್ದವು. ಅಪ್ಪನಿಗಾದ ತೊಂದರೆಗಳನ್ನು ಕಂಡು ಅವ್ವ ಬಹಳ ಅಳುತ್ತಿದ್ದಳು. ನನಗಂತೂ ಆ ಪೋಲೀಸರ ಕುತ್ತಿಗೆಯನ್ನೆ ಹಿಸುಕಬೇಕೆನಿಸುತ್ತಿತ್ತು. ಆದರೆ ನಾನಿನ್ನು ಹುಡುಗ. ಅವ್ವ ನನ್ನನ್ನು ಹತ್ತಿರ ಕರೆದು ಕೂಡ್ರಿಸಿಕೊಳ್ಳುತ್ತಿದ್ದಳು. ಹೇನು ಹೆಕ್ಕುತ್ತಿದ್ದಳು. ತಲೆ ತುಂಬ ಹುಣ್ಣಾಗಿದ್ದವು. ದೇವಿಗೆ ಹರಕೆ ಹೊರುತ್ತಿದ್ದಳು. ದೇವಿಗೆ ಸಿಟ್ಟು ಬಂದಿದೆ ಎಂದು ತಿಳಿಸಿ ಹೇಳುತ್ತಿದ್ದಳು.

'ನೀ ಯಾವಾಗ ದೊಡ್ಡಾಂವ ಆಗಾಂವ ನಿನ್ನಪ್ಪನ ಸೇಡು ತೀರಿಸಿಕೊಳ್ಳಾವ' ಅವ್ವ ಹೇನು



ಹಿಡಿಯುತ್ತ ಹೀಗೆ ಏನೇನೋ ಹೇಳುತ್ತಿದ್ದಳು. ಈಗ ಆದಷ್ಟು ಬೇಗ ದೊಡ್ಡವನಾಗಬೇಕೆಂದು ನನಗೂ ಅನಿಸುತ್ತಿತ್ತು. ದಾಡಿ-ಮೀಸೆ ಬರಬೇಕು. ಬೇಗ ದಾಡಿ ಬರಲೆಂದು ನಾನೊಮ್ಮೆ ಹಳೇ ಬ್ಲೇಡಿನಿಂದ ಗಡ್ಡ ಮಾಡಿಕೊಂಡೆ. ಗಡ್ಡ-ಮೀಸೆ ಬಂದರೆ ಮನುಷ್ಯ ದೊಡ್ಡವನಾಗುತ್ತಾನೆಂದು ನನ್ನ ಭಾವನೆ.

ಅಪ್ಪ ಜೇಲಿಗೆ ಹೋದ ಮೇಲೆ ನಮಗೆ ಸಾಕಷ್ಟು ತೊಂದರೆಯಾಯಿತು. ಮನೆಯಲ್ಲಿ ತಿನ್ನಲು ಏನೂ ಇಲ್ಲ. ದುಡಿದು ತಿಂದು ಬದುಕುವ ಹಾಗಿಲ್ಲ. ಒಮ್ಮೊಮ್ಮೆ ಹೊಟ್ಟೆಗೆ ಸಿಕ್ಕರೆ ಸಿಕ್ಕಿತು, ಇಲ್ಲದಿದ್ದರೆ ಇಲ್ಲ. ಅವ್ವ ನಮ್ಮನ್ನು ತಬ್ಬಿಕೊಂಡು ಅಳುತ್ತಿದ್ದಳು. ಹಸಿವೆಯಾಗುತ್ತಿತ್ತು. ಮನೆಯಲ್ಲಿ ತಿನ್ನಲು ಏನೂ ಇಲ್ಲ. ಏನಾದರೂ ಸಿಕ್ಕರೆ ಸಾಕಾಗಿತ್ತು. ನಾವು ಅಳುತ್ತಿದ್ದೆವು. ಅವ್ವನೂ ಅಳುತ್ತಿದ್ದಳು. ಹಸಿವಿಗಿಂತ ಅವ್ವನ ಅಳು ಹೆಚ್ಚು ಕಸಿವಿಸಿಗೊಳಿಸುತ್ತಿತ್ತು. ಹಸಿವು ಹಿಂಗಿಸಿಕೊಳ್ಳಲು ಕಳ್ಳತನ ಮಾಡಬೇಕಾಗುತ್ತಿತ್ತು. ಕಳ್ಳತನ ಮಾಡಬೇಕೆಂದರೆ ಹೆದರಿಕೆ. ನಾಚಿಕೆಯೂ ಎನಿಸುತ್ತಿತ್ತು. ಆದರೆ ಕಳ್ಳತನಕ್ಕಿಂತ ಹಸಿವು ಹೆಚ್ಚು ಪ್ರಬಲ. ಹಸಿವೆಯಾಯಿತೆಂದರೆ ಏನೂ ಹೊಳೆಯುತ್ತಿರಲಿಲ್ಲ.

ನಿನ್ನೆಯದೆ ವಿಷಯ. ನಾಯಿಯೊಂದು ರೊಟ್ಟಿ ಕಚ್ಚಿಕೊಂಡು ಓಡುತ್ತಿತ್ತು. ನಾನು ನಾಯಿಯನ್ನು ಹಿಂಬಾಲಿಸಿದೆ. ಅದು ಊರ ಹೊರಗೆ ಹೋಯಿತು. ನಾನೂ ನಾಯಿಯನ್ನು ಅನುಸರಿಸುತ್ತಿದ್ದೆ. ಕೈಯಲ್ಲಿ ಕಲ್ಲಿತ್ತು. ಆ ನಾಯಿಯ ಬಾಯಿಯಿಂದ ಯಾವಾಗ ರೊಟ್ಟಿ ಕಸಿದುಕೊಳ್ಳುತ್ತೇನೋ ಎನ್ನುವಂತಾಗಿತ್ತು. ಆಗಾಗ ಕಲ್ಲು ಹೊಡೆಯುತ್ತಿದ್ದೆ. ಆದರೆ ನಾಯಿ ವೇಗವಾಗಿ ಓಡುತ್ತಿತ್ತು. ಕೊನೆಗದು ಒಂದು ಪೊದೆಯಲ್ಲಿ ಹೊಕ್ಕಿತು. ನಾನು ಅದರ ರೊಟ್ಟಿಯನ್ನು ಕಸಿದುಕೊಂಡಿದ್ದೆ. ನಾಯಿ ಕಚ್ಚಿದ ತುದಿಯನ್ನು ಮುರಿದು ನಾಯಿಗೇ ಹಾಕಿದೆ. ಉಳಿದ ರೊಟ್ಟಿಯನ್ನು ಹೊಳೆಗೆ ಹೋಗಿ ತೊಳೆದು ದಡದಲ್ಲಿ ಕೂತು ತಿಂದೆ.

ರೊಟ್ಟಿ ತಿಂದಾದ ಬಳಿಕ ಅವ್ವನ ನೆನಪಾಯಿತು. ನಾನು ಅವ್ವನನ್ನು ಬಿಟ್ಟೇ ತಿಂದಿದ್ದೆ. ನನಗೆ ಬಹಳ ಕೆಡುಕೆನಿಸಿತು. ನಾಯಿ ಕಚ್ಚಿದ ರೊಟ್ಟಿ ತಿಂದರೆ ಹುಚ್ಚು ಹಿಡಿಯುತ್ತದಂತೆ. ಹುಚ್ಚು ಹತ್ತಿದರೆ ನನಗೇ ಹತ್ತಲಿ, ಅವ್ವನಿಗೆ ಬೇಡ. ಅವ್ವ ಸತ್ತರೆ ನನ್ನ ಅಣ್ಣ-ತಮ್ಮಂದಿರ ರಕ್ಷಣೆ ಮಾಡುವವರು ಯಾರು? ಅಪ್ಪ ಜೇಲಿನಿಂದ ಬಿಡುಗಡೆಯಾಗಿ ಬಂದೇ ಬರುತ್ತಾನೆ ಅನ್ನಿ. ನನಗೆ ಅಪ್ಪನ ನೆನಪಾಗಿ ಅಳು ಬಂತು.

ಅಪ್ಪ ಗಿಡ ಕಡಿದ ವಿಷಯವನ್ನು ಸಾಹುಕಾರರಿಗೆ ಗಜಾನನ ಚಾಡಿ ಹೇಳಿದ್ದ. ಗಜಾನನ ಸಾಹುಕಾರನ ಕಾವಲುಗಾರ. ಅವ್ವ ಯಾವಾಗಲೂ ಗಜಾನನನಿಗೆ ಶಾಪ ಹಾಕುತ್ತಿದ್ದಳು. 'ಮನೆ ಹಾಳಾಗಲಿ ' ಎಂದು ಮಣ್ಣು ತೂರಿ ಶಪಿಸಿದ್ದಳು. 'ಗಜ್ಯಾ, ನನ್ನ ಗಂಡನ್ನ ಜೇಲಿಗೆ ಕಳಿಸಿದಾನೆ. ಅವನ ಹೆಂಡ್ತಿನೂ ರಂಡಿಯಾಗಲಿ. ದೇವರು ನೋಡ್ತಾನ. ನಾ ಯೇನ ಯಾರ್ದೂ ಕೆಟ್ಟದ್ದು ಮಾಡಿದ್ದಿಲ್ಲ. ಹೊಟ್ಟೆ ಸಲುವಾಗಿ ಕಳ್ಳತನ ಮಾಡಿತ್ತು.' ಎಂದು ಅಳುತ್ತಿದ್ದಳು.

ನಮ್ಮೂರಿನಲ್ಲಿ ಸಾಹುಕಾರನದೇ ದರಬಾರು. ನೂರಾರು ದನ, ನೂರು ಎಕರೆ ಹೊಲ, ದೊಡ್ಡ ವಾಡೇ. ಕುದುರೆ ಏರಿ ಹೊರಟನೆಂದರೆ ಇಡೀ ಊರೇ ನಡಗುತಿತ್ತು. ನಾವಂತೂ ಸಾಹುಕಾರನ ಹೆಸರು ಕೇಳಿದರೆ ಸಾಕು ಕಂಪಿಸುತ್ತಿದ್ದೆವು. ನಾನಂತೂ ಅವನನ್ನು ಒಮ್ಮೆಯೂ ನೋಡಿರಲಿಲ್ಲ. ಅವ್ವ ಅವನನ್ನು 'ರಾಕ್ಷಸ' ಎಂದು ಕರೆಯುತ್ತಿದ್ದಳು. ಸಾಹುಕಾರನ ಜನ ಒಮ್ಮೊಮ್ಮೆ ಬಡ ಜನರನ್ನು ಎಳೆದೊಯ್ಯುತ್ತಿದ್ದರು. ನಾವು ಆಗ ದಿಗಿಲಿಗೊಳಗಾಗುತ್ತಿದ್ದೆವು.

ಸಾಹುಕಾರ ಬಡ್ಡಿ ವ್ಯವಹಾರ ಮಾಡುತ್ತಿದ್ದ. ಸಾಲ ಒಯ್ಯುವವರು ಮರಳಿಸದಿದ್ದರೆ ಸಾಹುಕಾರನ ಜನ ಬರುತ್ತಿದ್ದರು. ಸಾಲಗಾರನನ್ನು ಹಿಡಿದು, ಎಳೆದೊಯ್ಯುತ್ತಿದ್ದರು. ಜಾಡಿಸಿ ಒದೆಯುತ್ತಿದ್ದರು. ಗಲ್ಲಿಯೊಳಗೆ ಗೊಂದಲವೋ ಗೊಂದಲ. ಸಾಲಗಾರನ ಮನೆಯವರಂತೂ ಆಕ್ರಂದನ ಮಾಡುತ್ತಿದ್ದರು. ಅದನ್ನು ನೋಡಿ ನಾವೂ ಅಳುತ್ತಿದ್ದೆವು. ಇದೇ ಸಾಹುಕಾರನ ಹೊಲದ ಗಿಡವನ್ನು ನನ್ನಪ್ಪ ಕಡಿದಿದ್ದ.

ಹಾಗೆ ನೋಡಿದರೆ ಬಡವರ ಮನೆಯಲ್ಲೇ ಕಳ್ಳತನ ಮಾಡುವುದು ಒಳಿತು. ಬಡವರು ತಕರಾರು ಮಾಡುವುದಿಲ್ಲ. ಶ್ರೀಮಂತರ ಮನೆಯಲ್ಲಿ ಕಳ್ಳತನ ಮಾಡಿದರೆ ಅವನು ಹಿಡಿಯಲ್ಪಡುತ್ತಾನೆ. ಬಡವರನ್ನು ಯಾರು ಕೇಳುತ್ತಾರೆ?

ಸಾಹುಕಾರನ ಜನ ದಿನನಿತ್ಯ ಅತ್ಯಾಚಾರ ಮಾಡುತ್ತಾರೆ. ಅವರಿಗೆ ಯಾರು ಏನು ಮಾಡುವುದಿಲ್ಲ. ಶ್ರೀಮಂತರನ್ನು ಕೇಳೋರು ಯಾರು? ಅವರ ಹತ್ತಿರ ಹಣವಿದೆ. ಸರಕಾರವೂ ಅವರದ್ದೇ. ನಾನೂ ಬೇಗ ದೊಡ್ಡವನಾಗಿ ಆ ವಾಡೇಯನ್ನು ಹೊಕ್ಕು

ಸಾವುಕಾರನ ಖೂನಿ ಮಾಡಬೇಕೆಂದೆನಿಸುತ್ತಿತ್ತು. ಒಬ್ಬ ಮಾಸ್ತರ ವಾಡೇಯೊಳಗೆ ಪಾಠ ಹೇಳಿಕೊಡಲು ಹೋಗುತ್ತಿದ್ದ. ಮಾಸ್ತರನಾಗಬೇಕೆಂದು ನನಗೂ ಅನಿಸಿತು. ಪ್ರತಿನಿತ್ಯ ನಾನು ಶಾಲೆಗೆ ಹೋಗುತ್ತಿದ್ದೆ. ಒಂದು ದಿನವೂ ತಪ್ಪಿಸುತ್ತಿರಲಿಲ್ಲ. ಅಪ್ಪ ಜೇಲಿನಿಂದ ಆಗಾಗ ಪತ್ರ ಕಳಿಸುತ್ತಿದ್ದ. ನಾನು ಶಾಲೆ ತಪ್ಪಿಸಬಾರದೆಂದೂ ಬರೆಯುತ್ತಿದ್ದ.

ಬಹಳ ದಿವಸಗಳಿಂದ ಒಂದೂ ಪ್ರಾಣಿ ಸತ್ತಿರಲಿಲ್ಲ. ಅವ್ವನಿಗೆ ಮಾಂಸ ತಿನ್ನುವ ಇಚ್ಛೆಯಾಗಿತ್ತು. ಅಳಿಲಿನ ಮಾಂಸವೂ ಮುಗಿದಿತ್ತು. ತಿಳುವಳಿಕೆ ಬಂದಾಗಿನಿಂದ ರೊಟ್ಟಿ ಮಾಂಸ ತಿನ್ನುವ ಚಪಲ ನನಗೆ. ಅವ್ವ ಮೊನ್ನೆಯೊಂದು ಅಳಿಲು ಹಿಡಿದುಕೊಂಡು ಬಂದಿದ್ದಳು. ಆದರೆ ಮನೆಯಲ್ಲಿ ಇಷ್ಟು ಜನಕ್ಕೆ ಸಾಲುವದಾದರೂ ಹೇಗೆ? ಮನೆಯ ಜನಕ್ಕೆ ಮಾಂಸ ತಿಂದೇ ಅಭ್ಯಾಸ. ಮನಸ್ಸಿಗೆ ಬಂತೆಂದರೆ ಯಾರದ್ದಾದರೂ ಎಮ್ಮೆಗೋ, ಆಕಳಿಗೋ ಎಳೆ ಮೆಕ್ಕಿ ತೆನಿ ತಿನ್ನಿಸಿ ಕೊಲ್ಲುತ್ತಿದ್ದರು. ಒಮ್ಮೊಮ್ಮೆ ದೂರದ ಊರಿಗೆ ಹೋಗಿ ಜಾನುವಾರಗಳನ್ನು ನೋಡಿ ಬರುತ್ತಿದ್ದರು. ರಾತ್ರಿಯಾದ ಬಳಿಕ ಐದಾರು ಜನ ಸೇರಿ ಆ ಊರಿಗೆ ಹೋಗುತ್ತಿದ್ದರು. ರಾತ್ರಿ ಆ ಜಾನುವಾರನ್ನು ಅಪಹರಿಸಿಕೊಂಡು ಬರುತ್ತಿದ್ದರು. ಆವಾರದೊಳಗೆ ಕೂತು ಕತ್ತರಿಸುತ್ತಿದ್ದರು. ಬೆಳಗಾಗುವುದರೊಳಗೆ ಪಾಲು ಹಂಚಿ ಮುಗಿಸಿಬಿಡುತ್ತಿದ್ದರು. ಬೆಳಿಗ್ಗೆ ಎಲ್ಲರ ಒಲೆಯ ಮೇಲೆ ಮಾಂಸ ಬೇಯುತ್ತಿತ್ತು. ರಾತ್ರೋರಾತ್ರಿ ಜಾನುವಾರ ಹಾರಿಸುತ್ತಿದ್ದರು. ಮನೆಮನೆಯಲ್ಲೂ ಮಾಂಸ ಒಣಹಾಕಲಾಗುತ್ತಿತ್ತು.

ಮಾಂಸ ತಿಂದು ಬಹಳ ದಿನವಾಯ್ತೆಂದು ಅವ್ವ ಹೇಳುತ್ತಿದ್ದಳು. ಜಾನುವಾರಗಳು ಸಾಯುತ್ತಿಲ್ಲ, ಕಟುಕರು ಬರುತ್ತಿಲ್ಲ. ತಿಂಗಳೋ ಎರಡು ತಿಂಗಳಿಗೊಮ್ಮೆ ನಮ್ಮೂರಿಗೆ ಕಟುಕರವನು ಬರುತ್ತಿದ್ದ. ಈಗ ಅವನೂ ಬರುತ್ತಿಲ್ಲ. 'ಜಾತ್ರೆಯ ವಂತಿಕೆ ನೀಡಿಲ್ಲವೆಂದು ಊರ ಜನ ಅವನನ್ನು ಊರೊಳಗೆ ಬರಲು ಬಂದಿ ಹಾಕಿದ್ದರು.

ಸಾವುಕಾರನ ಕೋಣಕ್ಕೆ ಎಳೆ ಮೆಕ್ಕಿ ತೆನಿ ಕೊಟ್ಟು ಸಾಯಿಸಬೇಕೆಂದು ನನಗನಿಸಿತು. ಮಧ್ಯಾಹ್ನದ ಹೊತ್ತು, ಶಾಲೆ ಬಿಟ್ಟ ಬಳಿಕ ನಾವು ಹೊಳೆಗೆ ಮೀನು ಹಿಡಿಯಲು ಹೋಗುತ್ತಿದ್ದೆವು. ಊರಜನ ಹೊಳೆಯ ಮೇಲ ಭಾಗದಲ್ಲಿ ನೀರು ತುಂಬುತ್ತಿದ್ದರು. ನಾವು ಕೆಳಭಾಗದಲ್ಲಿ ಮೀನು ಹಿಡಿಯುತ್ತಿದ್ದೆವು. ಕೆಲವು ಜನ ಹೊಳೆಯಲ್ಲಿ ಎಮ್ಮೆ ತೊಳೆಯುತ್ತಿದ್ದರು. ಅದರಲ್ಲಿ ಸಾಹುಕಾರನ ಕೋಣವೂ ಇತ್ತು. ನಾಲ್ಕೈದು ಊರಿಗೆ ಇದೊಂದೆ ಕೋಣ. ನಾನು ಕೋಣನನ್ನು ಚನ್ನಾಗಿ ದಿಟ್ಟಿಸಿದೆ. ತೆನಿ ಕೊಟ್ಟರೆ ಇದೇ ಕೋಣಕ್ಕೆ ಕೊಡಬೇಕೆಂದೆನಿಸಿತು. ನನ್ನ ಅಪ್ಪನನ್ನು ಜೇಲಿಗೆ ಕಳಿಸಿದ ಸಾವುಕಾರನ ಕೋಣನನ್ನೇ ಕೊಲ್ಲಬೇಕು. ಕೋಣ ಹದಿನೈದು ದಿನ ಸಾಲುವಷ್ಟು ದಪ್ಪಗಾಗಿತ್ತು.

ಕೋಣಕ್ಕೆ ಎಳೆ ತೆನೆ ತಿನ್ನಿಸಿ ನಾವು ಪರಾರಿಯಾದೆವು. ಸಂಜೆಗೆ ಸಾವುಕಾರನ ಆಳುಮಗ ಹೊಲಗೇರಿಗೆ ಬರುತ್ತಾನೆ. ಎಲ್ಲರೂ ಹೋಗಿ ಸತ್ತ ಕೋಣನನ್ನು ಎಳೆದು ತರುತ್ತಾರೆ. ಎಲ್ಲರೂ ಕೂಡಿ ಸುಲಿಯುತ್ತಾರೆ, ಬೇಕಾದಷ್ಟು ಮಾಂಸ ಚಪ್ಪಲು ತಯಾರಿಸುವ ಚರ್ಮವೂ ಸಿಗುತ್ತದೆ. ಆದರೆ ಎಳೆದು ತರಲು ನಾಲ್ಕು ಜನ ಸಾಲಲಿಕ್ಕಿಲ್ಲ. ಗಾಡಿಯಲ್ಲಿ ಹೊತ್ತು ತರಬೇಕಾಗಬಹುದು. ನಾಳೆ ಶಾಲೆಗೂ ಚಕ್ಕರ್.

ಸಂಜೆಗೆ ಗಜಾ ಮುಖ ಕೆಂಪಗೆ ಮಾಡಿಕೊಂಡು ಬಂದ. ಸ್ವಲ್ಪ ಹೊತ್ತಿಗೆ ಹೆಂಗಸರು ಮಕ್ಕಳು ಅಳಲಾರಂಭಿಸಿದರು. ಸಾವುಕಾರನ ಕೋಣ ಸತ್ತಿತ್ತು, ಸಾವುಕಾರನ ಎಂಟ್ಹತ್ತು ಆಳು ಮಕ್ಕಳು ಬಡಿಗೆ ಹಿಡಿದುಕೊಂಡು ಬಂದರು. ಹೆಂಗಸರೆಲ್ಲಾ ಬೆದರಿದರು. ಮನೆ ಮನೆ ಹೊಕ್ಕು ಗಂಡಸು ಮಕ್ಕಳನ್ನು ಹಿಡಿದು ಥಳಿಸುತ್ತಿದ್ದರು. ಹತ್ತಿಪ್ಪತ್ತು ಜನರನ್ನು ಹಿಡಿದು ಚಾವಡಿಗೆ ಒಯ್ದರು. ಅವ್ವ ಜೋಪಡಿಯಲ್ಲಿ ಬೆದರಿ ಕೂತಿದ್ದಳು. ನಾನೂ ಗಾಬರಿಯಾಗಿದ್ದೆ. ಅವ್ವನ ಕಣ್ತಪ್ಪಿಸಿ ನಾನು ನೇರವಾಗಿ ಚಾವಡಿಗೆ ಬಂದೆ. ಎದುರಿಗೆ ಕೊಡ ಹೊತ್ತ ಹೆಂಗಸೊಬ್ಬಳು ಬರುತ್ತಿದ್ದಳು. ಮೈಲಿಗೆಯಾಗ ಬಾರದೆಂದು ಹಾದಿ ಬಿಟ್ಟು ಬದಿಗೆ ಸರಿದೆ.

ಚಾವಡಿಯಲ್ಲಿ ಜನ ಸೇರಿದ್ದರು. ಗದ್ದಲ ನಡೆದಿತ್ತು. ಗಜಾ ದೂರ ನಿಂತಿದ್ದ. ಸಾವುಕಾರನ ಜನ ಕೈಯಲ್ಲಿ ಹಂಟರ್ ಹಿಡಿದು 'ಹೇಳಿರಿ, ಕೋಣಕ್ಕೆ ಯಾರ್ ತೆನಿ ತಿನಿಸಿ ಕೊಂದಿರಿ?' ಎಂದು ಜಬರಿಸುತ್ತಿದ್ದ.

ಕ್ಷಣಾರ್ಧದೊಳಗೆ ಎಲ್ಲರನ್ನೂ [illegible] ಕಟ್ಟಲಾಯಿತು. ಹೊಲೆಯರು ಕೈ ಕಾಲಿಗೆ ಬೀಳುತ್ತಿದ್ದರು. ಆದರೆ ಯಾರೂ ಅವರ ಮಾತು ಕೇಳುತ್ತಿರಲಿಲ್ಲ. ಎಲ್ಲರನ್ನು ಹಂಟರಿನಿಂದ ಥಳಿಸಲಾಯಿತು. ನನ್ನಪ್ಪನನ್ನು ಹೀಗೆಯೇ ಹೊಡೆದಿರಬೇಕು. ಮರುದಿನ ಕೋಣನನ್ನು ಸಾವುಕಾರನ ಹೊಲದಲ್ಲಿ ಹೂಳಲಾಯಿತು. ಪುಕ್ಕಟ್ಟೆ ಜನ ಹೊಡೆತ ತಿಂದರು. ಆದರೆ ಹೆಸರು ಮಾತ್ರ ಯಾರೂ ಹೇಳಲಿಲ್ಲ.

ಇಡೀ ತಿಂಗಳು ಸತ್ತ ಕೋಣನ ಬಗ್ಗೆ ಜನರೆಲ್ಲಾ ಹಳಹಳಿಸಿದರು. ಸಾಕಷ್ಟು ಹೊಡೆತ ತಿಂದ ಪಾಂಡೂ ಹಾಸಿಗೆ ಹಿಡಿದಿದ್ದ. ಯಾರೂ ಅವನ ಕಾಳಜಿ ತೆಗೆದುಕೊಳ್ಳಲಿಲ್ಲ, ಕಲ್ಲು ಮನಸ್ಸಿನ ಜನ ಇವರೆಲ್ಲ. ಇಡೀ ಹೊಲಗೇರಿಯ ಜನ ಗಜಾನನನ ಬಗ್ಗೆ ಕೆರಳಿದ್ದರು. ಸಾಹುಕಾರನ ಎಂಜಲನ್ನು ತಿಂದು ಇಲ್ಲಿಯ ವಿಷಯ ಅಲ್ಲಿ ಹೋಗಿ ಹೇಳುತ್ತಿದ್ದ. ಅವನು ಸತ್ತರೆ ಯಾರೂ ಮಣ್ಣಿಗೆ ಹೋಗಬಾರದೆಂದು ಮಾತಾಡುತ್ತಿದ್ದರು. ಕೊಳತು ಸಾಯಲಿ ಎನ್ನುತ್ತಿದ್ದರು. ಅವನು ಜಾತಿ ವಿರೋಧಿ ಎಂದು ಅವ್ವ ಹೇಳುತ್ತಿದ್ದಳು.

ಗಜಾ ಕೋಣನ ಜಾತಿಯವನು. ಅವನಿಗೂ ತೆನಿ ತಿನ್ನಿಸಬೇಕು. ಅವನು ನಮ್ಮ ವಿರೋಧಿಯಾಗಿದ್ದರೂ ಅವನ ಮಗ ಮಾತ್ರ ನಮ್ಮ ಜೊತೆಗಿದ್ದ. ಕೋಣ ಸತ್ತಾಗ ಅವನೂ ಹೊಡೆತ ತಿಂದವನೇ.

ಒಂದು ದಿನ ಗಜಾ ಆಕಸ್ಮಿಕವಾಗಿ ಸತ್ತ. ಇಂಥ ಗಟ್ಟಿ ಮುಟ್ಟಾದ ಮನುಷ್ಯ ಹೇಗೆ ಸತ್ತ ಅನ್ನೋದೆ ತಿಳಿಯಲಿಲ್ಲ. ರಾತ್ರಿ ಹೊಟ್ಟೆ ನೋಯುತ್ತಿತ್ತಂತೆ ಬೆಳಿಗ್ಗೆ ನೋಡಿದರೆ ಸತ್ತ.

ಮರುದಿನ ಪಂಚಾಯತಿ ಸೇರಿತು. ಗಜಾನ ಮಗ ಎಲ್ಲರಿಗೆ ಕೈ ಜೋಡಿಸಿ ಬೇಡಿಕೊಂಡ. ದಂಡ ತೆರಲು ಸಿದ್ಧನಾದ. ಎಲ್ಲರೂ ಸೇರಿ ಗಜಾನನ್ನು ಮಣ್ಣು ಮಾಡಿದರು. ಒಂದು ಕಿರಿಕಿರಿ ಮಣ್ಣಿನಲ್ಲಿ ಮರೆಯಾಯ್ತು. ಈಗ ಸಾವುಕಾರನಿಗೆ ಇಷ್ಟು ನಿಷ್ಠಾವಂತ ರಕ್ಷಕ ಸಿಗೋರು ಯಾರು? ಸಾವುಕಾರನಿಗೇನು ಕಮ್ಮಿ? ಬೇರೆ ಊರಿನಿಂದ ಇನ್ನೊಬ್ಬ ಹೊಲೆಯನನ್ನು ಕರೆಸಿಕೊಂಡಾನು. ಅವನಿಗೆ ಜೋಪಡಿ ಕಟ್ಟಿಸಿಕೊಟ್ಟಾನು. ಅವನು ಹೇಳಿದರೆ ಯಾರೂ ಸಿದ್ಧರಾಗಬಹುದು. ಹಾಗೆ ನೋಡಿದರೆ ಸರದಿಯ ಪ್ರಕಾರ ಕಾವಲುಗಾರನಾಗುವ ಅವಕಾಶ ನಮ್ಮ ಕುಟುಂಬಕ್ಕೆ ಸೇರಿದ್ದು. ಆದರೆ ಅಪ್ಪ ಜೇಲಿನಲ್ಲಿದ್ದ.

ಇದಾದ ನಂತರ ಅಪ್ಪ ಜೇಲಿನಿಂದ ಹೊರ ಬಂದ. ಸಾವುಕಾರನ ವಾಡೆಗೆ ಹೋಗಿ ಜೀತತ್ವ ಸ್ವೀಕರಿಸಿದ. ಸಾವುಕಾರ ದಂಡ ತುಂಬಿ ಅಪ್ಪನನ್ನು ಬಿಡಿಸಿ ತಂದಿದ್ದ. ಈಗ ಅಪ್ಪ ನಿಯಮಿತವಾಗಿ, ನಿಷ್ಠೆಯಿಂದ ವಾಡೇಗೆ ಹಾಜರಿ ಹಚ್ಚುತ್ತಿದ್ದ. ಸಂಜೆಗೆ ಸಾಕಷ್ಟು ಎಂಜಲನ್ನ ಸಿಗುತ್ತಿತ್ತು. ಅವ್ವನೂ ಈಗ ವಾಡೇಗೆ ಹೋಗಿ ಕಸ ಉಡುಗಿ ಬರುತ್ತಿದ್ದಳು. ಸಾವುಕಾರ ನಿಜಕ್ಕೂ ದೇವ ಮಾನವನೇ ಆಗಿದ್ದ.

ಅನುವಾದ : **ಚಂದ್ರಕಾಂತ ಪೋಕಳೆ**
ಬೇಡಕಿಹಾಳ-೫೯೧೨೧೪, ಜಿ-ಬೆಳಗಾವಿ

---

## ಬದುಕು

ಬಾಂಧವ್ಯದ
ಬೆಸುಗೆಯೇ
ಬದುಕು ನಿಜ
ಆದರೆ
ಬೆಸೆ ಬೆಸೆದು
ಸವೆದ ಬದುಕು
ಬಾಂಧವ್ಯ
ಬದುಕಾಗದು !

ಎಸ್. ಆರ್. ರೂಪಶ್ರೀ
d/o ಆರ್. ಎಸ್. ಭಟ್, ಶ್ರೀ ಕೃಪಾ, ಯಲ್ಲಾಪುರ ರಸ್ತೆ
ಶಾಂತಿನಗರ, ಶಿರಸಿ - ೫೮೧ ೪೦೨

# ಹರ್ಷದ್ ಮೆಹ್ತಾಗೆ ಶಿಕ್ಷೆ
# 1992ರ ಷೇರುಪೇಟೆ ಹಗರಣ - ಒಂದು ಹಿನ್ನೋಟ

**ಈಚಿನ ವಾರಗಳಲ್ಲಿ ಷೇರುಪೇಟೆಯಲ್ಲಿ ಸಡಗರ ಹೆಚ್ಚಿದೆ. ಎಷ್ಟೋ ಕಂಪೆನಿಗಳ ಷೇರುಗಳ ಬೆಲೆ ಗಗನಕ್ಕೇರಿದೆ. ಹೂಡಿಕೆದಾರರ ಉತ್ಸಾಹ ಎಲ್ಲೆ ಮೀರುತ್ತಿದೆ. ಇದು ಕೃತಕವಾಗಿ ಏರಿಸಲಾಗುತ್ತಿರುವ ಬೆಲೆ ಎಂಬುದು ಜನಕ್ಕೆ ತಿಳಿಯದು. ಬ್ಯಾಂಕುಗಳ ಠೇವಣಿಗೆ ಬಡ್ಡಿ ದರ ಇಳಿಸಿದ್ದು ಉಳಿತಾಯವನ್ನು ಜನ ಷೇರುಪೇಟೆಯ ವ್ಯವಹಾರದಲ್ಲಿ ತೊಡಗಿಸಲಿ ಎಂಬ ಹುನ್ನಾರದಿಂದ. ನಾಳೆ ಈ ಉತ್ಸಾಹೀ ಜನ ಕಂಗೆಟ್ಟು ಕೂತರೆ ಸರ್ಕಾರ ಅವರಿಗೆ ಪರಿಹಾರ ನೀಡುವುದಿಲ್ಲ. ಷೇರುಪೇಟೆಯ ವ್ಯವಹಾರಗಳ ಕ್ಷ-ಕಿರಣ ಸಾರ್ವಜನಿಕರಿಗೆ ಆಸಕ್ತಿದಾಯಕ.**

ಷೇರುಪೇಟೆಗಳು ಬಂಡವಾಳಶಾಹಿ ಅರ್ಥ ವ್ಯವಸ್ಥೆಯನ್ನು ಗುರುತಿಸುವ ಪ್ರಧಾನ ಗುಣಲಕ್ಷಣಗಳಲ್ಲಿ ಒಂದು. ವಾಸ್ತವವಾಗಿ ಆ ತತ್ವವನ್ನಾಧರಿಸಿದ ರಾಷ್ಟ್ರಗಳ ಹಣಕಾಸಿನ ಪರಿಸ್ಥಿತಿಯ ಸ್ವಾಸ್ಥ್ಯವನ್ನು ಅರಿಯಬೇಕಾದರೆ ಷೇರುಪೇಟೆಗಳ ಸ್ಥಿತಿಗತಿಯನ್ನೇ ಮಾನದಂಡವನ್ನಾಗಿ ಬಳಸಬಹುದೆಂದು ಅನೇಕ ಹಣಕಾಸು ತಜ್ಞರ ಅಭಿಪ್ರಾಯ. ೧೯೯೧ರ ಮಧ್ಯಭಾಗದಲ್ಲಿ ರಾಷ್ಟ್ರದ ಆಡಳಿತದ ಚುಕ್ಕಾಣಿಯನ್ನು ಹಿಡಿದ ಅಲ್ಪಸಂಖ್ಯಾತ ಕಾಂಗ್ರೆಸ್ ಸರ್ಕಾರ ೪೦ ವರ್ಷಗಳ ಕಾಲ ಭಾರತದಲ್ಲಿ ಅಸ್ತಿತ್ವದಲ್ಲಿದ್ದ ಅರ್ಥವ್ಯವಸ್ಥೆಯನ್ನು ಕೈಬಿಟ್ಟು ಐ.ಎಂ.ಎಫ್. ಮತ್ತು ವಿಶ್ವಬ್ಯಾಂಕ್ ಆಜ್ಞಾಪಿತ ಆರ್ಥಿಕ ಪುನರ್‌ವಿನ್ಯಾಸ ಯೋಜನೆಯನ್ನು ರೂಢಿಸಿಕೊಳ್ಳಲು ತೀರ್ಮಾನಿಸಿತು. ಜನತೆಯನ್ನಾಗಲಿ, ಜನತೆಯ ಪ್ರತಿನಿಧಿಗಳನ್ನಾಗಲಿ ಮಹತ್ತರ ಮೂಲಭೂತ ಆರ್ಥಿಕ ಬದಲಾವಣೆಗೆ ಸಿದ್ಧಗೊಳಿಸದೆ, ವಿಶ್ವಾಸದ ಭೂಮಿಕೆಯನ್ನು ತಯಾರಿಸದೆ, ಸರ್ಕಾರ ಏಕಪಕ್ಷೀಯವಾದ ತೀರ್ಮಾನವನ್ನು ತೆಗೆದುಕೊಂಡ ಮರುವರ್ಷದಲ್ಲೇ, ಅಂದರೆ ೧೯೯೨ರಲ್ಲಿ, ಭಾರತದ ಷೇರುಪೇಟೆಗಳಲ್ಲಿ, ವಿಶೇಷವಾಗಿ ಭಾರತದ ವಾಣಿಜ್ಯ ಕೇಂದ್ರವಾದ ಬಾಂಬೆ ಸ್ಟಾಕ್ ಮಾರುಕಟ್ಟೆಯಲ್ಲಿ, ಬೃಹತ್ ಹಗರಣ ಒಂದು ಉಂಟಾಯಿತು. 'ಷೇರು ಪೇಟೆಯ ಶತಮಾನದ ಹಗರಣ' ಎನ್ನುವ ಕುಖ್ಯಾತಿಗೆ ಈಡಾಗಿರುವ ಈ ಹಗರಣದ ಸೂತ್ರಧಾರನಾಗಿದ್ದ, ಷೇರುಪೇಟೆಯ ಅತ್ಯಂತ ಪ್ರಬಲ ಬ್ರೋಕರ್ (ಬಿಗ್‌ಬುಲ್) ಆಗಿದ್ದ ಹರ್ಷದ್ ಮೆಹ್ತಾನನ್ನು, ಅವನ ವಿರುದ್ಧ ಸಿ.ಬಿ.ಐ. ವಿಶೇಷ ನ್ಯಾಯಾಲಯದಲ್ಲಿ ದಾಖಲಿಸಿದ್ದ ೨೩ ಮೋಸದ ಮೊಕದ್ದಮೆಗಳಲ್ಲಿ ೭ ವರ್ಷಗಳ ದೀರ್ಘಕಾಲದ ವಿಚಾರಣೆಯ ನಂತರ ಒಂದೇ ಒಂದನ್ನು ತೀರ್ಮಾನಿಸಿ, ತಪ್ಪಿತಸ್ಥನೆಂದು ೫ ವರ್ಷಗಳ ಕಠಿಣ ಸಜೆಗೆ ಗುರಿಪಡಿಸಲಾಗಿದೆ.

### ಬ್ಯಾಂಕುಗಳ ಪಾತ್ರ

ಈ ಹಗರಣದಲ್ಲಿ ನಮ್ಮ ಹಾಗೂ ವಿದೇಶಿ ಬ್ಯಾಂಕುಗಳ ಪಾತ್ರ ಏನಿತ್ತು? ೧೯೯೨ರಲ್ಲಿ ದೇಶದ ವಿವಿಧ ಹಣಕಾಸು ಸಂಸ್ಥೆಗಳಿಂದ (ಅಂದರೆ ಬ್ಯಾಂಕ್‌ಗಳಿಂದ) ಸ್ಟಾಕ್ ಬ್ರೋಕರ್‌ಗಳ ಮಾರ್ಗವಾಗಿ ಸ್ಟಾಕ್ ಮಾರುಕಟ್ಟೆಗೆ ಹಣದ ಸಂಕೀರ್ಣ ಹರಿವಿನ ಫಲಿತಾಂಶ ಅಂತಿಮದಲ್ಲಿ ಸ್ಟಾಕ್ ಮಾರುಕಟ್ಟೆಯಲ್ಲಿ ಅಲ್ಪಕಾಲಿಕ, ಆದರೆ ಬೃಹತ್ ಮೌಲ್ಯೋತ್ಕರ್ಷ ಮೈದೋರಿತು. ಷೇರುಗಳ ಬೆಲೆಯ ಸೂಚ್ಯಾಂಕ ಮೇಲೇರಿದ ವೇಗ ಎಲ್ಲರನ್ನೂ ದಂಗುಪಡಿಸಿತು. (ರೇಖಾ ಚಿತ್ರವನ್ನು ನೋಡಿ)

**ಷೇರು ಮೌಲ್ಯಗಳ ಚಲನೆ ಡಿ. ೨೪ರ ತನಕ**




ಬ್ಯಾಂಕ್‌ಗಳಿಂದ ಪಡೆದ ಅಕ್ರಮ ಹಣದಿಂದ ಹರ್ಷದ್ ಮೆಹ್ತಾ ನೇತೃತ್ವದ ಸ್ಟಾಕ್ ಬ್ರೋಕರ್‌ಗಳ ದುಷ್ಟಕೂಟ ಕೆಲವು ಕಂಪೆನಿಗಳ ಷೇರುಗಳನ್ನು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕೊಂಡು ಅವುಗಳ ಬೆಲೆಯನ್ನು ಕೃತಕವಾಗಿ ಹೆಚ್ಚಿಸುವ ಕುತಂತ್ರದಿಂದ ಉಂಟಾದ ಅವಾಸ್ತವಿಕ ಅತಿರೇಕವೆಂಬ, ಆದ್ದರಿಂದ ಅಲ್ಪಕಾಲಿಕವೆಂಬ, ಸುಳಿವು ಹೂಡಿಕೆದಾರರಿಗೆ, ಅದರಲ್ಲೂ ಸಣ್ಣ ಹೂಡಿಕೆದಾರರಿಗೆ ದೊರೆಯದಿದ್ದುದು ಈ ಹಗರಣದ ಅತ್ಯಂತ ದುರದೃಷ್ಟಕರ ಆಯಾಮವೆಂದು ಹೇಳಬೇಕು. ಪತಂಗವು ಬೆಳಕಿನೆಡೆಗೆ ಧಾವಿಸುವಂತೆ ಈ ಅದ್ಭುತ ಉತ್ಕರ್ಷಕ್ಕೆ ಮಾರುಹೋಗಿ ಸಣ್ಣ ಹೂಡಿಕೆದಾರರು ಸ್ಟಾಕ್ ಮಾರ್ಕೆಟ್‌ಗಳಿಗೆ ಧಾವಿಸಿದರು. ಇದರಿಂದ ಷೇರುಗಳ ಬೆಲೆ ಮತ್ತಷ್ಟು ಹೆಚ್ಚಾಯಿತು. ಆ ಸಮಯದಲ್ಲಿ ಬ್ರೋಕರ್‌ಗಳು ಕೃತಕವಾಗಿ ಉಬ್ಬಿದ ಬೆಲೆಗಳಿಗೆ ಷೇರ್‌ಗಳನ್ನು ಮಾರಿ ಅಪಾರ ಹಣವನ್ನು ಗಳಿಸಿದರು. ಈ ಉತ್ಕರ್ಷ 'ನೀರಮೇಲಣ ಗುಳ್ಳೆ' ಮಾದರಿಯದಾದ್ದರಿಂದ ಒಡೆದುಹೋಗಲು ಬಹಳ ಕಾಲ ಹಿಡಿಯಲಿಲ್ಲ. ೧೯೯೨ರ ಏಪ್ರಿಲ್‌ವರೆಗೂ ಸಾಂಗವಾಗಿ ನಡೆದ ಈ ಅಕ್ರಮ ವ್ಯವಹಾರ ಬಯಲಿಗೆ ಬಂದದ್ದು ಹೀಗೆ: ಏಪ್ರಿಲ್ ತಿಂಗಳಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ನಿಯಂತ್ರಣಾ ಸಂಸ್ಥೆ ಎಸ್.ಇ.ಬಿ.ಐ.ಯ ಕಡ್ಡಾಯ ನೋಂದಣಿಯ ವಿಧಿಯ ವಿರುದ್ಧ ಸ್ಟಾಕ್ ಬ್ರೋಕರ್‌ಗಳು ದೇಶಾದ್ಯಂತ ಮುಷ್ಕರ ಹೂಡಿದರು. ಈಕ್ಷಿಟಿ ಮಾರುಕಟ್ಟೆಯಲ್ಲಿ ವ್ಯಾಪಾರ ಸಂಪೂರ್ಣ ಸ್ಥಗಿತಗೊಂಡಿತು. ಸ್ಟಾಕ್ ಮಾರುಕಟ್ಟೆಗೆ ಅಕ್ರಮವಾಗಿ ಹರಿದಿದ್ದ ಬ್ಯಾಂಕ್ ಹಣ ಲಾಕಪ್ ಆಯಿತು. ಮುಷ್ಕರ ಮುಂದುವರಿದಂತೆ ಈ ಅವ್ಯವಹಾರವನ್ನು ಮುಚ್ಚಿಡುವ ಪ್ರಯತ್ನಗಳೂ ಸಫಲವಾಗಲಿಲ್ಲ. ಬ್ಯಾಂಕ್‌ಗಳ ಲೆಕ್ಕಗಳಿಗೂ ಬ್ರೋಕರ್‌ಗಳ ಲೆಕ್ಕಗಳಿಗೂ ಹೊಂದಾಣಿಕೆ ಅಂತರ ಹೆಚ್ಚಾಗಿ ಬ್ಯಾಂಕ್‌ಗಳು ದೊಡ್ಡ ಸಮಸ್ಯೆಯನ್ನು ಎದುರಿಸಬೇಕಾಯಿತು. ಅವ್ಯವಹಾರದ ವಿಷಯಗಳು ಹೊರಬರಲಾರಂಭಿಸಿ ಹಗರಣದ ನೈಜ ಆಯಾಮಗಳು ಪ್ರಕಟಗೊಂಡವು. ಮಾರುಕಟ್ಟೆಯ ಬಂಡವಾಳದಲ್ಲಿ ಅಥವಾ ಮೂಲಧನದಲ್ಲಿ ಮೂರೇ ತಿಂಗಳ ಅವಧಿಯಲ್ಲಿ (ಏಪ್ರಿಲ್ ೧೯೯೨ರಿಂದ ಜೂನ್ ೯೨ರಲ್ಲಿ) ೫೦,೦೦೦ ಕೋಟಿಯಷ್ಟು ನಷ್ಟ ಉಂಟಾಯಿತು. ಮುಂದಿನ ೧೨ ತಿಂಗಳಲ್ಲಿ ಮಾರುಕಟ್ಟೆ ಮತ್ತಷ್ಟು ಕುಸಿದು ಕೆಲವು ಷೇರು ದರಗಳಲ್ಲಿ ಶೇಕಡಾ ೯೦ರಷ್ಟು ಅಪಮೌಲ್ಯ ಉಂಟಾಯಿತು.

### ಸಣ್ಣ ಹೂಡಿಕೆದಾರರ ದುರಂತ

ತಮ್ಮ ಜೀವನದ ಉಳಿತಾಯವನ್ನೆಲ್ಲಾ ಸ್ಟಾಕ್ ಮಾರುಕಟ್ಟೆಯಲ್ಲಿ ಸುರಿದು ದೊಡ್ಡ ಮೊತ್ತದ ಆದಾಯವನ್ನು ನಿರೀಕ್ಷಿಸುತ್ತಿದ್ದ ಸಣ್ಣ ಹೂಡಿಕೆದಾರರು ಈ ಜ್ವಾಲೆಯಲ್ಲಿ ಪತಂಗದಂತೆ ಭಸ್ಮವಾಗಿಹೋದುದು ಆಧುನಿಕ ಷೇರು ಮಾರುಕಟ್ಟೆಯ ಇತಿಹಾಸದಲ್ಲಿ ಒಂದು ದುರಂತ ಅಧ್ಯಾಯ. ಷೇರುಪೇಟೆಯ ಬಗ್ಗೆ ಅಂದು ವಿಶ್ವಾಸವನ್ನು ಕಳೆದುಕೊಂಡ ಸಣ್ಣ ಹೂಡಿಕೆದಾರನಲ್ಲಿ ಇಂದಿಗೂ ವಿಶ್ವಾಸ ಮೂಡಿಲ್ಲ ವೆಂದರೆ ಆಘಾತದ ವ್ಯಾಪ್ತಿಯನ್ನು ಊಹಿಸಿಕೊಳ್ಳಬಹುದು. ಈ ವಿಶ್ವಾಸವನ್ನು ಪುನರ್‌ಮೂಡಿಸುವಲ್ಲಿ ನಮ್ಮ ನ್ಯಾಯಾಂಗ

ಮತ್ತು ಕಾರ್ಯಾಂಗಗಳ ಪಾತ್ರವೇನೆಂಬುದನ್ನು ಪರಿಶೀಲಿಸಬೇಕಿದೆ. ಹರ್ಷದ್ ಮೆಹ್ತಾ ಮತ್ತು ಕೆಲವು ಬಿಗ್‌ಬುಲ್‌ಗಳು, ಬ್ಯಾಂಕುಗಳ ಟಾಪ್ ಮ್ಯಾನೇಜ್‌ಮೆಂಟ್‌ಗಳು, ವಿದೇಶಿ ಬ್ಯಾಂಕುಗಳು ಈ ಹಗರಣದ ಮೂಲಗಳೆಂಬುದು ಹಗಲಿನಷ್ಟೇ ಸ್ಪಷ್ಟ. ಆದರೆ, ಈ ಮೋಸದ ಪ್ರಕರಣಗಳನ್ನು ಇತ್ಯರ್ಥ ಮಾಡಲಿಕ್ಕಾಗಿಯೇ ಜನ್ಮ ತಳೆದ ವಿಶೇಷ ನ್ಯಾಯಾಲಯ ಈ ಏಳು ವರ್ಷಗಳಲ್ಲಿ ಹಗರಣಕ್ಕೆ ಸಂಬಂಧಿಸಿದಂತೆ ಸಿ.ಬಿ.ಐ. ದಾಖಲಿಸಿರುವ ೪೨ ಮೊಕದ್ದಮೆಗಳಲ್ಲಿ ಕೇವಲ ನಾಲ್ಕು ಕೇಸ್‌ಗಳನ್ನು ಮಾತ್ರ ತೀರ್ಮಾನಿಸಿದೆ. ಅದರಲ್ಲೂ ೨ ಬಹಳ ಮೈನರ್ ಕೇಸ್‌ಗಳು (ಕೇವಲ ೧ ಲಕ್ಷ ರೂಪಾಯಿಗಷ್ಟೇ ಸೀಮಿತವಾದವು). ಕ್ಯಾನ್‌ಫಿನಾ ಮತ್ತು ಕ್ಯಾನ್‌ಸಿಗೋಗಳಿಗೆ ಸಂಬಂಧಿಸಿದ ಇನ್ನೆರಡು ಮೇಜರ್ ಕೆಲಸಗಳಲ್ಲಿ ದೊಡ್ಡ ಗೂಳಿ ಹಿತೆನ್ ದಲಾಲ್‌ನನ್ನು ಒಳಗೊಂಡಿದ್ದ ಬ್ರೋಕರ್‌ಗಳಿಗೆ ಶಿಕ್ಷೆಯನ್ನು ವಿಧಿಸಲಾಯಿತು. ಆದರೆ, ತಪ್ಪಿತಸ್ಥರು ಸುಪ್ರೀಂಕೋರ್ಟ್‌ಗೆ ಅಪೀಲ್ ಹೋಗಲು ನಾಲ್ಕು ವಾರ ಕಾಲಾವಕಾಶವನ್ನು ಕಲ್ಪಿಸಿಕೊಡಲಾಯಿತು. ಬ್ರೋಕರ್‌ಗಳು ಸರ್ವೋಚ್ಚ ನ್ಯಾಯಾಲಯದಲ್ಲಿ 'ಸ್ಟೆ' ಪಡೆದರು. ಹಿತೇನ್ ದಲಾಲ್‌ನ ಲಾಯರ್‌ಗಳ ಭವ್ಯವಾಣಿಯನ್ನು ಕೇಳಿ : ಈ ಕೇಸ್‌ಗಳು ತೀರ್ಮಾನವಾಗಬೇಕಾದರೆ ಇನ್ನೂ ಕನಿಷ್ಠ ಆರು ವರ್ಷಗಳು ಬೇಕು. ಅಲ್ಲಿಯವರೆಗೆ ನಮ್ಮ ಕಕ್ಷಿದಾರರು ಏನು ಮಾಡಲೂ ಸರ್ವಸ್ವತಂತ್ರರು.

ಈ ಹಗರಣದ ಪ್ರಮುಖ ಆರೋಪಿ ಹರ್ಷದ್ ಮೆಹ್ತಾನ ವಿರುದ್ಧ ೨೩ ಕೇಸ್‌ಗಳು ದಾಖಲಾಗಿವೆ. ಮಾರುತಿ ಉದ್ಯೋಗ್ ಲಿಮಿಟೆಡ್ ಕಂಪೆನಿಯ ೩೮.೯೬ ಕೋಟಿ ರೂ.ಗಳನ್ನು ದುರುಪಯೋಗಪಡಿಸಿಕೊಂಡಿರುವುದು ರುಜುವಾತಾಗಿದೆ ಎಂದು ೫ ವರ್ಷಗಳ ಕಠಿಣ ಸಜೆ ಮತ್ತು ೩೫,೦೦೦ ರೂ. 'ಬೃಹತ್' ಮೊತ್ತದ ಜುಲ್ಮಾನೆಯನ್ನು ಹೇರಲಾಗಿದೆ. ಹರ್ಷದ್ ಮೆಹ್ತಾ ಸುಪ್ರೀಂಕೋರ್ಟ್‌ಗೆ ಅಪೀಲ್ ಹಾಕಿ ನವೆಂಬರ್ ೯೯ರಲ್ಲಿ 'ಸ್ಟೆ' ಪಡೆದಿದ್ದಾನೆ.

**ಸತ್ಯ ಮುಚ್ಚಿಡುವ ಪ್ರಯತ್ನ**

ವಿಶೇಷ ನ್ಯಾಯಾಲಯದಲ್ಲಿ ತಪ್ಪಿತಸ್ಥರ ವಿರುದ್ಧ ನಡೆಯುತ್ತಿರುವ ವಿಚಾರಣೆಯ ಪ್ರಕ್ರಿಯೆಯನ್ನು ಕೂಲಂಕಷವಾಗಿ ಗಮನಿಸಿದರೆ ನ್ಯಾಯಾಲಯದ ಮುಂದೆ ಸತ್ಯವನ್ನು ಮುಚ್ಚಿಡುವ ಪ್ರಯತ್ನಗಳೂ ನಡೆದಿವೆ ಎನ್ನುವ ಸಂಶಯ ಮೂಡುತ್ತದೆ. ಈ ಹಗರಣಕ್ಕೆ ಕಾರಣರಾದವರು ಕೆಲವು ಬ್ಯಾಂಕುಗಳ ಕಿರಿಯ ಅಧಿಕಾರಿಗಳು. ಅವರು ತಮ್ಮ ಅಧಿಕಾರದ ಪರಿಧಿಯನ್ನು ಮೀರಿ ತಮ್ಮ ಮ್ಯಾನೇಜ್‌ಮೆಂಟ್ ಗಮನಕ್ಕೆ ತಾರದೆ ಬ್ರೋಕರ್‌ಗಳಿಗೆ ಭಾರಿ ಮೊತ್ತದ ಹಣವನ್ನು ಬಿಡುಗಡೆ ಮಾಡಿದರೆಂದೂ ಈ 'ದ್ರೋಹಿಗಳು' ತಮ್ಮ ಬ್ಯಾಂಕುಗಳಿಗೆ ದೊಡ್ಡ ಮೋಸ ಮಾಡಿದರೆಂದೂ ಒಂದು ಥಿಯರಿಯನ್ನು ರೂಪಿಸಲಾಗುತ್ತಿದೆ.

ಭಾರತ ಸರ್ಕಾರದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಈ ಷೇರು ವಹಿವಾಟಿನಲ್ಲಿ ಪಾಲ್ಗೊಂಡಿದ್ದು ಕೇವಲ ೬% ಮಾತ್ರ. ೧೯೯೧-೯೨ರಲ್ಲಿ ಅದು ಗಳಿಸಿದ ನಿವ್ವಳ ಲಾಭ ೧೭೫ ಕೋಟಿ. ಹಿಂದಿನ ವರ್ಷಕ್ಕೆ ಹೋಲಿಸಿದರೆ ಶೇ. ೬೪ರಷ್ಟು ಹೆಚ್ಚಿನ ಲಾಭ ಗಳಿಸಿತ್ತು (ತೆರಿಗೆ ಮತ್ತು

## ಮಹೇಶನ್ ಎಮ್.

ಹಗರಣದಲ್ಲಿ ನಷ್ಟವಾದ ೮೦೦ ಕೋಟಿಯನ್ನು ಕಳೆದು). ಈ ಷೇರು ವಹಿವಾಟಿನಲ್ಲಿ ಸಿಂಹಪಾಲು ೬೭.೬೮% ಕೇವಲ ೪ ವಿದೇಶಿ ಬ್ಯಾಂಕುಗಳದಾಗಿತ್ತು. ಸ್ಟಾಂಡರ್ಡ್ ಚಾರ್ಟರ್ಡ್ ಸಿಟಿ ಬ್ಯಾಂಕ್, ಬ್ಯಾಂಕ್ ಆಫ್ ಅಮೆರಿಕಾ ಮತ್ತು ಎ.ಎನ್.ಝಡ್. ಗ್ರಿಂಡ್ಲೇಸ್. ಕೇವಲ ಶೇ. ೬ರಷ್ಟು ಭಾಗಿಯಾಗಿ ಎಸ್.ಬಿ.ಐ. ೧೭೫ ಕೋಟಿ ನಿವ್ವಳ ಲಾಭ ಗಳಿಸಬಹುದಾದರೆ ಈ ವಿದೇಶಿ ಬ್ಯಾಂಕುಗಳು ಗಳಿಸಿರಬಹುದಾದ ಲಾಭದ ಮೊತ್ತವನ್ನು ಓದುಗರ ಊಹೆಗೆ ಬಿಡಬೇಕಾಗುತ್ತದೆ. ಬ್ಯಾಂಕ್‌ಗಳ ಟಾಪ್ ಮ್ಯಾನೇಜ್‌ಮೆಂಟಿನ ಸಕ್ರಿಯ ಜ್ಞಾನವಿಲ್ಲದೆ ಈ ಬಗೆಯ ವಹಿವಾಟು ಯಾವ ಬ್ಯಾಂಕಿನಲ್ಲೂ ಸಾಧ್ಯವಿಲ್ಲ. ಈ ಅಂಶವನ್ನು ಪುಷ್ಟೀಕರಿಸಲು ಇದಲ್ಲದೆ ಇನ್ನೂ ಅನೇಕ ಮಾಹಿತಿಗಳಿದ್ದರೂ ಬ್ಯಾಂಕ್ ಮ್ಯಾನೇಜ್‌ಮೆಂಟ್‌ನ್ನು ವಿಚಾರಣೆಗೆ ಗುರಿಪಡಿಸಲಾಗುತ್ತಿಲ್ಲ. ಆದರೆ, ಈ ವಿದೇಶಿ ಬ್ಯಾಂಕುಗಳು ಹೇಳುವುದೆಂದರೆ ಅವು ಈ ಹಗರಣದಲ್ಲಿ ಸಿಲುಕಿ ಅಪಾರ ನಷ್ಟವನ್ನು ಅನುಭವಿಸಿದವಂತೆ! ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್‌ನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಬ್ಯಾಂಕ್ ಆಫ್ ಕರಾಡ್ ಮತ್ತು ಮೆಟ್ರೋಪಾಲಿಟನ್ ಕೋ-ಆಪರೇಟಿವ್ ಬ್ಯಾಂಕುಗಳು ಅಕ್ರಮವಾಗಿ ಸರ್ಕಾರದ ಸೆಕ್ಯುರಿಟಿಗಳ ಮಾರಾಟದ ವ್ಯವಹಾರದಲ್ಲಿ ತನ್ನಿಂದ ಭಾರಿ ಮೊತ್ತದ ಸಾಲವನ್ನು ಪಡೆದಿದ್ದಾರೆಂದೂ ಅದು ವಾಪಸ್ ಬರಬೇಕೆಂದೂ ಮೊಕದ್ದಮೆಯನ್ನು ಸ್ಟಾ. ಚಾ. ಬ್ಯಾಂಕ್ ಹೂಡಿತ್ತು. ಈ ಮೊಕದ್ದಮೆಗಳೇ ಆ ಎರಡು ಬ್ಯಾಂಕುಗಳ ದಿವಾಳಿಗೆ ಕಾರಣವಾಗಿ ಆ ಬ್ಯಾಂಕುಗಳಲ್ಲಿ ಠೇವಣಿ ಇಟ್ಟಿದ್ದ ಅಮಾಯಕ ಠೇವಣಿದಾರರು ಹಣವನ್ನೆಲ್ಲಾ ಕಳೆದುಕೊಂಡು ಹಠಾತ್ತಾಗಿ ಪಾಪರ್‌ಗಳಾಗಿಹೋದರು. ಆದರೆ ಈ ಕೇಸ್‌ಗಳನ್ನು ಸದ್ದಿಲ್ಲದೆ ಸ್ಟಾ.ಚಾ. ಬ್ಯಾಂಕ್ ಹಿಂತೆಗೆದುಕೊಂಡಿದೆ. ಸಿ.ಬಿ.ಐ. ಆಗಲಿ ಅಥವಾ ವಿಚಾರಣಾಧಿಕಾರಿಗಳಾಗಲಿ ಈ ಕೇಸುಗಳನ್ನು ಹಿಂತೆಗೆಯುವ ಕ್ರಮವನ್ನು ಒಪ್ಪಿದ್ದರ ಅರ್ಥವೇನು ? ಈ ಕೇಸ್‌ಗಳಲ್ಲಿ ಏನೇನೂ ತಿರುಳಿಲ್ಲ, ಕಿಂಚಿತ್ತೂ ಸತ್ವವಿಲ್ಲವೆಂದಲ್ಲವೆ ? ಹಾಗಾದರೆ ಆ ಎರಡು ಬ್ಯಾಂಕುಗಳನ್ನು ಮುಚ್ಚಬೇಕಾದ ಅಗತ್ಯವೆಲ್ಲಿತ್ತು ? ಸರಿಯಾದ ವಿಚಾರಣೆ ನಡೆಸಿದ್ದರೆ ಈ ಹಗರಣದಲ್ಲಿ ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್‌ನ ಹೊಲಸು ಪಾತ್ರ ಹೊರಬೀಳುತ್ತಿತ್ತು. ಆದ್ದರಿಂದಲೇ ಅದು ತಾನೇ ಹೂಡಿದ್ದ ಮೊಕದ್ದಮೆಯನ್ನು ವಾಪಸ್ಸು ಪಡೆಯಿತು.

ಸ್ಥಿತಿ

ಹರಿದ ನೋಟಿಗೆ
ಅಬಕಾರಿ ಮೊಹರಿನ
ತೇಪೆ,
ಸಾಕು
ದೇಶದ ದುರ್ಗತಿ
ಅರಿಯಲು.

ಎಸ್. ಆರ್. ವಿ. ಕಾರಂತ್
ಭಾರತೀಯ ಜೀವವಿಮಾ ನಿಗಮ
ಶಾಖೆ ೨, ಪಿ.ಜೆ. ಬಡಾವಣೆ, ದಾವಣಗೆರೆ-೫೭೭ ೦೦೨

ಈ ಹಗರಣದಲ್ಲಿ ಸಿಕ್ಕಿಬಿದ್ದ ದೊಡ್ಡ ಬ್ರೋಕರ್ ಭುಪೇನ್ ದಲಾಲ್‌ನೇ ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್‌ನ ವಿರುದ್ಧ ವಿಚಾರಣೆ ನಡೆಸಬೇಕೆಂದು ವಿಶೇಷ ನ್ಯಾಯಾಲಯದಲ್ಲಿ ಕೇಸ್ ಹಾಕಿದ್ದ. ಅವನ ಪ್ರಕಾರ ಈ ಹಗರಣದಲ್ಲಿ ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್ ಒಂದು ಚಿಕ್ಕಾಸನ್ನೂ ಕಳೆದುಕೊಂಡಿಲ್ಲ. ತನಗೆ ಬರಬೇಕೆಂದು ಹೇಳಿರುವ ೮೫೦ ಕೋಟಿಯನ್ನು ಸಂಪೂರ್ಣವಾಗಿ ಪಡೆದಿದೆ ಎಂದು ಅವನ ವಾದವಾಗಿತ್ತು. ಆದರೆ ಸಿ.ಬಿ.ಐ.ಯೇ ಈ ವಾದವನ್ನು ವಿರೋಧಿಸಿ ಸ್ಟಾ. ಚಾ. ಪರ ವಕಾಲತ್ತು ವಹಿಸಿತು. ಇದೇ ಸ್ಟಾ. ಚಾ. ಬ್ಯಾಂಕ್ ೧೫% ಗ್ಯಾರಂಟಿ ರಿಟರ್ನ್ಸ್ ಭರವಸೆಯ ಮೇರೆಗೆ ಹಿತೆನ್ ದಲಾಲ್ ಎನ್ನುವ ಬ್ರೋಕರ್‌ಗೆ ಬೃಹತ್ ಸಾಲದ ಭರವಸೆಯನ್ನು ಕೊಟ್ಟಿದ್ದ ವಿಷಯ ಸಿ.ಬಿ.ಐ.ನವರಿಗೆ ಗೊತ್ತಿತ್ತು. ಆ ಬ್ಯಾಂಕ್‌ನ ಅಧಿಕಾರಿಯೊಬ್ಬ ಇದರ ಬಗ್ಗೆ ಸಾಕ್ಷಿ ಕೊಡಲು ಪ್ರಯತ್ನಿಸಿದಾಗ ಅವನನ್ನು ಬ್ಯಾಂಕ್ ಓಡಿಸಿದ ವಿಷಯವೂ ಸಿ.ಬಿ.ಐ. ಗಮನಕ್ಕೆ ಬಂದಿತ್ತು. ಆದರೂ ಸಹ ಸಿ.ಬಿ.ಐ. ಈ ಹಗರಣಗಳ ಬಗ್ಗೆ ಈ ಬ್ಯಾಂಕ್‌ಗೆ ಯಾವ ವಿಧವಾದ ಮಾಹಿತಿಯೂ ಇಲ್ಲವೆಂದು ವಿಚಾರಣೆಯನ್ನು ಮಾಡದೆಯೇ ಅಭಿಪ್ರಾಯಿಸಿದ್ದು ಆಶ್ಚರ್ಯವಲ್ಲವೇ ? ಹೀಗೆ ನಷ್ಟ, ನಷ್ಟ, ಎನ್ನುತ್ತಲೇ ಬಹುದೊಡ್ಡ ಲಾಭವನ್ನು ಮಾಡಿದುದಲ್ಲದೆ ಅವರ ಹೆಸರಿಗೆ ಕಿಂಚಿತ್ತೂ ಕಳಂಕ ತಂದುಕೊಳ್ಳದೆ ಎರಡು ಸ್ಥಳೀಯ ಬ್ಯಾಂಕುಗಳು ಮುಚ್ಚಲು ಕಾರಣವಾಯಿತು. ನಾಶವಾದವರೆಂದರೆ ಆ ಎರಡು ಬ್ಯಾಂಕುಗಳಲ್ಲಿ ತಮ್ಮ ಉಳಿತಾಯವನ್ನೆಲ್ಲಾ ಡಿಪಾಸಿಟ್ ಮಾಡಿದ್ದ ಸಣ್ಣ ಠೇವಣಿದಾರರು. ಅವರ ದಾರುಣ ಕಥೆಯನ್ನು ಕೇಳುವವರೇ ಇಲ್ಲ.

ಅತ್ಯಾಶ್ಚರ್ಯಕರವಾದ ವಿಷಯವೆಂದರೆ ನಮ್ಮ ದೇಶದ ಹಣಕಾಸಿನ ವ್ಯವಹಾರವನ್ನು ಸಂಪೂರ್ಣವಾಗಿ ನಿಯಂತ್ರಿಸುವ ರಿಸರ್ವ್ ಬ್ಯಾಂಕ್‌ನ ನೂರಕ್ಕೆ ನೂರು ಸಬ್ಸಿಡಿಯರಿಯಾದ ನ್ಯಾಷನಲ್ ಹೌಸಿಂಗ್ ಬ್ಯಾಂಕ್ ಮೆಹ್ತಾನಿಗೆ ೧೨೦೦ ಕೋಟಿ ರೂ.ಗಳನ್ನು ಕೊಟ್ಟಿದ್ದು, ಹರ್ಷದ್ ಮೆಹ್ತಾನಂತಹ ದರೋಡೆಕೋರನಿಗೆ. ರಿಸರ್ವ್ ಬ್ಯಾಂಕ್‌ನಿಂದ ಪರವಾನಗಿ ಇಲ್ಲದೆ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಮತ್ತು ನ್ಯಾಷನಲ್ ಹೌಸಿಂಗ್ ಬ್ಯಾಂಕ್‌ಗೆ ಬ್ರೋಕರ್ ಆಗಿ ಕೆಲಸ ಮಾಡುತ್ತಿದ್ದ ದುಷ್ಟನಿಗೆ, ಸಹಾಯ ಮಾಡಲು ನಮ್ಮ ಹಣಕಾಸು ಸಂಸ್ಥೆಗಳು ತೋರಿಸಿದ ತವಕ, ಕಾತುರ, ಆಸ್ಥೆಯನ್ನು ಯಾವ ಭಾಷೆಯಲ್ಲಿ

ವಿವರಿಸುವುದೋ ಅರಿವಾಗುವುದಿಲ್ಲ. ಆದರೆ ರಿಸರ್ವ್ ಬ್ಯಾಂಕ್‌ನವರನ್ನಾಗಲಿ ಎಸ್.ಬಿ.ಐ.ನ ಟಾಪ್ ಅಧಿಕಾರಿಗಳನ್ನಾಗಲಿ, ಸಿ.ಬಿ.ಐ. ವಿಚಾರಣೆಗೆ ಒಳಪಡಿಸಲೇ ಇಲ್ಲ. ವಿದೇಶೀ ಬ್ಯಾಂಕುಗಳ ಮಾತು ಬಹಳ ದೂರವೇ ಉಳಿಯಿತು.

ಈ ದೊಡ್ಡ ಹಗರಣಕ್ಕೆ ಕಾರಣನಾದ ಬಿಗ್ ಬುಲ್ ಹರ್ಷದ್ ಮೆಹ್ತಾ ಸ್ಟಾಕ್ ಮಾರುಕಟ್ಟೆಗಳಲ್ಲಿ ವ್ಯಾಪಾರ ವ್ಯವಹಾರ ಮಾಡಕೂಡದೆಂದು ಬಹಿಷ್ಕಾರವನ್ನು ಹೇರಲಾಗಿದೆಯಾದರೂ ಅವನು ಮತ್ತು ಅವನ ಗ್ಯಾಂಗ್ ಪರೋಕ್ಷವಾಗಿ ಷೇರು ಪೇಟೆಯಲ್ಲಿ ತಮ್ಮ 'ಪವಿತ್ರ' ಕಾರ್ಯವನ್ನು ನಡೆಸುತ್ತಲೇ ಇದ್ದಾರೆ.

ಈ ಹಗರಣವಾದ ನಂತರದ ವರ್ಷಗಳಲ್ಲಿ ಹರ್ಷದ್ ಬಾಂಬೆ ಸ್ಟಾಕ್ ಎಕ್ಸ್‌ಚೇಂಜ್ ಉಪಾಧ್ಯಕ್ಷ ರಾಜೇಂದ್ರ ಬನಾತಿಯ ಸೇರಿದಂತೆ, ೬ ಬ್ರೋಕರ್‌ಗಳ ಸಹಾಯದಿಂದ ಷೇರು ಮಾರುಕಟ್ಟೆಯನ್ನು ೪ ಬಾರಿ ಕ್ಷೋಭೆಗೊಳಪಡಿಸಿದ. ೧೯೯೫ರಲ್ಲಿ ರಿಲೆಯನ್ಸ್ ಮತ್ತಿತರ ಕೆಲವು ಕಂಪೆನಿಗಳ ಷೇರುಗಳನ್ನು ಕೆಳಗಿಳಿಸಲು ಒಂದು ಬೃಹತ್ ಇಂಟರ್ ಎಕ್ಸ್‌ಚೇಂಜ್ ವ್ಯವಹಾರದಲ್ಲಿ ತೊಡಗಿದ್ದ. ಈ ವಿಷಯ ಸೇಬಿ ಗಮನಕ್ಕೆ ಸ್ಪಷ್ಟವಾಗಿ ಬಂದಿತ್ತಾದರೂ ಅದು ಅವನ ವಿರುದ್ಧ ಯಾವ ವಿಧವಾದ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಈ ಬಗೆಯ ಅನೇಕ 'ಫ್ರಾಡ್'ಗಳು ನಡೆದುಹೋದವು. ಹರ್ಷದ್ ಮೆಹ್ತಾಗೆ ಪರೋಕ್ಷವಾಗಿ ಸಂಬಂಧಿಸಿದ್ದ ೧೮ ಬ್ರೋಕರ್‌ಗಳು ಬಾಂಬೆ, ಬರೋಡ, ಮತ್ತು ಕಲ್ಕತ್ತಾ ಸ್ಟಾಕ್ ಮಾರುಕಟ್ಟೆಗಳಲ್ಲಿ ಬಹಳ ಚುರುಕಾಗಿ ಕಾರ್ಯನಿರತರಾಗಿದ್ದರು. ೧೯೯೮ರಲ್ಲಿ ಈ ಸ್ಟಾಕ್ ಮಾರುಕಟ್ಟೆಗಳಲ್ಲಿ ವೀಡಿಯೋಕಾನ್‌ನ ೫೦% ಷೇರುಗಳನ್ನು, ಬಿ.ಪಿ.ಎಲ್.ನ ೭೦% ಷೇರುಗಳನ್ನು ಕೊಂಡು ಮಾರುಕಟ್ಟೆಯಲ್ಲಿ ಕೃತಕವಾಗಿ ಅಭಾವವನ್ನು ಸೃಷ್ಟಿಸಿದರು. ಈ ಕೃತ್ಯಗಳು ನಡೆದಾಗ ಸೇಬಿ ಬಹಳ ಪ್ರಯಾಸದಿಂದ ಹರ್ಷದ್‌ನನ್ನು ಕರೆಸಿ ಈ ರೀತಿಯ ಬೆಲೆ ತಿರುಚುವಿಕೆಗೆ ವಿವರಣೆಯನ್ನು ಕೇಳುವ 'ಧೈರ್ಯ' ಮಾಡಿತು.

**ಸರಕಾರ ಏನು ಮಾಡಿದೆ ?**

ಈ ಹಗರಣದಲ್ಲಿ ನಷ್ಟವಾದ ಕೋಟ್ಯಾನುಕೋಟಿ ರೂ.ಗಳಲ್ಲಿ ಕಿಂಚಿತ್ತನ್ನೂ ಸರ್ಕಾರ ವಸೂಲು ಮಾಡಲಾಗಿಲ್ಲ. ಈ ದಿಸೆಯಲ್ಲಿ ಸರ್ಕಾರ ಮಹತ್ ಪ್ರಯತ್ನವನ್ನು ನಡೆಸಿದೆಯಂತೆ. ಅದಕ್ಕಾಗಿ ಒಬ್ಬ ಕಸ್ಟೋಡಿಯನ್‌ನನ್ನು ನೇಮಕ ಮಾಡಿದೆ. ಈ ಕಸ್ಟೋಡಿಯನ್ ಇದುವರೆಗೆ ಮಾಡಿರುವ ಅತ್ಯಂತ ಸಾಹಸದ ಕೆಲಸವೆಂದರೆ ಈ ಹಗರಣಕ್ಕೆ ಸಂಬಂಧಪಟ್ಟವರೆಂದು ಕೆಲವು ಚಿಕ್ಕ ಬ್ಯಾಂಕುಗಳ ಕಿರಿಯ ಅಧಿಕಾರಿಗಳನ್ನು ಸಂಶಯ ವ್ಯಕ್ತಿಗಳೆಂದು ಪ್ರಕಟಪಡಿಸಿರುವುದು. ಈ ಅಗಾಧ ನಷ್ಟವನ್ನು ಇವರಿಂದ ವಸೂಲು ಮಾಡಬೇಕೆಂದು ಅವರ ಸಲಹೆ. ಈ ಕಸ್ಟೋಡಿಯನ್‌ರ ತೀಕ್ಷ್ಣ ಕಣ್ಣುಗಳಿಗೆ ಅತ್ಯಂತ ಶಕ್ತಿಯುತವಾದ, ಕುಖ್ಯಾತಿಯ ತುದಿಯನ್ನು ಮುಟ್ಟಿರುವ, ಪಲ್ಲವ ಸೇಥಿ ಆಗಲಿ, ಅಜಯ ಕಯಾನ್ ಆಗಲಿ ಕಾಣಿಸದಿರುವುದು ಆಶ್ಚರ್ಯವೇ ಸರಿ.

ಈ ಬಗೆಯ ಹಗರಣಗಳು ನಮ್ಮ ಷೇರುಪೇಟೆಯ ವ್ಯವಸ್ಥೆಗೆ ವಿಶೇಷವೆಂದು ಭಾವಿಸಬಾರದು. ಇದು ಎಲ್ಲಾ ಬಂಡವಾಳಶಾಹಿ ಅರ್ಥವ್ಯವಸ್ಥೆಗಳಲ್ಲಿ ಆಗಾಗ ನಡೆಯುವುದೇ ಹೌದು. ಆದರೆ, ಇಂತಹ ಹಗರಣಕಾರರ ವಿರುದ್ಧ, ಗುರುತರವಾದ ಆರ್ಥಿಕ ಅಪರಾಧಿಗಳಿಗೆ ಗುರಿಯಾಗುವವರ ವಿರುದ್ಧ ಬೇರೆಡೆ ನ್ಯಾಯ ಪದ್ಧತಿ ಮತ್ತು ಷೇರುಪೇಟೆಗಳ ನಿಯಮಾವಳಿಗಳು ಯಾವ ರೀತಿ ಪ್ರತಿಕ್ರಿಯಿಸುತ್ತವೆ ಎನ್ನುವುದೇ ಮುಖ್ಯ. ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡುವುದು ಸೂಕ್ತ ಮತ್ತು ಪ್ರಸ್ತುತ. ಮೈಕ್‌ಮಿಲನ್ ಐರ್ವಬೋಸ್ಕಿ ಮತ್ತು ನಿಕ್ ಲೀಸನ್ ಕುಖ್ಯಾತ ಹೆಸರುಗಳು. ನಿಕ್ ಲೀಸನ್‌ನ ಊಹೆಯ ವ್ಯಾಪಾರ ಬಾರಿಂಗ್‌ಸ್ ಬ್ಯಾಂಕನ್ನು ಮುಚ್ಚಲು ಕಾರಣವಾಯಿತು. ೧೯೯೫ ಫೆಬ್ರುವರಿ ೬ರಂದು ನಡೆದ ಈ ಘಟನೆ ಹರ್ಷದ್‌ನ ಅವ್ಯವಹಾರಗಳ ಮೂರು ವರ್ಷದ ನಂತರ ನಡೆದ ಹಗರಣ. ನಿಕ್ ಲೀಸನ್ ಈಗಾಗಲೆ ಸಿಂಗಾಪೂರದ ಜೈಲೊಂದರಲ್ಲಿ ಕಠಿಣ ಶಿಕ್ಷೆಯನ್ನು ಅನುಭವಿಸುತ್ತಿದ್ದಾನೆ. ಆದರೆ ನಮ್ಮ ಹರ್ಷದ್ ಮಾತ್ರ ಸರ್ವಸ್ವತಂತ್ರವಾಗಿ ಮಾರುಕಟ್ಟೆಗಳನ್ನು ರಿಗ್ ಮಾಡುವುದರಲ್ಲಿ ನಿರತನಾಗಿದ್ದಾನೆ.

೧೯೯೨ರಿಂದ ನಮ್ಮ ಷೇರು ಮಾರುಕಟ್ಟೆ ಇತಿಹಾಸದ ತಿರುಳು ಎಂದರೆ ಹಗರಣಗಳು: ರಿಲೆಯನ್ಸ್ ಡೂಪ್ಲಿಕೇಟ್ ಸರ್ಟಿಫಿಕೇಟ್ ಹಗರಣ, ಎಂ.ಎಸ್.ಶೋ ಹಗರಣ, ಸಿ.ಆರ್.ಬಿ. ಹಗರಣ ಮತ್ತು ಸರ್ಕಾರಿ ಸ್ವಾಮ್ಯದ ಯು.ಟಿ.ಐ. ಹಗರಣ. ಇಂದು ಷೇರುಪೇಟೆಯನ್ನು ಆಕ್ರಮಿಸಿರುವ ವ್ಯವಹಾರವೆಂದರೆ ಊಹೆಯ ವ್ಯಾಪಾರ. ಇಂದಿನ ದೊಡ್ಡ ಊಹೆಯ ವ್ಯಾಪಾರಿಗಳು ಒಂದು ಎಕ್ಸ್‌ಚೇಂಜ್‌ನಿಂದ ಮತ್ತೊಂದಕ್ಕೆ ಹಾರುತ್ತಾ ಷೇರು ಬೆಲೆಗಳನ್ನು ತಮ್ಮ



ತಾಳಕ್ಕೆ ತಕ್ಕಂತೆ ಕುಣಿಸುತ್ತಿದ್ದಾರೆ. ಆದುದರಿಂದಲೇ ಷೇರು ಬೆಲೆಗಳಲ್ಲಿ ಪ್ರಚಂಡ ಏರಿಳಿತಗಳು ಕಾಣಿಸಿಕೊಳ್ಳುತ್ತಿವೆ.

ಪಾಶ್ಚಿಮಾತ್ಯ ಮಾರುಕಟ್ಟೆಗಳಲ್ಲಿ ಅತ್ಯಂತ ಹೀನವಾದ ಪದವೆಂದರೆ ಇನ್‌ಸೈಡರ್ ಟ್ರೇಡ್. ಅದು ಸಂಪೂರ್ಣ ಕಾನೂನು ಬಾಹಿರವಾದುದು. (ಒಂದು ಕಂಪೆನಿಯ ರಹಸ್ಯಗಳನ್ನು ಅದಕ್ಕೆ ಸಂಬಂಧಿಸಿದ ವಿಸ್ತರಣಾ ಯೋಜನೆ ಇರಲಿ, ಹಣಕಾಸಿನ ಫಲಿತಾಂಶಗಳ ವಿಚಾರವೇ ಆಗಲಿ, ಒಡೆಯರಾಗಲಿ, ವ್ಯವಸ್ಥಾಪಕರಾಗಲಿ, ನಿರ್ದೇಶಕರುಗಳಾಗಲಿ, ಸಲಹೆಗಾರರಾಗಲಿ ಬಳಸಿಕೊಂಡು ಷೇರುಗಳನ್ನು ಕೊಂಡು ಅಥವಾ ಮಾರಿ ಹಣಗಳಿಸುವುದಕ್ಕೆ ಇನ್‌ಸೈಡರ್ ಟ್ರೇಡ್ ಎಂದು ಹೆಸರು.) ಆದರೆ, ನಮ್ಮ ಷೇರು ಮಾರುಕಟ್ಟೆಗಳಲ್ಲಿ ಇದೇ ಮುಖ್ಯವಾದ ವ್ಯವಹಾರ. ಸಾರ್ವಜನಿಕರಿಂದ ಹಣವನ್ನು ಸಂಗ್ರಹಿಸಿ ಚಕ್ಕನೆ ಮಂಗಮಾಯವಾಗುವ ಕಂಪೆನಿಗಳು ಅನೇಕವುಂಟು. ಸೇಬಿ ಅಧ್ಯಕ್ಷ ಡಿ. ಆರ್. ಮೆಹ್ತಾ ಪ್ರಕಾರ ಈ ವರ್ಷದಲ್ಲೇ ಸುಮಾರು ೮೦ ಕಂಪೆನಿಗಳು ೩೩೦.೭೮ ಕೋಟಿಯಷ್ಟು ಹಣವನ್ನು ಈಕ್ವಿಟಿ ಮಾರುಕಟ್ಟೆಯಲ್ಲಿ ಸಂಗ್ರಹಿಸಿ ಮಂಗಮಾಯವಾಗಿಬಿಟ್ಟಿವೆ. (ನಮ್ಮ ಕಂಪೆನಿ ವ್ಯವಹಾರ ಇಲಾಖೆ ಏನು ಮಾಡುತ್ತಿದೆಯೆಂದು ಯಾರು ಬಲ್ಲರು? ಸಿ.ಆರ್.ಬಿ. ಹಗರಣವಾಗಿ ಎರಡು ವರ್ಷಗಳು ಕಳೆದುಹೋದವು. ಅದರಲ್ಲಿ ಹಣ ಹೂಡಿದ್ದ ಯಾರೊಬ್ಬರಿಗೂ ಹಣ ವಾಪಸ್ಸು ಬಂದಿಲ್ಲ. ಈ ಹಗರಣದ ಅಪರಾಧಿ ಸಿ.ಆರ್. ಬನ್‌ಸಾಲಿ ಮಾತ್ರ ಜಾಮೀನಿನ ಮೇಲೆ ಸ್ವತಂತ್ರವಾಗಿ ಎಂದಿನಂತೆ ತನ್ನ ದಂಧೆಯನ್ನು ಮುಂದುವರಿಸಿದ್ದಾನೆ.)

ನಮ್ಮ ಬಂಡವಾಳಶಾಹಿ ವರ್ಗವಾಗಲಿ, ಬಂಡವಾಳಶಾಹಿ ಪದ್ಧತಿಯನ್ನು 'ಮನಸಾರೆ' ಒಪ್ಪಿರುವ ನಮ್ಮ ಸರ್ಕಾರವಾಗಲಿ, ಅತ್ಯಂತ ತ್ವರಿತವಾಗಿ ಅರಿಯಬೇಕಾದ ಸಾಮಾನ್ಯ ಜ್ಞಾನವೆಂದರೆ : ಷೇರು ಮಾರುಕಟ್ಟೆಗಳಲ್ಲಿ ಸಣ್ಣ ಹೂಡಿಕೆದಾರರು ಸಂಪೂರ್ಣ ವಿಶ್ವಾಸವಿಟ್ಟು ಭಾಗವಹಿಸದಿದ್ದರೆ ಅಂತಹ ರಾಷ್ಟ್ರದ ಷೇರು ಮಾರುಕಟ್ಟೆ ಬೆಳೆಯಲು ಸಾಧ್ಯವೇ ಇಲ್ಲ. ಭಾರತದ ಸಣ್ಣ ಹೂಡಿಕೆದಾರ ಮಾರುಕಟ್ಟೆಯಿಂದ ಬಹಳ ದೂರ ಉಳಿದಿದ್ದು ಅವನನ್ನು ಮಾರುಕಟ್ಟೆಗೆ ಮರಳುವಂತೆ ಮಾಡಬೇಕಾದುದು ಅತ್ಯಗತ್ಯ. ನಮ್ಮ ವ್ಯವಸ್ಥೆ, ವಿಶೇಷವಾಗಿ ಹಣಕಾಸು ನಿಯಂತ್ರಣ ಇಲಾಖೆಗಳು ಹಾಗೂ ನಮ್ಮ ನ್ಯಾಯಾಂಗ, ಈ ಸಮಸ್ಯೆಗಳಿಗೆ ಸ್ಪಂದಿಸುತ್ತಿರುವ ವೇಗ ಹೀಗೇ ಮುಂದುವರಿದರೆ ನ್ಯಾಯವೇ ಒಂದು ದೊಡ್ಡ ತಮಾಷೆಯಾಗಿ ಪರಿವರ್ತಿತವಾಗುವ ಸಾಧ್ಯತೆಗಳೇ ಬಹಳ. ಒಬ್ಬ ಯಶಸ್ವಿ ಹರ್ಷದ್ ಮೆಹ್ತಾ ಸಾವಿರಾರು ಹರ್ಷದ್ ಮೆಹ್ತಾಗಳಿಗೆ ಜನ್ಮ ಕೊಡಬಲ್ಲ ಉದಾರೀಕರಣ ಮತ್ತು ಜಾಗತೀಕರಣಗಳನ್ನು ಅಳವಡಿಸಿಕೊಳ್ಳುತ್ತಿರುವ ನಮ್ಮ ಅರ್ಥವ್ಯವಸ್ಥೆ ಇಂತಹ ಮೆಹ್ತಾಗಳು ಎಬ್ಬಿಸುವ ಬಿರುಗಾಳಿಯಿಂದ ಯಾವ ಕ್ಷಣದಲ್ಲಾದರೂ ಕುಸಿಯಬಹುದು.

ಮಹೇಶನ್ ಎಮ್.

ನಂ. ೧೬೮೯, ೧೫ನೇ ಮೇನ್, ೩೧ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

## ಯಾನ (ಹಾಡು)

ಕರೆಯುತಿದೆ ಕೈ ಬೀಸಿ ಶತಮಾನ ನೂತನ :
ಮೊಳಗಿ ಬರುತಿದೆ ನವನವೀನ ಗಾನ !

ಹೊಸ ಗಾಳಿ ಬೀಸುತಿದೆ, ಹಣ್ಣೆಲೆಗಳುದುರುತಿವೆ.
ಮಿಡಿಯುತಿದೆ ಚೈತ್ರ ಮರಗಿಡದೊಡಲಲಿ;
ಹೊಂಗನಸುಗಳ ಹೊತ್ತು ಹಾರುತಿಹ ಹಕ್ಕಿಗಳ
ಕೊರಳಿಂದ ಬಿರಿಯುತಿದೆ ಬಾನ ನೀಲಿ !



ಇತಿಹಾಸದದುರಿಂದ ಚಿನ್ನವನು ಹೊರತೆಗೆದು,
ಕಲ್ಲು ಮಣ್ಣನು ಎಸೆದು ಕಸವನುಳಿದು,
ಮತಿಯ ಮೂಸೆಯಲಿ ಪುಟವಿಟ್ಟು ಬಳಸಿದರದುವೆ
ನಿಧಿಯಾಗುವುದು ನಮಗೆ, ಬಾಳು ಹೊಳೆದು !

ನೂರಾರು ದೇವತೆಗಳಿರಲಿ ದೇಗುಲದಲ್ಲಿ,
ವಿಜ್ಞಾನ ನಮ್ಮ ಹೊಸ ಬಾಳ ಮಂತ್ರ !
ಜಳ್ಳುಗಳ ಪೊಳ್ಳುಗಳ ತೂರುವುದು, ಕಾಳುಗಳ
ಕೂಡಿಸುವುದಿನ್ನು ಮುಂದೆಮ್ಮ ಸೂತ್ರ !

ಸಕಲ ಜೀವಾವಳಿಗೆ ಲೇಸನ್ನೇ ಬಯಸುವುದು
ನಮ್ಮೆಲ್ಲರೊಂದೆ ಗುರಿ; ಸರ್ವೋದಯ !
ಮೇಲು ಕೀಳೆಂದೆಂಬ, ಗಂಡು ಹೆಣ್ಣೆಂದೆಂಬ
ಭೇದವಳಿವುದೆ ಧ್ಯೇಯ : ಅಂತ್ಯೋದಯ !

ರವಿ ಚಂದ್ರ ತಾರೆ ಹಿಮಗಿರಿ ಗಂಗೆ ಕಾವೇರಿ
ಸಾಕ್ಷಿ ನವಶತಮಾನ ಯಾನವಿದಕೆ :
ಮುಂದುಮುಂದಕೆ ಕಾಲ ಚಕ್ರ ಚಲಿಸಿ, ಅಶೋಕ
ಚಕ್ರ ಜಯಿಸಲಿ ಸರ್ವರುದ್ಧಾರಕೆ !

ಸಿ.ಪಿ.ಕೆ.
೨೨೬೫/೧೯, ೬ನೆಯ ಕ್ರಾಸ್, ವಿನಾಯಕ ನಗರ, ಮೈಸೂರು-೧೨

## ಪ್ರೀತಿ

ಅಭಿಮನ್ಯು
ಒಳ ಹೊಕ್ಕ ಚಕ್ರವ್ಯೂಹ,
ನಿಲ್ಲಲಾರದ ತಡೆದು ಹಿಡಿ
ಯಲಾಗದ ಜ್ವಾಲಾಮುಖಿ
ರಾತ್ರಿಯಿಡೀ, ಕುಳಿತು ದಿಕ್ಕು
ದಿಕ್ಕಿಗೆ ಹರಡಿ ಅರಳಿದ ಚಿಕ್ಕೆ
ಎಣಿಸುವ ಹುಚ್ಚು ಧೈರ್ಯ
ನೆಲದೊಡಲನಾವರಿಸಿ ಹರಿವ ನೀ
ರವ ನೀರ ಝರಿ,
ಬೆಂಗಾಡಿನುಸುಕನ್ನು ಹೊತ್ತ
ಓಯಾಸಿಸ್ ಜಲಕಣ
ಚಿಂತೆ ಸಂತೆಯಲಿ ನಿತ್ಯ
ಮಾರುತ್ತ ಮಾರು ಹೋದವರ
ಹೊತ್ತುಕೊಳ್ಳುವ ಸತ್ಯ
ಇದು ಬೇಕು
ಬೇಡ
ಗಳ ನದೀ ತಟಾಕದಲಿ ಅನು
ದಿನವೂ ಬೆಳೆವ ತೃಷೆ - ತೊರೆ
ಎಂದರೆ ಹೇಗೆ
ತೊರೆಯಲಿ ?

ದೇವು ಪತ್ತಾರ
ನಂ.೧೨-೮೮, ಗುತ್ತಿಪೇಟ, ಶಹಪುರ, ಗುಲ್ಬರ್ಗ ಜಿಲ್ಲೆ -೫೮೫ ೨೨೩



## ನನಗೆ ಬೇರೆ ಚಿಂತೆಗಳೂ ಇವೆ

ನಿನ್ನ ಚಿಂತೆಯಲ್ಲದೆ ನನಗೆ
ಬೇರೆ ಚಿಂತೆಗಳೂ ಇವೆ !
ಆ ಚಿಂತೆಗಳಿಂದ ನನಗೆ
ಒಂದು ಕ್ಷಣವೂ ಮುಕ್ತಿಯಿಲ್ಲ !

ಈ ಎತ್ತರದ ಭವ್ಯವಾಡೆಗಳ
ಕೆಳಗೆ ಪ್ರತಿಯೊಂದು ಹೆಜ್ಜೆಗೂ
ಹೊಟ್ಟೆಗೆ ಹಿಟ್ಟು ಕಾಣದ ದೀನರಿದ್ದಾರೆ !
ಈ ಕಾರಖಾನೆಗಳಲ್ಲಿ ಕಬ್ಬಿಣದ
ಸಪ್ಪಳ-ಕೋಲಾಹಲ-ಕುಲುಮೆ
ಅದರೊಂದಿಗೆ ಒಂದಾಗಿ ದುಡಿವ
ಲಕ್ಷ-ಲಕ್ಷ ಕಾರ್ಮಿಕರಿದ್ದಾರೆ !

ಓಣಿ-ಓಣಿಗಳಲ್ಲಿ ಮಾರಲ್ಪಡುವ
ಈ ಯೌವ್ವನದ ಮುಖಗಳು
ಚೆಲುವಾದ ಕಣ್ಣುಗಳಲ್ಲಿ
ಹಬ್ಬಿರುವ ಈ ದುಃಖ



ಬೆಂಕಿ ಉಗುಳುವ ವಾತಾವರಣ
ಅಲ್ಲಿ ಜೀವಿಸಿರುವ
ನನ್ನ ಮಾತೃಭೂಮಿಯ ಅಸಂಖ್ಯಾತ
ದೀನರು ದರಿದ್ರರು ಶೋಷಿತರಿದ್ದಾರೆ !

ಅದೇ ಅರಳುತ್ತಿರುವ ನವ ಯೌವ್ವನವ
ಎಲ್ಲಲ್ಲೂ ಇಲ್ಲಿ ಕೊಳ್ಳಲಾಗುತ್ತಿದೆ !

ಗೆಳತಿ, ಈ ದುಃಖವೇ ಜೇಕಾದಷ್ಟಿದೆ ನನಗೆ !
ನೀನು ಚಿಂತೆಯಿಂದ ಇದ್ದು ನನಗೆ
ಇನ್ನಿಷ್ಟು ದುಃಖ ನೀಡದಿರು ಸಖಿ;

ನನಗೆ ಬೇರೆ ಚಿಂತೆಗಳೂ ಇವೆ !

ಮೂಲ ಉರ್ದು : ಸಾಹಿರ್ ಲುಧಿಯಾನ್ವಿ
ಕನ್ನಡ ರೂಪ : ಡಾ॥ ಪಂಚಾಕ್ಷರಿ ಹಿರೇಮಠ

# ದೇವರ ಹೆಸರಿನಲ್ಲಿ

ಲೇಖಕ : ಡೇವಿಡ್ ಯಾಲಪ್
ಪ್ರಕಾಶಕ : ಜೊನಾಥನ್ ಕೇಪ್, ಲಂಡನ್, ೧೯೮೪
ಪುಟಗಳು : ೩೩೪ ಚಿತ್ರಗಳು : ೬೬

ಭಾರತಕ್ಕೆ ಡಿಸೆಂಬರ್ ೧೯೬೪ರಲ್ಲಿ ಭೇಟಿ ಕೊಟ್ಟ ಪೋಪ್ ಪಾಲ್ IV ಅವರಿಗೂ, ಈಚೆಗೆ ನವೆಂಬರ್ ೧೯೯೯ರಲ್ಲಿ ಬಂದಿದ್ದ ಪೋಪ್ ಜಾನ್ ಪಾಲ್ II ಅವರಿಗೂ ಮಧ್ಯೆ ಒಬ್ಬ ವಿಶಿಷ್ಟ ವ್ಯಕ್ತಿ ಪೋಪರಾಗಿದ್ದರು. ಅವರು ಆ ಪಟ್ಟಣದಲ್ಲಿ ಇದ್ದದ್ದು ಮೂವತ್ತು ಮೂರು ದಿನಗಳು ಮಾತ್ರ. ಹಿಂದಿನ ಸಾವಿರದ ಏಳು ನೂರು ವರ್ಷಗಳ ಕಾಲದಲ್ಲಿ ಇಷ್ಟು ಅತ್ಯಲ್ಪ ಕಾಲ ಪಟ್ಟದಲ್ಲಿದ್ದ ಪೋಪನಾಗಿದ್ದುದಷ್ಟಕ್ಕೆ ಇವರ ವಿಶಿಷ್ಟತೆ ಸೀಮಿತವಾಗಿಲ್ಲ. ಅವರು ಕೆಲವು ಶತಮಾನಗಳಲ್ಲಿನ ಎಲ್ಲಾ ಪೋಪರುಗಳಿಂದ ಬಹಳ ಭಿನ್ನ ಮನೋಧರ್ಮದವರಾಗಿದ್ದರು. ಈ ಅತಿ ಭಿನ್ನತೆಯೇ ಅವರ ಅಸಹಜ ಮರಣಕ್ಕೆ ಕಾರಣ ವಾಯಿತೇನೊ ಎನ್ನುವ ಸಂದೇಹ ಸಹಜವಾದುದು. ಈ ಪೋಪ್ ಜಾನ್ ಪಾಲ್ I ಅವರ ಸಾವಿನ ಬಗ್ಗೆ ಶೋಧನೆ ಮಾಡಿರೆಂದು ಅನೇಕ ಗಣ್ಯರು ಡೇವಿಡ್ ಯಾಲಪ್ ಅವರನ್ನು ಕೇಳಿಕೊಂಡಾಗ ಈ ಪುಸ್ತಕ ಹುಟ್ಟಿತು.

ಮೂರು ವರ್ಷಗಳ ನಿರಂತರ ವಿಚಾರಣೆ, ವಿಶ್ಲೇಷಣೆಗಳ ಫಲವೇ ಈ ಪುಸ್ತಕ. ಇದರಲ್ಲಿ ಅನೇಕ ಪುರಾವೆಗಳ ಶೃಂಖಲೆಗಳೇ ತುಂಬಿವೆ. ಆದರೂ ಅನೇಕ ವಿಷಯಗಳನ್ನು ಗುಟ್ಟಾಗಿ ತಿಳಿಸಿಕೊಟ್ಟವರ ಸಂರಕ್ಷಣೆಗಾಗಿ, ಡೇವಿಡ್ ಮಧ್ಯೆ ಮಧ್ಯೆ ಕಥಾರೂಪವನ್ನು ಉಪಯೋಗಿಸಿದ್ದಾರೆ. ಆದರೂ ತಮ್ಮ ಅಂತಿಮ ನಿರ್ಣಯದ ಬಗ್ಗೆ ಅವರಿಗೆ ಯಾವ ಸಂದೇಹವೂ ಇಲ್ಲ. ಅವರದೇ ಮಾತುಗಳಿವು : 'ಈ ಪುಸ್ತಕ ಕೋಟ್ಯಾಂತರ ಕ್ಯಾಥೋಲಿಕರ ಶ್ರದ್ಧೆಯ ಮೇಲೆ ಒಂದು ಹಲ್ಲೆಯಲ್ಲ. ಅನೇಕರು ಏಸುಕ್ರಿಸ್ತನ ಮೂಲ ಸಂದೇಶಗಳನ್ನು ಕೊಳಚೆ ತುಂಬಿದ ಮಾರುಕಟ್ಟೆಯವರೆಗೆ ಎಳೆದು ತರುತ್ತಾರೆ. ಇಂತಹ ದುಷ್ಟ ಪ್ರಯತ್ನಗಳಲ್ಲಿ ಒಂದರ ಒಳಸಂಚಿನ ಕತೆಯೇ ಈ ಪುಸ್ತಕ.'

ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಯೊಡ್ಡುವ ಏಸುಕ್ರಿಸ್ತ ಅವನ ಜೀವನದಲ್ಲಿ ಕೈಗೆ ಚಾವಟಿ ತೆಗೆದುಕೊಂಡು ಶಿಕ್ಷಿಸಲು ಹೋಗಿದ್ದು ಒಂದೇ ಬಾರಿ, ಒಂದೇ ಗುಂಪಿನವರನ್ನು; ದೇವಾಲಯಗಳ ಸುತ್ತಮುತ್ತ ಸೇರಿಕೊಂಡು, ಸಾಲ ಕೊಟ್ಟು ಪ್ರಾಣಗಳನ್ನೇ ತೆಗೆದುಕೊಳ್ಳುವ ದಲ್ಲಾಳಿಗಳನ್ನು. ಆದರೆ ೧೯೭೦ರ ಕಾಲಕ್ಕೆ ರೋಮ್ ನಗರದಲ್ಲಿನ ವ್ಯಾಟಿಕನ್ ಬ್ಯಾಂಕೊಂದರ ಬಂಡವಾಳವೇ ೨,೦೦೦ ಕೋಟಿ ರೂಪಾಯಿಗಳು. ಆಗ್ಗೆ ವ್ಯಾಟಿಕನ್‌ನ ಪೂರ್ಣ ಆಸ್ತಿ ೫೦,೦೦೦ ಕೋಟಿ ರೂಪಾಯಿಗಳಷ್ಟನ್ನು ಮೀರಿತ್ತು. ಕೈಗಾರಿಕೋದ್ಯಮಗಳಂತಹುದೇನೂ ಇಲ್ಲದ ಈ ಮಹಾ ಧನಕೂಪಗಳ ಪುಟ್ಟ ದೇಶ ಪೋಪನ ಸಂಸ್ಥಾನವೆನಿಸಿಕೊಂಡಿತ್ತು. ಇದರ ವಿಸ್ತೀರ್ಣ ಕೇವಲ ೧೧೦ ಎಕರೆಗಳಷ್ಟು. ಜನಸಂಖ್ಯೆ ಒಂದು ಸಾವಿರದಷ್ಟು; ರೋಮ್ ನಗರದ ಒಂದು ದೊಡ್ಡ ಬಡಾವಣೆಯೆನ್ನಿಸಿಕೊಳ್ಳುವುದಕ್ಕೂ ಕಡಿಮೆ.

ವ್ಯಾಟಿಕನ್ನಿಗೆ ಮೊಟ್ಟಮೊದಲು ಸಿಕ್ಕ ಮಹದೈಶ್ವರ್ಯ ರೋಮನ್ ಚಕ್ರವರ್ತಿ ಕಾನ್‌ಸ್ಟಂಟೈನ್ ಕ್ರಿಸ್ತಶಕ ೩೦೦ರಲ್ಲಿ ಕೊಟ್ಟದ್ದು. ನಂತರದ ಮಹಾದಾನಿಗಳು ಬೆನಿಟೊ ಮುಸೋಲಿನಿ ಮತ್ತು ಅಡಾಲ್ಫ್ ಹಿಟ್ಲರ್. ಮೊದಲ ದಾನಿಗಿಂತ ಇವರಿಬ್ಬರೆಷ್ಟು ಪಟ್ಟು ಹೆಚ್ಚು ಘಾತಕರಾಗಿದ್ದರೋ ಅಷ್ಟೇ ಪಟ್ಟು ಹೆಚ್ಚು ದತ್ತಿಗಳನ್ನು ಕೊಟ್ಟರು. ಮುಸೋಲಿನಿಯಿಂದ ಪಡೆದದ್ದು ಸುಮಾರು ೨೦೦೦ ಕೋಟಿ ರೂಪಾಯಿಗಳಷ್ಟು ಸರ್ಕಾರಿ ಬಾಂಡುಗಳು. ಹಿಟ್ಲರ್‌ನಿಂದ ದಕ್ಕಿಸಿಕೊಂಡದ್ದು ಜರ್ಮನಿಯ ಕ್ಯಾಥೊಲಿಕ್ ಜನಗಳ ಮೇಲೆ ಪ್ರತ್ಯೇಕವಾಗಿ ಹೇರಿದ್ದ ಚರ್ಚ್ ತೆರಿಗೆಯ ಅಪಾರ ವಾರ್ಷಿಕ ವರಮಾನ. ವ್ಯಾಟಿಕನ್ ಈ 'ದಾನ'ಗಳಿಗೆ ಬದಲಾಗಿ ಮಾಡಬೇಕಾಗಿದ್ದುದು ಇಷ್ಟೆ: ಫ್ಯಾಸಿಸಂ, ನಾಜಿಸಂಗಳತ್ತ ಕುರುಡಾಗಿರು ವುದು; ಅಬಿಸೀನಿಯ, ಫ್ರಾನ್ಸ್, ಪೋಲೆಂಡುಗಳ ಮೇಲಿನ ಆಕ್ರಮಣಗಳಲ್ಲಿ ಜನಗಳೆಲ್ಲರ, ಕಡೆಗೆ ಕ್ರಿಶ್ಚಿಯನ್ನರ, ಆರ್ತಧ್ವನಿಗೂ ಕಿವುಡಾಗಿರುವುದು; ಯಹೂದ್ಯರ ನರಮೇಧ ನಡೆಯುತ್ತಿದ್ದಾಗಲೂ, ಇಡೀ ಜಗತ್ತೆ ಅಳುತ್ತಿದ್ದಾಗಲೂ, ತಾವು ಮೂಕರಾಗಿರುವುದು. ಕರಾರನ್ನು ವ್ಯಾಟಿಕನ್ ಶುದ್ಧಾಂಗವಾಗಿ ಪರಿಪಾಲಿಸಿತು !

ಹೀಗೆ ದೋಚಿದ ಧನರಾಶಿಯ ನಿರ್ವಹಣೆಗೆ ಒಂದು ಹೊಸ ಇಲಾಖೆ ಸ್ಥಾಪಿತವಾಯಿತು. ಇದಕ್ಕೆ ವ್ಯಾಟಿಕನ್ ಬ್ಯಾಂಕು ಎಂದೇ ಹೆಸರು. ಈ ಬ್ಯಾಂಕಿಗೆ ಎಲ್ಲಾ ಬ್ಯಾಂಕುಗಳ ಅಧಿಕಾರಗಳೂ ಇವೆ. ಆದರೆ ಅವುಗಳ ಯಾವ ಶಿಸ್ತು ಸಂಯಮಗಳೂ ಇಲ್ಲ. ಎಲ್ಲಾ ಕಾರ್ಯಗಳೂ ಪೋಪರಿಗೆ ತಿಳಿಸದೆಯೇ ನಡೆದರೂ, ಅವರ ಹೆಸರಿನಲ್ಲಿ ನಡೆಯುತ್ತಿದ್ದರಿಂದ ಯಾರೂ ಪ್ರಶ್ನಿಸುವ ಪಾಪ ಮಾಡುತ್ತಿರಲಿಲ್ಲ. ಇಂತಹ ಬ್ಯಾಂಕು ೧೯೫೮ರಿಂದ ೧೯೬೮ರವರೆಗೆ 'ಗೊರಿಲ್ಲ' ಎನ್ನುವ ಅನ್ವರ್ಥನಾಮದ ಬಿಷಪ್ ಮಾರ್ಸಿಂಕಸ್ ಮತ್ತು 'ಷಾರ್ಕ್' ಎನ್ನುವ ಅನ್ವರ್ಥನಾಮದ ಸಿಂಡೋನ ಇವರುಗಳ ವಶವಾಯಿತು. ಮಾರ್ಸಿಂಕಸ್ ಚಿಕಾಗೋದ ಕುಖ್ಯಾತ ದರೋಡೆ ಗ್ಯಾಂಗಿನ ಮುಖಂಡ ಅಲ್ ಕೆಪನ್‌ನ ಪಾಳೆಯದಲ್ಲಿ ಪಳಗಿ ಬಂದವನು. ಸಿಂಡೋನ ಅಂತರರಾಷ್ಟ್ರೀಯ ಕಳ್ಳ ಷೇರು ವ್ಯಾಪಾರ, ಮಾದಕವಸ್ತುಗಳ ವಿತರಣೆ, ಮಾಫಿಯ ಮತ್ತಿತರ ಗ್ಯಾಂಗುಗಳಿಂದ ಸುಲಿಗೆ, ಇಂತಹ ಚಟುವಟಿಕೆಗಳಲ್ಲಿ ನುರಿತವನು. ಸಿಂಡೋನ, ತನ್ನ ಪೋಷಣೆಯಲ್ಲಿದ್ದ ಅಂತರರಾಷ್ಟ್ರೀಯ ಬ್ಯಾಂಕ್ ಕಲೆಯ ಚತುರ ರಾಬರ್ಟೊ ಕಾಲ್ವಿಯನ್ನು, ತನ್ನ ಹತೋಟಿಯಲ್ಲಿದ್ದ ಅಂಬ್ರೊಸಿಯಾ ಬ್ಯಾಂಕ್‌ನ ಮುಖ್ಯಸ್ಥನನ್ನಾಗಿ ನೇಮಿಸಿಕೊಂಡ; ಈ ಕಳ್ಳಸಂತೆಯ ಉದ್ಯಮವನ್ನು ಅವನಿಗೆ ವಹಿಸಿಕೊಟ್ಟ. ಈ ಒಳ ಸಂಚುಕಾರರ ಗುಂಪಿನಲ್ಲಿ ಎಲ್ಲರಿಗಿಂತ ಹೆಚ್ಚು ದುಶ್ಶಕ್ತಿ ಇಟ್ಟುಕೊಂಡಿದ್ದವನು ಲಿಸಿಯೊ ಗೆಲ್ಲಿ. ಇವನು ಹಲವು ದೇಶಗಳ ಸರ್ಕಾರಗಳ ಮರ್ಮಸ್ಥಾನಗಳಲ್ಲಿನ ಅಧಿಕಾರಿಗಳನ್ನು ತನ್ನ ವಶದಲ್ಲಿಟ್ಟುಕೊಂಡಿದ್ದ. ವ್ಯಾಟಿಕನ್‌ನಲ್ಲೂ ಬಿಷಪ್, ಕಾರ್ಡಿನಲ್ ಮತ್ತು ಅನೇಕ ಧರ್ಮಾಧಿಕಾರಿಗಳನ್ನು ಈ ರಹಸ್ಯ ಮಂಡಲಿಯಲ್ಲಿನ ತನ್ನದೇ ಉಪಶಾಖೆ ಪಿ. ೨ ತಂಡಕ್ಕೆ ಸೇರಿಸಿಕೊಂಡು, ಗುಟ್ಟುಗುಟ್ಟಾದ ಶಕ್ತಿನೆಲೆಗಳನ್ನು ಸ್ಥಾಪಿಸಿಕೊಂಡಿದ್ದ. ಕಡೆಗೆ, ಪೋಪರಿಗೆ ಅತಿ ನಿಕಟವರ್ತಿಯಾಗಿದ್ದ ಗೃಹಮಂತ್ರಿ ಕಾರ್ಡಿನಲ್ ವಿಲಾಟ್ ಸಹ ಈ ಮಂಡಲಿಯ ಸದಸ್ಯನಾಗಿದ್ದನೆಂದು ಪತ್ರಿಕೆಗಳಲ್ಲಿ ವರದಿಯಾಗುತ್ತಲೇ ಇತ್ತು.

ಪೋಪ್ ಪಾಲ್ IV ೧೯೭೮ರಲ್ಲಿ ನಿಧನರಾದಾಗ, ಚರ್ಚಿನ ಮೂಲ ನೀತಿ ನಿಯಮಗಳಿಗೆ ವಿರೋಧವಾಗಿ ನಡೆಯುತ್ತಿದ್ದ ಈ ಅಕ್ರಮ ವ್ಯವಹಾರಗಳಿಗೆ ಒಂದು ಅಲ್ಪ ವಿರಾಮ ಉಂಟಾಯಿತು. ತಮಗೆ ಎಂದಿಗೂ ಅಡ್ಡ ಬರಲಾರನೆಂಬ ಭರವಸೆಯ ಕಾರ್ಡಿನಲ್ ಒಬ್ಬನನ್ನು ಪೋಪ್ ಪಟ್ಟಕ್ಕೆ ತರುವ ಹೊಸ ಪಿತೂರಿ ಪ್ರಾರಂಭವಾಯಿತು. ಯಾರೂ ಹೆಚ್ಚು ಕಂಡು ಕೇಳಿಲ್ಲದ, ಮಿಲಾನ್‌ನಗರದ ಆರ್ಚ್ ಬಿಷಪ್ ಆಗಿದ್ದ ಅಲ್‌ಬೀನೊ ಲೂಸಿಯಾನಿ ಆಯ್ಕೆಯಾಗಿ ಬಂದುಬಿಟ್ಟರು. ಅವರು ೧೯೭೮ನೇ ಆಗಸ್ಟ್ ೨೬ರಂದು ಪೋಪ್ ಜಾನ್ ಪಾಲ್ ಎಂಬ ನೂತನ ಹೆಸರನ್ನು ಧರಿಸಿಕೊಂಡು ಪಟ್ಟಕ್ಕೇರಿದರು.

ಈ ನೂತನ ಪೋಪರ ದೃಢ ಮನಸ್ಸು, ಸ್ವಂತ ವ್ಯಕ್ತಿತ್ವ, ಚರ್ಚಿನ ಆಡಂಬರಗಳಿಗಿಂತ ಏಸುಕ್ರಿಸ್ತನ ಮಾನವೀಯತೆಯ ಮೇಲೆಯೆ ಕೇಂದ್ರಿತವಾಗಿದ್ದ ವಿಶ್ವಾಸ, ಮುಖದಲ್ಲಿ ಚಿರನಗೆ, ಕಾರ್ಯದಕ್ಷತೆ, ಇವೆಲ್ಲ ಗುಣಗಳಿಂದ ಅವರು ಬಹುಬೇಗ ಜನಪ್ರಿಯರಾಗತೊಡಗಿದರು. ಸಂಚುಕಾರರ ದ್ವೇಷ, ಭಯಗಳು ಬೆಳೆಯಲಾರಂಭಿಸಿದವು. ಜಾನ್ ಪಾಲ್ ಬ್ಯಾಂಕಿನ ವಹಿವಾಟುಗಳ ಬಗ್ಗೆ ವಿಚಾರ ಸಂಗ್ರಹಣೆ ಮಾಡತೊಡಗಿದರು. ಹಿಂದಿನ ಪೋಪರೆಲ್ಲರ ಸಂತಾನ ನಿಯಂತ್ರಣ ವಿರೋಧ ನೀತಿಯನ್ನು ತೊರೆಯುವ ಆಶೆ ತೋರಿದರು. ನಿಷೇಧಿತ ಫ್ರಿ ಮೇಸನ್ರಿಯ ಸದಸ್ಯರ ಮೇಲಿನ ಪತ್ರಿಕಾ ವರದಿಗಳನ್ನು ಸಂಗ್ರಹಿಸಿಡಲು ಆಪ್ತ ಸಚಿವನಿಗೆ ಹೇಳಿದಾಗ ಸಂಬಂಧಪಟ್ಟವರೆಲ್ಲ ಕಂಪಿಸತೊಡಗಿದರು. ಮಾರ್ಸಿಂಕಸ್ ಮತ್ತು ವಿಲಾಟ್‌ರ ಉಳಿವಿಗಾಗಿ ಮಸಲತ್ತು ಘನವಾಗಿರಬೇಕು.

ಸಂಚುಕಾರರ ಜೊತೆಗೆ ಚಿಕಾಗೋದ ಕಾರ್ಡಿನಲ್ ಕೋಡಿಯೂ ತನ್ನ ಉಚ್ಚಾಟನೆಯ ದಿನಗಳನ್ನೆಣಿಸಲು ಆರಂಭಿಸಿದ. ಅಲ್ಲಿಯ ಐಶ್ವರ್ಯಭರಿತ ಮಠಗಳ ಒಕ್ಕೂಟಕ್ಕೆ ಇವನು ಸರ್ವಾಧಿಕಾರಿಯಾಗಿದ್ದ. ಚರ್ಚಿನ ಹಣವನ್ನು ಸ್ವೇಚ್ಛೆಯಿಂದ ಷೇರು ವ್ಯಾಪಾರದ ಜೂಜಾಡಿ ಕಳೆಯುತ್ತಿದ್ದ. ಕಪ್ಪು ಜನಗಳನ್ನು ಕ್ರಿಶ್ಚಿಯನ್ನರೆಂದು ಪರಿಗಣಿಸದೆ ಅವರ ಮಠ, ಶಾಲೆ, ಸಂಸ್ಥೆಗಳನ್ನು ಮುಚ್ಚಿಸಿಬಿಟ್ಟಿದ್ದ. ಈ ಹೊತ್ತಿಗಾಗಲೆ ಸಿಂಡೋನ ಇಟಲಿ ಸರ್ಕಾರದಿಂದ ತನ್ನ ದುರ್ವ್ಯವಹಾರಗಳ ವಿಚಾರಣೆಗಳನ್ನು ತಪ್ಪಿಸಿಕೊಳ್ಳಲು ಅನೇಕ ಕೊಲೆಗಳನ್ನು ಮಾಡಿಸಿಯೂ ಸಫಲನಾಗದೆ ಅಮೆರಿಕಾಗೆ ಓಡಿಹೋಗಿದ್ದ. ಅಲ್ಲಿಯೂ ಫ್ರಾಂಕ್ಲಿನ್ ನ್ಯಾಷನಲ್ ಬ್ಯಾಂಕನ್ನು ಮುಳುಗಿಸಿದನೆಂಬ

ಆರೋಪವನ್ನು ಎದುರಿಸುತ್ತಿದ್ದ. ವ್ಯಾಟಿಕನ್ನಿನಲ್ಲಿ ಬೆಂಬಲ ಕುಸಿದರೆ ಅವನಿಗೆ ಜೈಲುವಾಸ ಖಚಿತವಾಗುತ್ತಿತ್ತು. ಪಿ-೨ ತಂಡದ ಗೆಲ್ಲಿಗಂತೂ ಉಳಿಗಾಲವಿರಲಿಲ್ಲ. ಇಂತಹ ಗಂಭೀರ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಅವರಿಗೆಲ್ಲಾ ಉಳಿದಿದ್ದ ಪರಿಹಾರವೆಂದರೆ 'ಇಟಾಲಿಯನ್ ಪರಿಹಾರ' ವೆಂದು ಕುಖ್ಯಾತವಾಗಿದ್ದ 'ನರಹತ್ಯೆ' ಒಂದೇ.

ತಮ್ಮ ಆಡಳಿತದ ಮೂವತ್ತೆರಡನೆಯ ದಿನ ಪೋಪ್ ಜಾನ್ ಪಾಲ್ ತಮ್ಮ ಗೃಹಮಂತ್ರಿ ವಿಲಾಟ್‌ರವರಿಗೆ ತಮ್ಮ ಅಂತಿಮ ಆದೇಶಗಳನ್ನು ಕೊಟ್ಟರು. ಎಲ್ಲ ಸಂಚುಕಾರರೊಡನೆ ನಿಕಟ ಸಂಪರ್ಕವಿಟ್ಟುಕೊಂಡಿದ್ದ ವಿಲಾಟ್‌ಗೆ ಈ ಕಾರ್ಯಗಳನ್ನು ನಿರ್ವಹಿಸಲು ಹೇಳಿದ್ದು ಒಂದು ವ್ಯಂಗ್ಯ. ವ್ಯಾಟಿಕನ್ ಬ್ಯಾಂಕಿನಿಂದ ಮಾರ್ಸಿಂಕಸ್ ಅನ್ನು ತೆಗೆದುಹಾಕಿ, ತಾತ್ಕಾಲಿಕವಾಗಿ ಮತ್ತೊಬ್ಬರಿಗೆ ವಹಿಸುವುದು ಒಂದು ಆದೇಶ. ಕೋಡಿಯನ್ನು ತೆಗೆದುಹಾಕಿ ವಾಷಿಂಗ್‌ಟನ್ನಿನ ಕಾರ್ಡಿನಲ್‌ಅನ್ನು ಚಿಕಾಗೋಗೆ ಕಳುಹಿಸುವುದು ಇನ್ನೊಂದು. ನಂತರ ವಿಲಾಟ್ ತನ್ನ ಅಧಿಕಾರ ಕೊಟ್ಟು ಬಿಡುವುದು. ಕಡೆಯದಾಗಿ, 'ಕ್ಯಾಥೊಲಿಕ್ ಮತ ಸಂತಾನ ನಿಯಂತ್ರಣವನ್ನು ಒಪ್ಪುತ್ತದೆ' ಎಂದು ಸಭೆಯೊಂದರಲ್ಲಿ ಘೋಷಿಸುವುದಾಗಿಯೂ ಪೋಪರು ತಿಳಿಸಿದರು.

ಮರುದಿನ ಬೆಳಗ್ಗೆ ಪೋಪರ ಕೊಠಡಿಯನ್ನು ಪ್ರವೇಶಿಸಿದ ಸಿಸ್ಟರ್ ವಿನ್‌ಸನ್ ಜಾ, ಪೋಪ್ ತನ್ನ ಹಾಸಿಗೆಯ ಮೇಲೆ ಒರಗಿ ಕುಳಿತು ಕೈಯಲ್ಲಿ ಕಾಗದಗಳನ್ನು ಹಿಡಿದುಕೊಂಡು ಮುಖ ಹಿಂಡಿರುವುದನ್ನು ನೋಡಿ, ಹೊರಗೆ ಓಡಿಬಂದು ಎಲ್ಲರಿಗೂ ತಿಳಿಸಿದಳು. ಅದೇ ಭವನದಲ್ಲಿದ್ದ ವಿಲಾಟ್ ತತ್‌ಕ್ಷಣವೇ ಪೋಪರ ಕೋಣೆಗಳಿಗೆಲ್ಲ ಬೀಗ ಹಾಕಿಸಿ, ಪೋಪರ ಸ್ವಂತ ವೈದ್ಯರನ್ನು ನಿರಾಕರಿಸಿ, ವ್ಯಾಟಿಕನ್ ವೈದ್ಯರಿಂದ ಹೃದಯಾಘಾತದಿಂದ ಪೋಪ್ ಸತ್ತರೆಂದು ಪ್ರಮಾಣಪತ್ರ ಮಾಡಿಸಿದ. ಇಂತಹ ಸಾವಿನ ನಂತರ ಮಾಡಿಸಲೇಬೇಕಾಗಿದ್ದ ಶವ ಸಂವೀಕ್ಷಣೆಯನ್ನು ತಳ್ಳಿಹಾಕಿ ಸುಗಂಧ ದ್ರವ್ಯಗಳಿಂದ ಶವರಕ್ಷಣೆಗೆ ಅಣಿ ಮಾಡಿಸಿದ. ಪೋಪರ ನರ್ಸ್, ಡಾಕ್ಟರ್, ಆಪ್ತ ಕಾರ್ಯದರ್ಶಿ ಎಲ್ಲರ ಹೇಳಿಕೆಗಳನ್ನೂ ತಳ್ಳಿಹಾಕಿ, ಹಿಂದಿನ ರಾತ್ರಿ ಪೋಪ್ ಕೇಳಿರಬಹುದಾದ ಕೆಟ್ಟ ಸುದ್ದಿಯೊಂದರಿಂದಲೋ ಅಥವಾ ಅವರು ತೆಗೆದುಕೊಳ್ಳುತ್ತಿದ್ದ ಔಷಧದ ಪ್ರಮಾಣ ಹೆಚ್ಚಿದ್ದರಿಂದಲೋ ಹೀಗಾಗಿರಬಹುದೆಂದು ವ್ಯಾಟಿಕನ್ ಬುಲೆಟಿನ್‌ಗಳನ್ನು ಹೊರಡಿಸಿದ. ಪೋಪರ ಸ್ವಂತ ಉಯಿಲು, ಕಾಗದ ಪತ್ರಗಳಾಗಲಿ, ಕಡೆಯವರೆಗೆ ಕೈಯಲ್ಲಿ ಹಿಡಿದಿದ್ದರೆನ್ನುವ ಕಾಗದದ ತುಣುಕುಗಳಾಗಲಿ ಯಾರಿಗೂ ಸಿಕ್ಕಲಿಲ್ಲ. ಪ್ರಪಂಚದ ನಾನಾ ಚರ್ಚ್‌ಗಳಿಂದ ಬಂದ ಶವ ಸಂವೀಕ್ಷಣೆಯ ಪ್ರಶ್ನೆಗಳಿಗೆ ಯಾವ ಉತ್ತರವೂ ಸಿಕ್ಕಲಿಲ್ಲ.

### ಮಾನ

*ಇದುವರೆಗೆ ಮಾನವ*
*ನಡೆದುಕೊಂಡಿದ್ದಾನೆ ಮೃಗವಾಗಿ !*
*(ಕೆಲವೊಮ್ಮೆ ಅದಕ್ಕಿಂತ ಕೀಳಾಗಿ !)*
*ಹೊಸ ಶತಮಾನ-ಸಹಸ್ರಮಾನ*
*ತರುವುದೆ ಅವನಿಗೆ ಮಾನ ?*

ಸಿ.ಪಿ.ಕೆ.
೨೨೬೫/೧೯, 'ಭಾರತಿ',
೬ನೇ ಕ್ರಾಸ್, ವಿನಾಯಕ ನಗರ,
ಮೈಸೂರು-೫೭೦ ೦೧೨

ವಿಷಪ್ರಮಾಣದಲ್ಲಿ ಡಿಜಿಟಾಲಿಸ್ ಮದ್ದನ್ನು ಕೊಟ್ಟು ಅವರನ್ನು ಕೊಂದಿರಬೇಕೆಂದು ಎಣಿಸುವುದಕ್ಕೆ ಅನೇಕ ಪ್ರಾಸಂಗಿಕ ಸಾಕ್ಷ್ಯ ಪುರಾವೆಗಳನ್ನು ಡೇವಿಡ್ ಈ ಪುಸ್ತಕದಲ್ಲಿ ಕೊಟ್ಟಿದ್ದಾರೆ.

ನಂತರ ಬಂದ ಪೋಪ್ ಜಾನ್ ಪಾಲ್ II ಹಿಂದಿನ ಪೋಪ್ ಸಂಗ್ರಹಿಸಿಟ್ಟಿದ್ದ ದಾಖಲೆಗಳಿದ್ದರೂ, ಆಪ್ತವರ್ಗದವರಲ್ಲನೇಕರು ಹಿಂದಿನವರ ಆದೇಶಗಳನ್ನು ವಿವರಿಸಿದರೂ, ಒಂದು ಕಣದಷ್ಟು ಬದಲಾಯಿಸದೆ ಪೋಪ್ ಪಾಲ್ IVರ ನೀತಿಗಳಂತೆಯೇ ಅದೇ ಅಧಿಕಾರ ಸಂಪುಟದೊಡನೆ ಆಡಳಿತವನ್ನು ಮುಂದುವರೆಸಿದರು. ಕಡೆಗೆ ಕೋಡಿಯನ್ನು ಸಹ ಓಡಿಸಲಿಲ್ಲ.

'ನನ್ನ ಮನೆ ಒಂದು ಪ್ರಾರ್ಥನಾ ಗೃಹ. ನೀವು ಇದನ್ನು ಕಳ್ಳರ ಗುಹೆಯನ್ನಾಗಿ ಮಾಡಿದ್ದೀರ' (ಮ್ಯಾತ್ಯೂ ೨೧.೧೨-೧೩) ಎಂದು ಜೀಸಸ್ ಛೇಡಿಸಿದ್ದ. ಕಳ್ಳರ ಗುಹೆಯನ್ನು ಒಂದು ಪ್ರಾರ್ಥನಾ ಗೃಹವನ್ನಾಗಿ ಪರಿವರ್ತಿಸಲು ಪ್ರಯತ್ನಿಸಿ, ವಿಫಲರಾಗಿ, ಜೀವ ತೆತ್ತವರು ಪೋಪ್ ಜಾನ್ ಪಾಲ್ I. ದೇವತಾರಾಧನೆಗೆಂದು ಹುಟ್ಟಿಕೊಂಡು ಧನಕನಕ ಸಮೃದ್ಧಿಯಿಂದ ಪ್ರಬಲವಾಗಿರುವ ಸಂಸ್ಥೆಗಳು ನಮ್ಮಲ್ಲಿವೆ. ಆದ್ದರಿಂದ ನಮಗೆ ಈ ಪುಸ್ತಕವನ್ನೋದಿ ಕಲಿಯುವುದು ಬಹಳಷ್ಟಿದೆ.

*(ಈ ಲೇಖನದಲ್ಲಿರುವ ಚರ್ಚ್, ವ್ಯಾಟಿಕನ್, ಪೋಪ್, ಕ್ರೈಸ್ತಮತ ಮುಂತಾದವುಗಳ ಮೇಲಿನ ಸಕಲ ಗುಣದೋಷ ವಿಮರ್ಶೆಗಳೂ ಟೀಕೆಗಳೂ ಮೂಲ ಗ್ರಂಥ ಕರ್ತೃವಿನವು; ಪರಿಚಯಕಾರನವಲ್ಲ.)*

ಡಾ|| ಎಂ. ಎಸ್. ಕೇಶವ ರಾವ್
೩೮೮, ವೆಂಕಟೇಶ ದಾಸ ರಸ್ತೆ, ಪದ್ಮನಾಭ ನಗರ, ಬೆಂಗಳೂರು - ೫೬೦ ೦೭೦

## ಸಾದರ ಸ್ವೀಕಾರ

**ಅಭ್ಯಾಸ (ಸಂಶೋಧನ ಪ್ರಬಂಧಗಳು)**
ವಸಂತಕುಮಾರ ಪೆರ್ಲ
**ಪುಟ : ೧೩೨ ಬೆಲೆ : ರೂ. ೬೦**
**ಸಾಹಿತ್ಯ ಸಂಘ (ರಿ)ಬದಿಯಡ್ಕ, ಕಾಸರಗೋಡು, ಕೇರಳ**

**ಬಿರುಗಾಳಿ (ಕಿರುಕಾದಂಬರಿ)** ಆರ್. ವಿ. ಭಂಡಾರಿ
**ಪುಟ : ೮೦ ಬೆಲೆ : ರೂ. ೩೦**
**ಬಂಡಾಯ ಪ್ರಕಾಶನ,** ಅರೆ ಅಂಗಡಿ,
ಹೊನ್ನಾವರ ತಾ|| ಉತ್ತರ ಕನ್ನಡ-೫೮೧ ೪೩೦

**ಕಾಂಕ್ರೀಟ್ ಕಾಡಿನ ಪುಟ್ಟ ಕಿಟಕಿ (ಲೇಖನಗಳು)**
ನರೇಂದ್ರ ರೈ ದೇರ್ಲ
**ಪುಟ : ೧೦೨ ಬೆಲೆ : ರೂ. ೫೦**
**ಸ್ನೇಹ ಪ್ರಕಾಶನ,** ದೇರ್ಲ, ಮಾಡಾವು-೫೭೪ ೩೧೮, ಪುತ್ತೂರು, ದ. ಕ.

**ಮಹಿಳೆ ಮತ್ತು ಅಗ್ನಿ (ಲೇಖನ ಸಂಗ್ರಹ)**
ನಂದಾ ಡಿ. ಎಸ್.
**ಪುಟ : ೭೨ ಬೆಲೆ : ರೂ. ೪೦**

**ವಿಕಾಸ್ ಪುಸ್ತಕ ಪ್ರಕಾಶನ,** ಬಿ.ಟಿ.ಎಂ. ಲೇಔಟ್, ಬೆಂಗಳೂರು-೫೬೦ ೦೭೬

**ಇದೂ ಪತ್ರಿಕೋದ್ಯಮ** (ಲೇಖನಗಳು)
ನರೇಂದ್ರ ರೈ ದೇರ್ಲ
**ಪುಟ : ೪೮ ಬೆಲೆ : ರೂ. ೬೦**
**ಪ್ರಭಾ ಪ್ರಕಾಶನ,** ಹಗರೆ, ಹಾಸನ

**ಜ್ಞಾನಪೀಠ ಹಾಗೂ ಪಂಪ ಪ್ರಶಸ್ತಿ ಪುರಸ್ಕೃತರು (ಪರಿಚಯ)** ಮಾನಸ
**ಪುಟ : ೧೨೪ ಬೆಲೆ : ರೂ. ೨೦**
**ತನುಮನ ಪ್ರಕಾಶನ** ೪೨, ಜಿ. ಬ್ಲಾಕ್, ಮೂರನೇ ಅಡ್ಡ ರಸ್ತೆ, ರಾಮಕೃಷ್ಣನಗರ, ಮೈಸೂರು-೫೭೦ ೦೨೩.

**ಕಣ್ಣುಗಳು (ಕಥಾ ಸಂಕಲನ)**
ಜಿ. ಕೆ. ರಮೇಶ್
**ಪುಟ : ೬೦ ಬೆಲೆ : ರೂ. ೨೫**
**ಮೊಗವೀರ ವ್ಯವಸ್ಥಾಪಕ ಮಂಡಳಿ,** ನಾನಾಬಾಯಿ ಲೇನ್, ಫೋರ್ಟ್, ಮುಂಬಯಿ - ೪೦೦ ೦೦೧.

**ಭೂಮಿಕಾ (ಕಥಾ ಸಂಕಲನ)** ಪದ್ಮಾ ಗುರುರಾಜ್
**ಪುಟ : ೧೪೦ ಬೆಲೆ : ರೂ. ೪೫**

**ಪ್ರಿಯಾ ಪ್ರಕಾಶನ,** ನಂ. ೨೮೬, ಶುಭ, ೨೬ನೇ ಕ್ರಾಸ್, ೯ನೇ ಮೈನ್, ಬನಶಂಕರಿ ೨ನೇ ಹಂತ, ಬೆಂಗಳೂರು-೭೦.

**ಇವರು ಮುಖ್ಯಮಂತ್ರಿಯಾದರೆ.... !**
**(ಆಯ್ದ ಲೇಖನಗಳು)** ಬೀchi
**ಪುಟ : ೫೨ ಬೆಲೆ : ರೂ. ೨೦**
**ಬೀchi ಬಳಗ**
೮೪, ರೆಸಿಡೆನ್ಸಿ ರಸ್ತೆ, ಬೆಂಗಳೂರು-೫೬೦ ೦೨೫

**ಇದು ಯೂನಿವರ್ಸಿಟಿ (ವಿಡಂಬನಾತ್ಮಕ ನಾಟಕ)**
ಮೂಲ:ಜಿ. ಜೆ. ಹರಿಜಿತ್ ಅನು : ಪಾರ್ವತಿ ಜಿ. ಐತಾಳ್
**ಪುಟ : ೮೨ ಬೆಲೆ : ರೂ. ೫೦**
**ಸಪ್ತಸ್ವರಾ ಪ್ರಕಾಶನ,** ೩೯೫, ೫ನೇ ಮೈನ್, ೬ನೇ ಬ್ಲಾಕ್
ಬನಶಂಕರಿ ೩ನೇ ಸ್ಟೇಜ್, ೩ನೇ ಫೇಜ್,
ಬೆಂಗಳೂರು - ೫೬೦ ೦೮೫

**ಕುಯಿಲು (ಕಥಾ ಸಂಕಲನ)** ಲಕ್ಷ್ಮಣ್
**ಪುಟ : ೮೮ ಬೆಲೆ : ರೂ. ೨೫**
**ಅಂಬೇಡ್ಕರ್ ಭಾಗ್ಯ ಪ್ರಕಾಶನ**
೧೨೮, ಅಂಚೆ ಕಚೇರಿ ರಸ್ತೆ , ಯಡಿಯೂರು ಕಾಲನಿ, ಜಯನಗರ ೭ನೇ ಹಂತ, ಬೆಂಗಳೂರು - ೫೬೦ ೦೮೨

# ಜನಪರ ಕಾಳಜಿಯ ಬರಗೂರು

*ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನ ಬರಗೂರಿನಲ್ಲಿ ಜನಿಸಿದ ಶ್ರೀ ರಾಮಚಂದ್ರಪ್ಪನವರು ಆ ಊರನ್ನು ರಾಷ್ಟ್ರದ ನಕ್ಷೆಯಲ್ಲಿ ಬೆಳಗಿಸಿದ್ದಾರೆ. ''ಅಪ್ಪಾ, ಈ ಊರಿಗೆ ನಿನ್ನ ಹೆಸರೇಕಿದೆ ?'' ಎಂದು ಮುಗ್ಧವಾಗಿ ಅವರ ಮಗ ಚಿಕ್ಕವನಿದ್ದಾಗ ಒಮ್ಮೆ ಕೇಳಿದ್ದನಂತೆ. ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಪಡೆದ ಬರಗೂರರು ಅಲ್ಲೇ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ಸಾಹಿತ್ಯ, ಸಂಸ್ಕೃತಿ, ಸಿನಿಮಾ ಹೀಗೆ ಅಂತರ್‌ಶಿಸ್ತೀಯ ಅಧ್ಯಯನಗಳಲ್ಲಿ ವಿಶೇಷ ಆಸಕ್ತಿ ಇರುವ ಶ್ರೀಯುತರು ನಮ್ಮ ಶ್ರೇಣೀಕೃತ ಸಾಮಾಜಿಕ ಒಳಸುಳಿಗಳನ್ನು ಅಭಿವ್ಯಕ್ತಿಸಿದ ಕೃತಿಗಳು, ನಿರ್ದೇಶಿಸಿದ ಚಲನಚಿತ್ರಗಳು ಹಲವು. ಅಂತೆಯೇ ಪ್ರಶಸ್ತಿಗಳೂ ಹತ್ತಾರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ವಿಶಿಷ್ಟ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದ ಕೀರ್ತಿ ಇವರದು. ನಮ್ಮ ಸಂಸ್ಕೃತಿಯ ಬೇರುಗಳನ್ನು ಗುರುತಿಸುವಲ್ಲಿ ಯೋಜನೆಗಳಡಿ ಹೊರಬಂದ ಪುಸ್ತಕಗಳು ಅತಿಮಹತ್ವದ್ದು. ಕವನ, ಸಣ್ಣಕತೆ, ಕಾದಂಬರಿ, ವಿಚಾರ-ವಿಮರ್ಶೆ, ನಾಟಕ, ಸಂಪಾದನೆ, ಹೀಗೆ ಎಲ್ಲ ಪ್ರಕಾರಗಳಲ್ಲೂ ಅಪಾರವಾದ ಕೃಷಿ ಮಾಡಿರುವ ಬರಗೂರರು ಮೂಲತಃ ಜನಪರ ಆಶಯವುಳ್ಳ ಸಜ್ಜನಿಕೆಯ ವ್ಯಕ್ತಿ. ಬಂಡಾಯ ಸಾಹಿತ್ಯ ಸಂಘಟನೆಗೆ ಚಾಲನೆಯನ್ನು ಕೊಟ್ಟು ಸಾಹಿತ್ಯ ಚಳುವಳಿಗಳಿಗೆ ಹೊಸ ಪ್ರಜಾಪ್ರಭುತ್ವವಾದಿ ಆಯಾಮವನ್ನು ಕಲ್ಪಿಸಿಕೊಟ್ಟ ಬರಗೂರರು ಹೃದಯವಂತಿಕೆಯ ಚಿಂತನಾಶೀಲರು, ಕ್ರಿಯಾಶೀಲರು. ಈಚೆಗಷ್ಟೇ ಅವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಜವಾಬ್ದಾರಿ ವಹಿಸಿಕೊಂಡು, ''ಕ್ಯಾಬಿನೆಟ್ ಸಚಿವರ'' ಸ್ಥಾನಮಾನಗಳ ಆಡಂಬರಗಳಿಗೆ ಹೊಂದುಕೊಳ್ಳದೆಯೇ, ತಮ್ಮ ಎಂದಿನ ಚೈತನ್ಯಶೀಲ ಚಟುವಟಿಕೆಗಳಲ್ಲಿ ಮಗ್ನರಾಗಿದ್ದಾರೆ. ಅವರ ನೇತೃತ್ವದಲ್ಲಿ ಪ್ರಾಧಿಕಾರವು ಮುನ್ನಡೆ ಸಾಧಿಸುತ್ತದೆಂಬುದು ಕನ್ನಡ ಜನತೆಯ ಆಕಾಂಕ್ಷೆ. ಈ ಸಂದರ್ಭದಲ್ಲಿ ''ಹೊಸತು'' ಅವರಿಗೆ ಆತ್ಮೀಯವಾದ ಅಭಿನಂದನೆಗಳನ್ನು ತಿಳಿಸುತ್ತದೆ, ಯಶಸ್ಸು ಕೋರುತ್ತದೆ. ನಮ್ಮವರೇ ಆದ ಅವರಿಗೆ ''ಹೊಸತು'' ಕೆಲವು ಪ್ರಶ್ನೆಗಳನ್ನು ಹಾಕಿ ಅವರ ಉತ್ತರ ಪಡೆದಿದೆ. ಅವನ್ನು ಓದುಗರ ಮುಂದಿಡಲು ಹರ್ಷಿಸುತ್ತೇವೆ.*

**ಹೊಸತು:** ಇಂತಹ ಪ್ರಾಧಿಕಾರದ ರಚನೆಯ ಉದ್ದೇಶವೇನು? ಬೇರೆ ಯಾವುದಾದರೂ ರಾಜ್ಯದಲ್ಲಿ ಇಂಥದು ಇದೆಯೆ?

**ಬರಗೂರು ರಾಮಚಂದ್ರಪ್ಪ:** ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಮೊದಲು 'ಕನ್ನಡ ಕಾವಲು ಸಮಿತಿ' ಎಂಬ ಹೆಸರಿನಲ್ಲಿತ್ತು. ಆಗ ಆಡಳಿತ ಭಾಷೆಯಾಗಿ ಕನ್ನಡದ ಅನುಷ್ಠಾನವನ್ನು ಕುರಿತಂತೆ ಮೇಲುಸ್ತುವಾರಿ ನೋಡಿಕೊಳ್ಳುತ್ತಾ ಅನುಷ್ಠಾನಗೊಳಿಸುವ ಒಂದೇ ಉದ್ದೇಶವಿತ್ತು. ಬಂಗಾರಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ಇದನ್ನು 'ಕನ್ನಡ ಅಭಿವೃದ್ಧಿ ಪ್ರಾಧಿಕಾರ' ಎಂದು ಹೆಸರು ಬದಲಾಯಿಸಿ ವ್ಯಾಪ್ತಿಯನ್ನು ಹೆಚ್ಚಿಸಲಾಯಿತು. ಒಂದು ಅಧಿನಿಯಮವನ್ನು ರೂಪಿಸಲಾಯಿತು. ಈಗ ಈ ಅಧಿನಿಯಮದ ಪ್ರಕಾರ, ಆಡಳಿತ ಭಾಷೆಯಾಗಿ ಕನ್ನಡದ ಅನುಷ್ಠಾನ, ಶಿಕ್ಷಣ ಮಾಧ್ಯಮವಾಗಿ ಕನ್ನಡ, ಸರೋಜಿನಿ ಮಹಿಷಿ ವರದಿಯ ಅನುಷ್ಠಾನ, ಪಠ್ಯಕ್ರಮದಲ್ಲಿ ಕನ್ನಡದ ಸ್ಥಾನಮಾನ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಕನ್ನಡ, ಅಗತ್ಯ ಪ್ರಕಟಣೆಗಳು ಹೀಗೆ ವ್ಯಾಪ್ತಿಯನ್ನು ವಿಸ್ತರಿಸಲಾಗಿದ್ದು ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕನ್ನಡಕ್ಕೆ ಸಂಬಂಧಿಸಿದ ಉನ್ನತ ಸಂಸ್ಥೆಯಾಗಿದೆ. ಬೇರೆ ರಾಜ್ಯಗಳಲ್ಲಿ 'ಪ್ರಾಧಿಕಾರ' ಎಂಬ ಹೆಸರು ಇಲ್ಲದಿದ್ದರೂ ಆಯಾ ರಾಜ್ಯ [illegible] ಅನುಷ್ಠಾನಕ್ಕಾಗಿ ವಿಭಾಗಗಳಿವೆ. ಉದಾಹರಣೆಗೆ, ಮಹಾರಾಷ್ಟ್ರದ ಮರಾಠಿ ಅಭಿವೃದ್ಧಿ ವಿಭಾಗ. ಈಗ ತಮಿಳುನಾಡಿನಲ್ಲಿ 'ತಮಿಳು ಅಭಿವೃದ್ಧಿ ಪ್ರಾಧಿಕಾರ'ವನ್ನು ಪ್ರಾರಂಭಿಸುವ ಉದ್ದೇಶವಿದೆಯೆಂದು ಕೇಳಿದ್ದೇನೆ.



**ಹೊ:** ಉದ್ದೇಶಗಳ ಪೂರೈಕೆಗೆ ಯಾವ ಕಾರ್ಯಕ್ರಮ ಹಮ್ಮಿಕೊಳ್ಳುತ್ತೀರಿ?

*ಸಂದರ್ಶನ : ಜಿ. ರಾಮಕೃಷ್ಣ*

ಬ.ರಾ : ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಅಪೇಕ್ಷೆಯಿಂದ ಯೋಜನೆಯನ್ನು ರೂಪಿಸುತ್ತಿದ್ದೇವೆ. ನಮ್ಮ ಪ್ರಾಧಿಕಾರದ ಸದಸ್ಯರೊಂದಿಗೆ ಚರ್ಚಿಸಿ ಈಗಾಗಲೇ 'ಕನ್ನಡೀಕರಣ ಕ್ರಿಯಾಯೋಜನೆ'ಯನ್ನು ರೂಪಿಸುತ್ತಿದ್ದೇನೆ. ಭಾಷಾ ಅಲ್ಪಸಂಖ್ಯಾತರು ಮತ್ತು ಧಾರ್ಮಿಕ ಅಲ್ಪಸಂಖ್ಯಾತರೊಂದಿಗೆ ಮಾತುಕತೆ ನಡೆಸಿ ಮನ ಒಲಿಸಿ ಅವರು ಕನ್ನಡವನ್ನು ಕಲಿಯುವಂತೆ ಮಾಡುವ ಮುಖ್ಯ ಕಾರ್ಯಕ್ರಮವೂ ನಮ್ಮ 'ಕನ್ನಡೀಕರಣ ಕ್ರಿಯಾ ಯೋಜನೆ'ಯಲ್ಲಿದೆ. ಗಡಿನಾಡಿನ ಕನ್ನಡಿಗರ ಸಮಸ್ಯೆಗಳನ್ನು ಪರಿಹರಿಸುವ ದಿಕ್ಕಿನಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಲಾಗುವುದು. ಕನ್ನಡ ಮಾಧ್ಯಮ ಶಾಲೆಗಳ ಸ್ಥಿತಿಗತಿ ಸುಧಾರಿಸುವ ಬಗ್ಗೆ ಸರ್ಕಾರಕ್ಕೆ ಸೂಕ್ತ ಸಲಹೆ ಸೂಚನೆ ನೀಡಿ ಕಾರ್ಯಗತ ಮಾಡಲಾಗುವುದು. ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಪರಿಸರ ನಿರ್ಮಾಣ ಮಾಡಲು ವಿಶಿಷ್ಟ ಪ್ರಯತ್ನಗಳು ನಡೆದಿವೆ. ಈ ಎಲ್ಲ ಕೆಲಸಗಳಿಗೆ ಅನೇಕ ಗಣ್ಯರ ಸಹಕಾರವನ್ನು ಕೋರಿ ತೊಡಗಿಸಿಕೊಳ್ಳುವುದು ಪ್ರಾಧಿಕಾರದ ಅಪೇಕ್ಷೆಯಾಗಿದೆ. ಕನ್ನಡ ಜನ ಮತ್ತು ಭಾಷೆಯ ಬಗ್ಗೆ ಆಸಕ್ತರಾದ ಅನೇಕರನ್ನು ಒಳಗೊಂಡು ಒಟ್ಟಾರೆ ಕನ್ನಡ ಪರಿಸರ ನಿರ್ಮಾಣಕ್ಕೆ ಪ್ರಾಮಾಣಿಕ ಪ್ರಯತ್ನ ನಡೆಸಲಾಗುವುದು.

ಇದಲ್ಲದೆ ವಿಧಾನಸೌಧದಲ್ಲಿ ಕನ್ನಡದಲ್ಲೇ ಆಡಳಿತ ನಡೆಸುವ ಅನಿವಾರ್ಯವನ್ನು ಮನವರಿಕೆ ಮಾಡಿಕೊಟ್ಟು 'ಕನ್ನಡ ಕಡ್ಡಾಯ' ಎಂಬುದನ್ನು ಅನುಸರಿಸುವಂತೆ ಮಾಡಲಾಗುವುದು. ಕನ್ನಡ ಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದವರಿಗೆ ವೃತ್ತಿ ಶಿಕ್ಷಣ, ಉನ್ನತ

ಶಿಕ್ಷಣ ಹಾಗೂ ಉದ್ಯೋಗದಲ್ಲಿ ಆದ್ಯತೆ ಕೊಡಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತಿದ್ದೇವೆ. ಎಲ್ಲ ನೇಮಕಾತಿಗಳಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರತಿನಿಧಿಯೊಬ್ಬರು ಇರುವಂತೆ ನಿಯಮ ಮಾಡಬೇಕೆಂದೂ ಸರ್ಕಾರವನ್ನು ಕೇಳುತ್ತಿದ್ದೇವೆ.

ಹೀಗೆ ಹತ್ತಾರು ಕಾರ್ಯಕ್ರಮಗಳ ಮೂಲಕ ಮೊದಲ ಹೆಜ್ಜೆ ಇಡುತ್ತಿದೆ- ನಮ್ಮ ಪ್ರಾಧಿಕಾರ.

**ಹೊ :** *ಈವರೆಗಿನ ಕಾರ್ಯಕ್ರಮಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು? ಅವು ಎಷ್ಟರಮಟ್ಟಿಗೆ ಫಲಕಾರಿಯಾಗಿವೆ?*

**ಬ.ರಾ :** ಈವರೆಗೆ ಬಂದಿರುವ ಅಧ್ಯಕ್ಷರು ಮತ್ತು ಸದಸ್ಯರು ತಂತಮ್ಮ ದೃಷ್ಟಿ ಧೋರಣೆಗಳ ಮೂಲಕ ಕೆಲವು ಒಳ್ಳೆಯ ಕೆಲಸಗಳನ್ನು ಮಾಡಿದ್ದಾರೆ. ಇಷ್ಟಾಗಿಯೂ 'ಪೋಸ್ಟ್‌ಮಾರ್ಟಂ' ಕೆಲಸದಲ್ಲಿ ನನಗೆ ಆಸಕ್ತಿಯಿಲ್ಲ. ಅವರು ಮಾಡಿರುವ ಒಳ್ಳೆಯ ಕೆಲಸಗಳನ್ನು ಮುಂದುವರೆಸುತ್ತಾ ನನ್ನ ನೆಲೆ-ನಿಲುವುಗಳಿಂದಲೂ ಕ್ರಿಯಾ ಯೋಜನೆ ರೂಪಿಸಿ ಅನುಷ್ಠಾನಗೊಳಿಸುತ್ತೇವೆ.

**ಹೊ :** *ಸಾರ್ವಜನಿಕರು ಇದರಲ್ಲಿ ಯಾವ ಕ್ಷೇತ್ರದಲ್ಲಿ ಭಾಗವಹಿಸಬಹುದು? ಅವರಿಂದ ಏನು ನಿರೀಕ್ಷಿಸುತ್ತೀರಿ?*

**ಬ.ರಾ :** ಸಾರ್ವಜನಿಕರ ಸಹಕಾರ ತುಂಬಾ ಅಗತ್ಯ. ಕೆಲವು ಸಂದರ್ಭಗಳಲ್ಲಿ ಪ್ರಾಧಿಕಾರವು ನೇರವಾಗಿ ಅವರನ್ನು ತೊಡಗಿಸಿಕೊಳ್ಳುತ್ತದೆ. ಇನ್ನು ಕೆಲವು ಸಾರಿ ನೈತಿಕ ಬೆಂಬಲ ನೀಡುತ್ತದೆ. ಅವರಿಂದ ನೈತಿಕ ಬೆಂಬಲವನ್ನು ನಿರೀಕ್ಷಿಸುತ್ತದೆ. ಪ್ರಾಧಿಕಾರಕ್ಕೆ ತನ್ನದೇ ಆದ ಚೌಕಟ್ಟಿದೆ. ಆದ್ದರಿಂದ ಸಾರ್ವಜನಿಕರ ಕನ್ನಡಪರ ಆಶಯಗಳನ್ನು ಉದ್ದೀಪಿಸುವ ಕೆಲಸವನ್ನು ಮಾಡುತ್ತಲೇ ನಾವು ನಿರ್ದಿಷ್ಟ ನೆಲೆಯಲ್ಲಿ ಕ್ರಿಯಾಶೀಲವಾಗಬೇಕಾಗುತ್ತದೆ. ಪ್ರಾಧಿಕಾರ ಮತ್ತು ಸಾರ್ವಜನಿಕರ ನಡುವೆ ಉತ್ತಮ ಸಂಬಂಧ ಇರಬೇಕಾದ ಅಗತ್ಯವನ್ನು ನಾನು ಮನಗಂಡಿದ್ದೇನೆ. ಈ ಬಗ್ಗೆ ಅನೇಕರೊಂದಿಗೆ ಚರ್ಚಿಸುತ್ತಿದ್ದೇನೆ.

**ಹೊ :** *ಸಾಹಿತ್ಯ ಅಕಾಡೆಮಿಯಲ್ಲಿ ನೀವು ಕೈಗೊಂಡ ಪ್ರಕಟಣೆಗಳು ಹೊಸ ಮಾದರಿಯವು, ಬಹಳ ಮೆಚ್ಚುಗೆ ಪಡೆದಿವೆ. ಇಲ್ಲಿ ಅಂತಹ ಯೋಜನೆ ಏನಾದರೂ ಉಂಟೆ?*

**ಬ.ರಾ :** ಸಾಹಿತ್ಯ ಅಕಾಡೆಮಿಯಲ್ಲಿ ನಾನು ಮಾಡಿದ ಕೆಲಸಗಳ ಬಗ್ಗೆ ತಾವು ಆಡಿರುವ ಒಳ್ಳೆಯ ಮಾತುಗಳಿಗೆ ನಾನು ಕೃತಜ್ಞ. ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೂ ವಿಶಿಷ್ಟ ಆಯಾಮ ಕೊಡುವ ಅಪೇಕ್ಷೆಯಿದೆ. ಈ ಕೆಲಸ ನನ್ನೊಬ್ಬನಿಂದ ಮಾತ್ರ ಆಗುತ್ತದೆಯೆಂಬ ಅಹಂಕಾರ ನನಗಿಲ್ಲ. ಅನೇಕರನ್ನು ಒಳಗೊಂಡೇ ಈ ಕೆಲಸ ಮಾಡುತ್ತೇನೆ. ಈಗ ಕನ್ನಡದ ಅನುಷ್ಠಾನಕ್ಕೆ ಪೂರಕವಾಗುವ 'ಆಕರ ಸಾಹಿತ್ಯ ಯೋಜನೆ'ಯೊಂದನ್ನು ರೂಪಿಸುತ್ತಿದ್ದು ಅದನ್ನು ತೀವ್ರವಾಗಿ ಪೂರೈಸಲಾಗುವುದು. ಆಡಳಿತ ಕೈಪಿಡಿಗಳು, ಪದಕೋಶಗಳ ಪರಿಷ್ಕರಣ, ಇಂಥ ಕೆಲಸಗಳಲ್ಲದೆ ಕನ್ನಡವನ್ನು ಒಂದು ಭಾಷೆ ಮಾತ್ರವಾಗಿ ಯಲ್ಲದೆ, ಜನಸಂಸ್ಕೃತಿಯಾಗಿ, ಮೌಲ್ಯವಾಗಿ, ಮನೋಧರ್ಮವಾಗಿ ರೂಪಿಸುವ ಕೆಲಸವನ್ನೂ ಈ 'ಆಕರ ಸಾಹಿತ್ಯ ಯೋಜನೆ'ಯು ಮಾಡಲಿದೆ. ಇದೊಂದು ವಿಶಿಷ್ಟ ಪ್ರಯೋಗವಾದೀತೆಂದು ನಂಬಿದ್ದೇನೆ.



**ಹೊ :** *ಕರ್ನಾಟಕದ ಜನರ ಮನಃಸ್ಥಿತಿಗೆ ಕಾರಣ ಏನಿರಬಹುದು?*

**ಬ.ರಾ :** ಕರ್ನಾಟಕದಲ್ಲಿ ನಡೆದ ಸಮೂಹ ಚಳವಳಿಗಳು (mass movements) ಭಾಷೆ ಸಂಸ್ಕೃತಿಯ ಆಶಯಗಳಿಗೆ ತಕ್ಕ ಆದ್ಯತೆ ನೀಡಲಿಲ್ಲ. ಇಲ್ಲಿ ನಡೆದ ಭಾಷಾ ಚಳವಳಿಗಳು ಸಾಮಾಜಿಕ ಆರ್ಥಿಕ ನೆಲೆಯ ಆಶಯಗಳೊಂದಿಗೆ ತಕ್ಕಷ್ಟು ಸಂಬಂಧ ಕಲ್ಪಿಸಿಕೊಳ್ಳಲಿಲ್ಲ. ಹೀಗಾಗಿ ಎರಡರ ನಡುವೆ ಅನಗತ್ಯ ಕಂದಕ ನಿರ್ಮಾಣವಾಗಿದೆ. ಜನರ ಮನಸ್ಸನ್ನು ಸರಿಯಾಗಿ ಸಿದ್ಧಗೊಳಿಸುವಲ್ಲಿ ಹಿನ್ನಡೆಯಾಗಿದೆ. ಕನ್ನಡದ ಬಗ್ಗೆ ಅನಗತ್ಯ ಭಾವೋದ್ರೇಕ ಇಲ್ಲವೆ ಅನಗತ್ಯ ಅನಾದರ - ಹೀಗೆ ಎರಡು ಅತಿಗಳಲ್ಲಿ ನಿಜವಾದ ಕನ್ನಡ ಕಾಳಜಿ ರಚನಾತ್ಮಕವಾಗಬೇಕಾದ ಕಾಲಘಟ್ಟದಲ್ಲಿ ನಾವಿದ್ದೇವೆ. ಜೊತೆಗೆ ಕನ್ನಡದಲ್ಲಿ ಓದಿದವರಿಗೆ ಭವಿಷ್ಯದ ಭದ್ರತೆಯಿದೆಯೆಂಬ ಭರವಸೆಯೇ ಇಲ್ಲದಿರುವಾಗ ನಾವು ಜನರನ್ನಾದರೂ ಯಾಕೆ ತೆಗಳಬೇಕು?

**ಹೊ :** *ಈಗ ತಮಿಳುನಾಡಿನಲ್ಲೂ ಶಾಲೆಯಲ್ಲಿ ಮಾಧ್ಯಮದ ಬಗ್ಗೆ ಹೊಸ ಧೋರಣೆ ಕಂಡುಬರುತ್ತಿದೆ. ಅಂತಹ ಬೆಳವಣಿಗೆಯನ್ನು ಹೇಗೆ ಅರ್ಥೈಸಬೇಕು?*

> **ನಾಯಕರು**
>
> ಆಗಿನ ನಾಯಕರು
> ಹೇಳಿದರು
> ಅದು ನಮ್ಮ ಸಂಸತ್ತು
> ಈಗಿನ ನಾಯಕರು
> ಹೇಳುತ್ತಾರೆ
> ಅದು ನಮ್ಮ ಸಂಪತ್ತು.
>
> ಎಂ. ಎಸ್. ಬದಾಮಿ
> ಟೆಲಿಫೋನ್ ಎಕ್ಸ್‌ಚೇಂಜ್ ಹಿಂಭಾಗ, ರಾಂಪುರ, ರಬಕವಿ.

**ಬ.ರಾ :** ತಮಿಳು ನಾಡಿನಲ್ಲಿ ತಮಿಳು ಕಲಿಯಲೇ ಬೇಕಾದ ಸಾಮಾಜಿಕ ಪರಿಸರ ನಿರ್ಮಾಣವಾಗಿ ಎಷ್ಟೋ ವರ್ಷಗಳಾದವು. ಆದರೆ ಹಿಂದಿನಿಂದಲೂ ಅಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿವೆ. ಇತ್ತೀಚೆಗೆ ಹೆಚ್ಚಾಗುತ್ತಿವೆ. ಜಾಗತೀಕರಣವೆಂದರೆ 'ಆಂಗ್ಲೀಕರಣ' ಎಂಬಂತೆಯೂ ಆಗುತ್ತಿದೆ. ಇದು ಆತಂಕಕಾರಿಯಾದುದು. ಬಹುಶಃ ಈ ಅಂಶವು ತಮಿಳುನಾಡಿನಲ್ಲಿ ಈಗ ಪರಿಣಾಮ ಬೀರಿರಬೇಕು. ಅಷ್ಟೊಂದು ಭಾಷಾಭಿಮಾನದ ಉದ್ರೇಕವುಳ್ಳ ತಮಿಳುನಾಡಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ತಮಿಳು ಮಾಧ್ಯಮದಲ್ಲಿ ನಡೆಸುವ ಸರ್ಕಾರದ ತೀರ್ಮಾನವನ್ನು ಪ್ರಶ್ನಿಸಿ ತಡೆಯಾಜ್ಞೆ ತರಲಾಗಿದೆಯೆಂಬ ವಿಷಯ ಇಂದಿನ ಸನ್ನಿವೇಶದ ಸಂಕೇತವಾಗಿದೆ. ಇತ್ತೀಚಿನ ಉದಾರೀಕರಣ-ಜಾಗತೀಕರಣ ಇತ್ಯಾದಿಗಳ ಪ್ರಭಾವ ಜನರ ಮನೋಧರ್ಮವನ್ನು ತಿರುಚುತ್ತಿದೆ. ಈ ಬಗ್ಗೆ ಎಲ್ಲ ಕ್ಷೇತ್ರದವರೂ ಎಚ್ಚರಗೊಳ್ಳಲೇಬೇಕು.

**ಹೊ :** *ಸಾಹಿತ್ಯ, ಸಿನಿಮಾ, ಬಂಡಾಯ ಸಂಘಟನೆ, ಮುಂತಾದುವಕ್ಕೆ ನಿಮ್ಮ ಕೊಡುಗೆ ಹೇಗೆ ಮುಂದುವರಿಯುತ್ತದೆ?*

**ಬ.ರಾ :** ಸಾಹಿತ್ಯ-ಸಿನಿಮಾಗಳ ಕೆಲಸ ಖಂಡಿತ ಕುಂಠಿತವಾಗುತ್ತದೆ. ಆದರೆ ಈ ಮೂರು ವರ್ಷದ ಅವಧಿಯಲ್ಲಿ ಕನ್ನಡದ ಕೆಲಸವನ್ನು ಸೃಜನಾತ್ಮಕ ಹಾಗೂ ಸೈದ್ಧಾಂತಿಕವಾಗಿ ಮಾಡುವ 'ಸುಖ' ನನಗೆ ಸಿಕ್ಕಿದರೆ ಸಾಕೆಂದು ನನಗೆ ನಾನೇ ಹಾರೈಸಿಕೊಳ್ಳುತ್ತಿದ್ದೇನೆ.

**ಹೊ :** *ಬೋರ್ಡುಗಳನ್ನು ಕನ್ನಡದಲ್ಲಿ ಬರೆಸಿದರೆ ಸಾಕೆ? ಮಾರುಕಟ್ಟೆಯ ವ್ಯವಹಾರಗಳಲ್ಲಿ (ಉದಾ: ಸಾರಾಸಗಟು ವ್ಯಾಪಾರ) ಯಾರು ಅಗ್ರಸ್ಥಾನದಲ್ಲಿದ್ದಾರೆ?*

**ಬ.ರಾ :** ಬೋರ್ಡುಗಳಲ್ಲಿ ಕನ್ನಡ ಬರೆಸುವುದು ಒಂದು ಸಾಂಕೇತಿಕ ಕೆಲಸ. ಇಂಥ ಎಷ್ಟೋ 'ಸಂಕೇತ'ಗಳಲ್ಲಿ ಭಾವನಾತ್ಮಕತೆಯ ಪ್ರಶ್ನೆಯೂ ಅಡಗಿರುತ್ತದೆ. ಜೊತೆಗೆ ಕರ್ನಾಟಕದಲ್ಲಿ ಕನ್ನಡ ಜನಕ್ಕೇ ಅರ್ಥವಾಗದ ಬೋರ್ಡುಗಳಿದ್ದರೆ ಅದು ಪ್ರಜಾಸತ್ತಾತ್ಮಕವಲ್ಲ. ಅಂತೆಯೇ ಬೋರ್ಡುಗಳಲ್ಲಿ ಕನ್ನಡ ಬರೆಸುವುದೇ ಪ್ರಧಾನ ಕನ್ನಡ ಕೆಲಸವೂ ಅಲ್ಲ. ಅನೇಕ ಕೆಲಸಗಳಲ್ಲಿ ಅದೂ ಒಂದು ಕೆಲಸ. ಕಟ್ಟುನಿಟ್ಟಾದ ಕಾನೂನಿನಿಂದ ಆಗಬೇಕಾದ ಕೆಲಸ. ಆದರೆ ನೀವು ಪ್ರಸ್ತಾಪಿಸಿದಂತೆ 'ಮಾರುಕಟ್ಟೆ'ಯಲ್ಲಿ ವ್ಯಾಪಾರಿಗಳು ಬಳಕೆದಾರರ ಭಾಷೆಯನ್ನೇ ಬಳಸುತ್ತಾರೆ. ಅವರಿಗೆ 'ಕನ್ನಡ' ಎನ್ನುವುದು ಬಳಕೆದಾರರ ಭಾಷೆಯಾಗಿದ್ದರೆ ಮಾತ್ರ ಮುಖ್ಯ. ಹೀಗಾಗಿ ಕನ್ನಡಿಗರು ವಿವಿಧ ಕ್ಷೇತ್ರಗಳಲ್ಲಿ ತೊಡಗಿಕೊಳ್ಳುವ ಪ್ರಕ್ರಿಯೆಯಿಂದ ಪರಿಸ್ಥಿತಿ ಸುಧಾರಿಸುತ್ತದೆ. ಇದು ಏಕಮುಖವಲ್ಲ, ಬಹುಮುಖೀ ಸಾಮಾಜಿಕ-ಆರ್ಥಿಕ ಪ್ರಕ್ರಿಯೆಯ ಭಾಗವಾಗಿ ಕನ್ನಡಕ್ಕೂ ಮಾರುಕಟ್ಟೆ ಮೌಲ್ಯ ಬರಬೇಕಾಗುತ್ತದೆ.

))

# ದಾಸ್ತೊಯೆವ್‌ಸ್ಕಿ ಮತ್ತು ಗೊಗೋಲ್ ಇವರ ಬಡಜನರ ಜಗತ್ತು

ಶ್ರೀನಿವಾಸ ವಿ. ಸುತ್ರಾವೆ

೧೮೪೨ರಲ್ಲಿ ಪ್ರಕಟವಾದ ಗೊಗೋಲನ ಕಥೆ "The Cloak" (ಮೇಲಂಗಿ) ಒಂದು ಹೊಸ, ನಿಜವಾದ ರಷ್ಯನ್ ಶೈಲಿಯ ಮತ್ತು 'ರಿಯಲಿಸ್ಟಿಕ್' ಪದ್ಧತಿಯ ದಿಕ್ಕಿನಲ್ಲಿ ನಡೆದ ಪ್ರಥಮ ಪ್ರಯತ್ನವೆನ್ನಬಹುದು. ಪ್ರೀತಿ ಮತ್ತು ಅನುಕಂಪ, ಮನುಕುಲದ ಕಲ್ಯಾಣ, ಸಮತಾವಾದದ ಆದರ್ಶ-ಈ ಪ್ರಮುಖ ಅಂಶಗಳನ್ನು ನಾವು ರಷ್ಯನ್ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಕಾಣಬಹುದು. ಕ್ರಾಂತಿಪೂರ್ವ ರಷ್ಯಾದ ಶ್ರೇಷ್ಠ ಸಾಹಿತಿಗಳೆಲ್ಲರ ಪ್ರಮುಖ ವಿಷಯ ಇದೇ ಆಗಿತ್ತು. ಟಾಲ್‌ಸ್ಟಾಯ್, ಟರ್ಗೆನೆವ್, ಗೊಗೋಲ್, ಗಾರ್ಕಿ, ಚೆಖಾವ್ ಮತ್ತು ದಾಸ್ತೊಯೆವ್‌ಸ್ಕಿ ಬದುಕನ್ನು ಅದು ಇರುವ ಹಾಗೆ ಚಿತ್ರಿಸಿ, ಬದುಕಿನ ಬಗೆಗೆ ಗಂಭೀರ ಚಿಂತನೆಯನ್ನು ಕೂಡ ಕಲಾತ್ಮಕ ರೀತಿಯಲ್ಲಿ ಹೆಣೆಯುವ ಲೇಖಕರು. ವ್ಯಕ್ತಿಗತ ಅಭಿವ್ಯಕ್ತಿ ಹಾಗೂ ಪ್ರತಿಭೆಗಳಿಂದಾಗಿ ಇಬ್ಬರು ಲೇಖಕರ ನಡುವೆ ಇರಲೇಬೇಕಾದಂಥ ಭಿನ್ನತೆ ಇಲ್ಲಿ ಹೆಸರಿಸಿರುವ ಎಲ್ಲ ಲೇಖಕರ ನಡುವೆ ಇದ್ದರೂ, ಮೂಲಭೂತವಾಗಿ ಇವರೆಲ್ಲರ ವಸ್ತು ಒಂದೇ: ಮನುಷ್ಯನ ಯಾತನೆ, ಅವನ ಮುಗ್ಧತೆಯ ನಾಶ ಅಥವ ಶೋಷಣೆ, ಕ್ರೂರ ರಾಜಕೀಯ ದಬ್ಬಾಳಿಕೆ, ವ್ಯವಸ್ಥೆಯ ಉಸಿರು ಕಟ್ಟಿಸುವಂಥ ವಾತಾವರಣ.

ಟಾಲ್‌ಸ್ಟಾಯ್ ವಿಷಯಗಳ ಸರಿ-ತಪ್ಪುಗಳನ್ನು ಒಳಹೊಕ್ಕು ಶೋಧಿಸುತ್ತಾನೆ. ಅವನ ಕಾಳಜಿಯೆಂದರೆ ಜನಹಿತ. ಟರ್ಗೆನೆವ್ ಕೂಡ ಟಾಲ್‌ಸ್ಟಾಯ್‌ನಂತೆ ಜನ ಹಿತದ ಸಮಸ್ಯೆಗಳನ್ನು ಎತ್ತಿಕೊಳ್ಳುತ್ತಾನೆ. ಗಾರ್ಕಿಯ ಧ್ವನಿ ಅವನ ಕಾಲದ ಬೇರೆ ಸಾಹಿತಿಗಳ ಧ್ವನಿಗಿಂತ ಭಿನ್ನವೆನಿಸುತ್ತದೆ: ಆದರೆ ಈ ಭಿನ್ನತೆ ಇರುವುದು ಸಾಮಾಜಿಕ ಅನ್ಯಾಯದ ವಿರುದ್ಧದ ಅವನ ಆಕ್ರೋಶದ ಎತ್ತರದ ಧ್ವನಿಯಲ್ಲಿ ಮಾತ್ರ. ಚೆಖಾವನ ಹೃದಯ ತುಡಿಯುವುದೂ ಮಾನವೀಯತೆ ಅಥವಾ ಮಾನವೀಯ ಕರುಣೆಯ ಬಗ್ಗೆ. ತಿಳಿ ಹಾಸ್ಯದ ಪದರದ ಹಿಂದೆ ಮನುಷ್ಯನ ಬಗ್ಗೆ ಗಂಭೀರ ಚಿಂತನೆಯನ್ನು ನಡೆಸುತ್ತವೆ ಗೊಗೋಲ್ ಹಾಗೂ ಚೆಖಾವ್‌ರ ಕೃತಿಗಳು. ಬಹುಶಃ ಈ ಲೇಖಕರೆಲ್ಲರ ಆಶಯ ಒಂದೇ ಆಗಿರುವುದರಿಂದ ದಾಸ್ತೊಯೆವ್‌ಸ್ಕಿಯು, ''ನಾವೆಲ್ಲಾ ಗೊಗೋಲನ 'ದ ಕ್ಲೋಕ್'ನ ಸಂತತಿಯವರು'' ಎಂದು ಹೇಳುತ್ತಾನೆ. ಈ ಮಾತು ಸರಿ ಅನ್ನಿಸುತ್ತೆ ಕೂಡ. ಏಕೆಂದರೆ ಗೊಗೋಲನ ಕಥೆ ಪ್ರಕಟವಾದ ಹತ್ತು ವರ್ಷದ ನಂತರ ಬಂದ ದಾಸ್ತೊಯೆವ್‌ಸ್ಕಿಯ Poor Folk (ಬಡ ಜನರು) ಕಾದಂಬರಿಯು ಒಂದು ರೀತಿಯಲ್ಲಿ ಗೊಗೋಲನ ಸಣ್ಣಕಥೆಯ [illegible] ಎನ್ನುವಂತಿದೆ. ಗೊಗೋಲನ ಕಥೆ ಒಂದು ಶ್ರೇಷ್ಠ ಕಥೆ ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಸಾಮಾನ್ಯ ಜನರ ಬಗೆಗಿನ ದಾಸ್ತೊಯೆವ್‌ಸ್ಕಿಯ ಪ್ರೀತಿ, ಉತ್ಸಾಹ, ಮತ್ತು ನರಳುತ್ತಿರುವ ಮನುಕುಲದ ಬಗೆಗಿನ ಅವನ ಅಪಾರ ಕರುಣೆ ಗೊಗೋಲನ ಅಭಿವ್ಯಕ್ತಿಯನ್ನು ಮೀರಿಸುವಂಥ ದ್ದಾಗಿದೆ. ದಾಸ್ತೊಯೆವ್‌ಸ್ಕಿ ಒಬ್ಬ ಮನಶ್ಶಾಸ್ತ್ರಜ್ಞನಂತೆ ಮನುಷ್ಯನ ಅಂತರಂಗವನ್ನು ಆಳವಾಗಿ ಹೊಕ್ಕು ನೋಡುತ್ತಾನೆ. ಅವನು ಕೊಡುವ ಹೃದಯ ಬಿರಿಯುವಂಥ ಘೋರ ದಾರಿದ್ರ್ಯದ, ಅನ್ಯಾಯದ, ಮಾನಸಿಕ ಅಸ್ವಸ್ಥತೆಯ ಚಿತ್ರಗಳು ನಮ್ಮನ್ನು ನಡುಗಿಸುತ್ತವೆ. ಆದರೆ ಅದಕ್ಕಿಂತಲೂ



ಫ್ಯೊದೋರ್ ದಾಸ್ತೊಯೆವ್‌ಸ್ಕಿ

ಮುಖ್ಯ ವಿಷಯವೆಂದರೆ ಇಂಥ ಚಿತ್ರಗಳ ಹಿಂದಿರುವ ಅವನ ಉದ್ದೇಶ : ಪ್ರೀತಿ ಮತ್ತು ಜೀವನೋತ್ಸಾಹ. ಮನುಷ್ಯನ ಅಗಣಿತ ಯಾತನೆ ದಾಸ್ತೊಯೆವ್‌ಸ್ಕಿಯ ಮುಖ್ಯ ವಿಷಯ. Poor Folk ದಾಸ್ತೊಯೆವ್‌ಸ್ಕಿಯ ಪ್ರಥಮ ಕಾದಂಬರಿ. ಇದನ್ನು ಬರೆದಾಗ ಅವನಿಗೆ ಇಪ್ಪತ್ತೈದು ವರ್ಷ ವಯಸ್ಸು. ಆದರೂ ಈ ಪ್ರಥಮ ಕಾದಂಬರಿಯಲ್ಲೇ ನಾವು ದಾಸ್ತೊಯೆವ್‌ಸ್ಕಿಯ ಅಸಾಧಾರಣ ಪ್ರತಿಭೆಯನ್ನು ಗುರುತಿಸಬಹುದು.

**ಬಡತನದ ಚಿತ್ರಣ**

ಗೊಗೋಲನ ಕಥೆ ''ದ ಕ್ಲೋಕ್''ನಲ್ಲಿ ಬರುವ ಬಡತನದ ಚಿತ್ರಣಕ್ಕೂ ದಾಸ್ತೊಯೆವ್‌ಸ್ಕಿಯ ಕಾದಂಬರಿ ''ಪೂರ್ ಫೋಕ್''ನಲ್ಲಿರುವ ಬಡತನದ ಚಿತ್ರಣಕ್ಕೂ ಯಾವ ವ್ಯತ್ಯಾಸವೂ ಇಲ್ಲ. ''ದ ಕ್ಲೋಕ್''ನ ಕಥಾವಸ್ತು ಒಬ್ಬ ಬಡ ಗುಮಾಸ್ತ ತನ್ನ ಮೇಲಂಗಿ ಹರಿದು ಚಿಂದಿಯಾಗಿರುವುದರಿಂದ ಹೊಸ ಮೇಲಂಗಿಯನ್ನು ಹೊಲಿಸಿಕೊಳ್ಳಬೇಕಾಗಿಬರುವ ಅನಿವಾರ್ಯತೆ, ಆದರೆ ದಟ್ಟ ದಾರಿದ್ರ್ಯದಿಂದಾಗಿ ಹೊಸ ಮೇಲಂಗಿಯನ್ನು ಹೊಲಿಸಿಕೊಳ್ಳಲು ಅವನು ಪಡುವ ಅತೀವ ಕಷ್ಟ. (ಹೊಸ ಮೇಲಂಗಿಯೇ ಅವನ ದುರಂತಕ್ಕೂ ಕಾರಣವಾಗುತ್ತದೆ). ದಾಸ್ತೊಯೆವ್‌ಸ್ಕಿಯ ''ಪೂರ್ ಫೋಕ್''ನ ವಸ್ತುವೂ ಬಡತನದ್ದೇ, ಆದರೆ ಅದರ ಜತೆಗೇ ಪರಸ್ಪರ ಪ್ರೀತಿಸುವ ಗಂಡು ಮತ್ತು ಹೆಣ್ಣಿನ ಕುರಿತದ್ದೂ ಆಗಿದೆ. ಈ ಕಾದಂಬರಿ ಬಡತನದ ಆಘಾತಗಳಿಗೆ ಸಿಕ್ಕಿರುವ, ಸಮಾಜದಿಂದ ತುಳಿಯಲ್ಪಟ್ಟಿರುವ ಒಬ್ಬ ಕೆಳದರ್ಜೆಯ ಗುಮಾಸ್ತನ ಸಾಮಾಜಿಕ ದುರಂತದ ಒಂದು ಯಥಾರ್ಥ ಚಿತ್ರಣವಾಗಿದೆ. ಇಲ್ಲಿನ ಬಡಜನರು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಒದ್ದಾಡುವ ದುರಂತ ಜೀವಿಗಳು.

''ದ ಕ್ಲೋಕ್'' ಮತ್ತು ''ಪೂರ್ ಫೋಕ್''ನ ನಾಯಕರ ನಡುವೆ ಅನೇಕ ವಿಷಯಗಳಲ್ಲಿ ಸಾಮ್ಯವಿದೆ. ಮೊದಲು ''ದ ಕ್ಲೋಕ್''ನ ಕಥಾನಾಯಕ ಅಕಾಕಿ ಅಕಾಕಿಯೇವಿಚ್‌ನನ್ನು ನೋಡೋಣ. ಅಕಾಕಿ ಅಕಾಕಿಯೇವಿಚ್ ಒಂದು ಕಚೇರಿಯಲ್ಲಿ ಕೆಳದರ್ಜೆಯ ಗುಮಾಸ್ತ. ಅವನದು 'ಟೈಟ್ಯುಲರ್ ಕೌನ್ಸಿಲರ್' ನ ದರ್ಜೆ. ಅವನ ಅಪ್ಪ, ತಾತ ಮತ್ತು ಅವನ ಪೂರ್ವಿಕರೆಲ್ಲರೂ ವರ್ಷಕ್ಕೆ ಎರಡು-ಮೂರು ಸಲ ತಮ್ಮ ಬೂಟುಗಳಿಗೆ ಅಟ್ಟೆ ಕಟ್ಟಿಸಿದವರು. ಗೊಗೋಲ್ ಹೇಳುತ್ತಾನೆ : ''ಅವನಿಗೆ ನಾಮಕರಣವಾದಾಗ ಅವನು ಅತ್ತ ಮತ್ತು ಮುಖ ಸೊಟ್ಟಗೆ ಮಾಡಿದ - ಮುಂದೆ ಅವನು ಟೈಟ್ಯುಲರ್ ಕೌನ್ಸಿಲರ್ ಆಗುವವನು ಎಂಬಂತೆ.'' ಅವನ ಕಚೇರಿಯಲ್ಲಿ ಡೈರೆಕ್ಟರುಗಳು ಬದಲಾಗುತ್ತಿದ್ದರೂ ಅವನು ಮಾತ್ರ ಯಾವೊತ್ತೂ ಅದೇ ಜಾಗದಲ್ಲಿ, ಅದೇ ಭಂಗಿಯಲ್ಲಿ, ಅದೇ ಕೆಲಸದಲ್ಲಿ (ಪತ್ರಗಳನ್ನು ನಕಲು ಮಾಡುವ ಕೆಲಸದಲ್ಲಿ) ಇದ್ದ. ಇಲಾಖೆಯಲ್ಲಿ ಅವನಿಗೆ ಯಾರೂ ಗೌರವ ತೋರಿಸುವುದಿಲ್ಲ. ಅಕಾಕಿ ಅಕಾಕಿಯೇವಿಚ್‌ಗೆ ಮದುವೆಯಾಗಿಲ್ಲ, ಅವನಿಗೀಗ ಸುಮಾರು ಐವತ್ತು ವರ್ಷ ವಯಸ್ಸು. ಅವನಿಗಿಂತಲೂ ಕಡಿಮೆ ವಯಸ್ಸಿನ ಅವನ ಸಹೋದ್ಯೋಗಿಗಳೆಲ್ಲರೂ ಅವನಿಗೆ ತಮಾಷೆ ಮಾಡುತ್ತಾರೆ. ಅವನು ಕೆಲಸ ಮಾಡುತ್ತಿರುವಾಗ ಅವರು ಏನೇ ಕಾಟ ಕೊಟ್ಟರೂ ಒಂದು ಸಲವಾದರೂ ಅವನು ಪತ್ರದಲ್ಲಿ ತಪ್ಪು ಮಾಡಿದ್ದಿಲ್ಲ. ತನ್ನ ಕೆಲಸವನ್ನು ಉತ್ಸಾಹದಿಂದ, ಪ್ರೀತಿಯಿಂದ ಮಾಡುತ್ತಾನೆ. ಅಕಾಕಿ ಅಕಾಕಿಯೇವಿಚ್‌ಗೆ ಯಾವ ಹವ್ಯಾಸವೂ - ಇಸ್ಪಿಟಾಟವಾಗಲೀ, ಸ್ನೇಹಿತರನ್ನು ಕಾಣಲಿಕ್ಕೆ ಹೋಗುವುದಾಗಲೀ, ಪೇಟೆಯಲ್ಲಿ ತಿರುಗಾಡಿಕೊಂಡು ಬರುವುದಾಗಲೀ- ಇಲ್ಲ.

ಮನೆಯಲ್ಲಿ ಕೂಡ ಮಲಗುವ ಮುನ್ನ ಕಚೇರಿಯಿಂದ ತಂದ ಪತ್ರಗಳನ್ನು ನಕಲು ಮಾಡುತ್ತಾ ಕೂರುತ್ತಾನೆ. ಬರುವ ನಾನ್ನೂರು ರೂಬಲ್ಲು ಸಂಬಳದಲ್ಲಿ ಹೇಗೆ ಎಲ್ಲವನ್ನೂ ನಿಭಾಯಿಸಬೇಕು ಎಂಬುದು ಅವನಿಗೆ ತಿಳಿದಿದೆ. ಆದರೆ ಅವನಂತೆ ನಾನ್ನೂರು ರೂಬಲ್ಲು ಸಂಬಳ ತೆಗೆದುಕೊಳ್ಳುವವರ ಶತ್ರುವೆಂದರೆ ಸೇಂಟ್ ಪೀಟರ್ಸ್‌ಬರ್ಗ್‌ನ ಕೊರೆಯುವ ಚಳಿ. ಅವರ ಒಂದೇ ರಕ್ಷಣೆಯೆಂದರೆ ಅವರ ತೆಳುವಾದ ಮೇಲಂಗಿಗಳು. ಅಕಾಕಿ ಅಕಾಕಿಯೇವಿಚ್‌ನ ಮೇಲಂಗಿ ಹರಿದು ಚಿಂದಿಯಾಗಿದೆ. ಅದೊಂದು ತಮಾಷೆಯ ವಸ್ತುವಾಗಿಬಿಟ್ಟಿದೆ. ಅದರ ರಿಪೇರಿ ಎಷ್ಟು ಸಲ ಆಗಿತ್ತೆಂದರೆ ಇನ್ನು ರಿಪೇರಿ ಮಾಡಲು ಏನೂ ಉಳಿದಿಲ್ಲ. ಒಮ್ಮೆ, ಇದರ ರಿಪೇರಿ ಸಾಧ್ಯವೇ ಇಲ್ಲ ಎನ್ನುತ್ತಾನೆ ದರ್ಜಿ ಪೆತ್ರೊವಿಚ್. ಇದನ್ನು ಕೇಳಿ ಅಕಾಕಿಯ ಎದೆ ಕುಗ್ಗಿಹೋಗುತ್ತದೆ. ಹೊಸ ಮೇಲಂಗಿಗೆ ಸುಮಾರು ನೂರಾ ಐವತ್ತಾಗಬಹುದು ಎನ್ನುತ್ತಾನೆ ದರ್ಜಿ. ಆದರೆ ಅಷ್ಟು ಹಣ ಎಲ್ಲಿಂದ ತರುವುದು? ಅಕಾಕಿಯ ಬಳಿ ವರ್ಷಗಳಿಂದ ಕೂಡಿಟ್ಟಿರುವ ಚಿಲ್ಲರೆ ಹಣವೆಂದರೆ ನಲವತ್ತು ರೂಬಲ್ಲುಗಳು ಮಾತ್ರ. ಒಂದು ವೇಳೆ ದರ್ಜಿಯು ಹೇಗಾದರೂ ಮಾಡಿ ಎಂಬತ್ತು ರೂಬಲ್ಲಿಗೆ ಹೊಸ ಮೇಲಂಗಿಯನ್ನು ಮಾಡಿಕೊಟ್ಟರೂ ಎಂಬತ್ತು ರೂಬಲ್ಲುಗಳನ್ನೆಲ್ಲಿಂದ ತರುವುದು? ಉಳಿದಿರುವ ಮಾರ್ಗವೆಂದರೆ ದೈನಿಕ ಅವಶ್ಯಕತೆಗಳನ್ನು ಕಡಿಮೆ ಮಾಡಬೇಕು ಅಥವಾ ಕೆಲವನ್ನು ವರ್ಜಿಸಬೇಕು. ಸಾಯಂಕಾಲದ ಟೀಯನ್ನು ಬಿಟ್ಟುಬಿಡಬೇಕು; ಮೊಂಬತ್ತಿಯನ್ನು ಉರಿಸುವುದನ್ನು ಬಿಡಬೇಕು, ಆದರೆ ಏನಾದರೂ ಕೆಲಸವಿದ್ದರೆ ತನ್ನ ಮನೆ ಮಾಲೀಕಳ ಕೋಣೆಯಲ್ಲಿ ಅವಳ ಮೊಂಬತ್ತಿಯ ಬೆಳಕಿನಲ್ಲಿ ಕೆಲಸ ಮಾಡಬೇಕು; ಬೂಟುಗಳ ಅಟ್ಟೆಗಳು ಬೇಗನೆ ಸವೆಯಬಾರದು ಎನ್ನುವ ದೃಷ್ಟಿಯಿಂದ ಕೆಟ್ಟ ರಸ್ತೆಯಲ್ಲಿ ಮೆಟ್ಟುಂಗಾಲಿನಲ್ಲಿ ನಡೆಯಬೇಕು: ಬಟ್ಟೆಗಳು ಬೇಗನೆ ಹರಿದುಹೋಗಬಾರದು ಎನ್ನುವುದಾದರೆ ಮನೆಗೆ ಬಂದ ಕೂಡಲೇ ಅವನ್ನು ತೆಗೆದು ಕೇವಲ ಹತ್ತಿಯ ಡ್ರೆಸ್ಸಿಂಗ್ ಗೌನಿನಲ್ಲಿರಬೇಕು. ಹೀಗೆ ಹಲವಾರು ತಿಂಗಳು ನಡೆದರೆ ಹಣ ಉಳಿಸಬಹುದು.......

ಇಲ್ಲಿ ನಾನು ಕಥೆಯಲ್ಲಿ ಬರುವ ಮೇಲಂಗಿಯ ಬಗ್ಗೆ ಇಷ್ಟು ವಿವರಗಳನ್ನು ಏಕೆ ಕೊಟ್ಟಿದ್ದೇನೆಂದರೆ, ಗೊಗೋಲ್ ಬಡತನವನ್ನು ಹೇಗೆ ಅತ್ಯಂತ ಸೂಕ್ಷ್ಮ ವಿವರಗಳೊಂದಿಗೆ ನಿರೂಪಿಸುತ್ತಾನೆ ಎಂದು ತೋರಿಸುವುದಕ್ಕಾಗಿ. ಅವನ ವೀಕ್ಷಣಾ ಸಾಮರ್ಥ್ಯ ಅಸಾಧಾರಣವಾದದ್ದು.

ಇನ್ನು ದಾಸ್ತೊಯೆವ್‌ಸ್ಕಿಯ ''ಪೂರ್ ಫೋಕ್''ನ ನಾಯಕನನ್ನು ನೋಡೋಣ. ಈ ಕಾದಂಬರಿಯ ನಾಯಕ–ಮಕಾರ್ ಅಲೆಕ್ಸೀಯಿವಿಚ್–ಕೂಡಾ ಒಬ್ಬ ಕೆಳದರ್ಜೆಯ ಗುಮಾಸ್ತ. ಇವನ ಕೆಲಸವೂ ಕಾಗದಗಳನ್ನು ನಕಲು ಮಾಡುವುದು. ಮಕಾರ್‌ಗೂ ಮದುವೆಯಾಗಿಲ್ಲ. ಅವನಿಗೂ ಸುಮಾರು ಐವತ್ತು ವರ್ಷ ವಯಸ್ಸು. ಗೊಗೋಲನ ಕಥಾನಾಯಕ ಮತ್ತು ದಾಸ್ತೊಯೆವ್‌ಸ್ಕಿಯ ಕಥಾನಾಯಕರಲ್ಲಿನ ಒಂದು ಪ್ರಮುಖ ವ್ಯತ್ಯಾಸವೆಂದರೆ, ಅಕಾಕಿಗೆ ಯಾವ ಹವ್ಯಾಸವೂ ಇಲ್ಲ, ಆದರೆ ಮಕಾರ್‌ಗೆ ಒಂದು ಹವ್ಯಾಸ ಉಂಟು - ಪ್ರೀತಿ ತುಂಬಿದ ಪತ್ರಗಳನ್ನು ಬರೆಯುವ ಹವ್ಯಾಸ. ಮಕಾರ್‌ನ ಬಟ್ಟೆಗಳೂ ಹಳೆಯದಾಗಿವೆ, ಹರಿದಿವೆ. ಆದರೂ ಹೊಸ ಬಟ್ಟೆಗಳನ್ನು ಕೊಳ್ಳುವುದರ ಬದಲು ಅವನಿಗೆ ತಾನು ಪ್ರೀತಿಸುವ ತನ್ನ ದೂರದ ಸಂಬಂಧಿಯಾದ ಯುವತಿ ವರ್ವ್ಹಾರಾ ಅಲೆಕ್ಸಿಯೀವ್ನಾಗೆ ಏನಾದರೂ ಉಡುಗೊರೆಗಳನ್ನು ಕೊಡಬೇಕು ಎನ್ನುವ ಆಸೆ. ಅದಕ್ಕಾಗಿ ಅವನು ಅನೇಕ ಸಲ ಸಾಲವನ್ನು ಮಾಡುತ್ತಾನೆ. ಹಾಗೆ ಮಾಡುವುದು ಬೇಡ ಎಂದು ಆ ಯುವತಿ ಹೇಳಿದರೂ ಅವನು ಅವಳ ಮಾತನ್ನು ಕೇಳುವುದಿಲ್ಲ. ಮಕಾರ್‌ಗೆ ಗೊತ್ತು - ತನಗೆ ಹೊಸ ಬಟ್ಟೆಗಳು, ಹೊಸ ಬೂಟುಗಳು ಬೇಕಾಗಿವೆಯೆಂದು. ಆದರೂ ವರ್ವ್ಹಾರಾಳ ಸಣ್ಣ ಪುಟ್ಟ ಆಸೆಗಳನ್ನು ಪೂರೈಸುವುದು, ಅವಳು ಏನೂ ಕೇಳದಿದ್ದರೂ ತಾನಾಗಿಯೇ ಆಗಾಗ್ಗೆ ಏನಾದರೂ ಉಡುಗೊರೆಗಳನ್ನು ಕಳಿಸಿಕೊಡುವುದು ಅವನಿಗೆ ಹೆಚ್ಚು ಮುಖ್ಯ ಅಥವಾ ಪ್ರಿಯವಾದ ಕೆಲಸವೆನಿಸುತ್ತದೆ.



***ನಿಕೊಲಾಯ್ ಗೊಗೋಲ್***

**ಸ್ವಾರಸ್ಯವೇನು?**

ಇಲ್ಲಿ ಒಂದು ಸ್ವಾರಸ್ಯಕರ ವಿಷಯವೆಂದರೆ ''ಪೂರ್ ಫೋಕ್''ನಲ್ಲಿ ಗೊಗೋಲನ ಕಥೆಯ ಪ್ರಸ್ತಾಪವೂ ಬರುತ್ತದೆ. ವರ್ವ್ಹಾರಾ ಒಮ್ಮೆ ಮಕಾರ್‌ಗೆ ಗೊಗೋಲನ ಕಥೆ ಇರುವ ಪುಸ್ತಕವನ್ನು ಓದಲು ಕೊಟ್ಟಿರುತ್ತಾಳೆ. ಬಡ ಗುಮಾಸ್ತನೊಬ್ಬನ ಮೇಲಂಗಿ ಮತ್ತು ಬೂಟುಗಳ ಬಗ್ಗೆ, ಆ ಗುಮಾಸ್ತನ ಹೀನ ದಾರಿದ್ರ್ಯದ ಬಗ್ಗೆ ಕಥೆಗಾರ ಬರೆದಿರುವ ರೀತಿಯ ಬಗ್ಗೆ ಮಕಾರ್ ಆಕ್ಷೇಪಿಸುತ್ತಾನೆ. ಕಥೆಗಾರನನ್ನು ದೂರುತ್ತಾ ಅವನು ವರ್ವ್ಹಾರಾಗೆ ಪತ್ರದಲ್ಲಿ ಹೀಗೆ ಕೇಳುತ್ತಾನೆ: ''ಜನರಿಗೆ ಬೇರೊಬ್ಬರ ಖಾಸಗಿ ವಿಷಯಗಳನ್ನು ಹೊಂಚಿ ನೋಡಲು ಏನು ಹಕ್ಕಿದೆ? ಒಬ್ಬನ ಹತ್ತಿರ ಯೋಗ್ಯವಾದ ನಡುವಂಗಿ ಇದೆಯೋ ಇಲ್ಲವೋ, ಒಳ ಉಡುಪುಗಳು ಇವೆಯೋ ಇಲ್ಲವೋ, ಒಂದು ಜೊತೆ ಬೂಟುಗಳು ಇವೆಯೋ ಇಲ್ಲವೋ ಮತ್ತು ಅವಕ್ಕೆ ಯೋಗ್ಯವಾಗಿ ಅಟ್ಟೆ ಕಟ್ಟಿದೆಯೋ ಇಲ್ಲವೋ ಅಂತ ಅವರ್ಯಾಕೆ ಚಿಂತಿಸಬೇಕು? ಒಬ್ಬ ಮನುಷ್ಯ ಏನು ತಿನ್ನುತ್ತಾನೆ, ಏನು ಕುಡಿಯುತ್ತಾನೆ ಅಥವಾ ಏನು ನಕಲು ಮಾಡುತ್ತಾನೆ ಅನ್ನುವುದನ್ನು ಅವರು ಯಾಕೆ ತಿಳಿಯಬೇಕು? ನನ್ನ ಬೂಟುಗಳು ಕೆಡದಂತಿಡಲು ನೆಲಗಟ್ಟಿನ ಕಾಲು ದಾರಿ ಕೆಟ್ಟದಾಗಿರುವೆಡೆ ನಾನು ಮೆಟ್ಟುಂಗಾಲಿನಲ್ಲಿ ನಡೆದರೆ ಏನಂತೆ? ತನ್ನಂತೆಯೇ ಸೃಷ್ಟಿಯಾದ ಇನ್ನೊಬ್ಬ ಮನುಷ್ಯ ಕೆಲವೊಮ್ಮೆ ಕಷ್ಟದಲ್ಲಿ ಇದ್ದಾನೆ ಮತ್ತು ಅದಕ್ಕಾಗಿ ಅವನು ಟೀ ಇಲ್ಲದೆಯೇ ಕೆಲಸ ನಡೆಸಬೇಕಾಗಿದೆ ಅಂತ ಕಥೆಗಾರ ತನ್ನ ಓದುಗರಿಗೆ ಯಾಕೆ ಹೇಳಬೇಕು? ಎಲ್ಲರಿಗೂ ಟೀ ಬೇಕೇಬೇಕು ಎಂಬಂತೆ!.... ಇಂಥ ಬರವಣಿಗೆಯಿಂದ ಏನು ಪ್ರಯೋಜನ? ಅದರ ಉಪಯೋಗವೇನು? ಓದುಗನಿಗೇನಾದರೂ ಒಂದು ಹೊಸ ಮೇಲಂಗಿಯನ್ನು ಕೊಡುತ್ತಾನೆಯೆ? ಅಥವಾ ಒಂದು ಜೊತೆ ಬೂಟುಗಳನ್ನು? ಇಲ್ಲ, ವರೆಂಕಾ, ಅವನು ಅದನ್ನು ಓದಿ ಹೆಚ್ಚು ಕೇಳುತ್ತಾನೆ, ಅಷ್ಟೆ. ಒಬ್ಬ ಮನುಷ್ಯ ತನ್ನ ಕುಂದುಕೊರತೆಗಳನ್ನು ಮುಚ್ಚಿಡಲು ತುಂಬ ಜಾಗರೂಕತೆ ವಹಿಸುತ್ತಾನೆ, ತನ್ನಷ್ಟಕ್ಕೆ ತಾನೆ ಇರಲು ಜಾಗರೂಕತೆ ವಹಿಸುತ್ತಾನೆ - ಗೊಡ್ಡು ಹರಟೆಯ ಕಾರಣಕ್ಕಾಗಿ: ಜನ ಪ್ರತಿಯೊಂದು ಸಣ್ಣ ಮಣ್ಣು ದಿಬ್ಬವನ್ನೂ ಒಂದು ಬೆಟ್ಟವನ್ನಾಗಿ ಮಾಡಿ ಬಿಡಬಹುದು - ಮತ್ತು ನಮಗೆ ಗೊತ್ತಾಗುವ ಮೊದಲೇ, ನಮ್ಮ ಇಡೀ ಪೌರ ಹಾಗೂ ಕುಟುಂಬ ಜೀವನ ಪುಸ್ತಕವೊಂದರಲ್ಲಿ ನಿರ್ಲಜ್ಜವಾಗಿ ಬಿಚ್ಚಿಡಲಾಗಿದೆ, ತಮಾಷೆ ಮಾಡಲಾಗಿದೆ ಮತ್ತು ಎಸೆದಾಡಲಾಗಿದೆ. ಅದರ ನಂತರ ಒಬ್ಬ ವ್ಯಕ್ತಿ ರಸ್ತೆಯಲ್ಲಿ ಹೇಗೆ ತಾನೆ ಮುಖ ತೋರಿಸಬಲ್ಲ? ಪ್ರತಿಯೊಂದೂ ಎಷ್ಟು ಕರಾರುವಾಕ್ಕಾಗಿ ವರ್ಣಿಸಲಾಗಿದೆಯೆಂದರೆ ನಾವು ನಡೆಯುವ ರೀತಿಯಿಂದಲೇ ಜನಕ್ಕೆ ನಮ್ಮ ಗುರುತು ಸಿಕ್ಕಿಬಿಡುತ್ತೆ.......''

ಮಕಾರ್ ಅಲೆಕ್ಸಿಯೀವಿಚ್ ಹೀಗೆ ದೂರುತ್ತಾನೆ, ನಿಜ. ಆದರೂ ದಾರಿದ್ರ್ಯದ ಬಿಸಿ ತಟ್ಟದೇ ಇರಲಾರದು ಮತ್ತು ಅದರ ಬಗ್ಗೆ ಅವನು ಯೋಚನೆ ಮಾಡದೆ ಇರಲು ಸಾಧ್ಯವಿಲ್ಲ. ಮಕಾರ್‌ಗೆ ತನ್ನ ಬಡತನ ಜನರ ತಮಾಷೆಯ ವಸ್ತುವಾಗಿಬಿಡಬಾರದು ಎಂಬ ಭಯ. ತನ್ನ ಹರಿದ ಬೂಟುಗಳನ್ನು, ಅಷ್ಟೇ ಏಕೆ, ಇನ್ನೇನು ಕಿತ್ತುಬರುತ್ತಿರುವ ಕೋಟಿನ ಗುಂಡಿಯನ್ನು ನೋಡಿ ಜನ ತನ್ನನ್ನು ತಮಾಷೆ ಮಾಡಲಿಕ್ಕಿಲ್ಲವೆ ಎಂಬ ಭಯ ಅವನಿಗಿದ್ದೇ ಇದೆ. ಆದರೆ ಅವನ ಇಚ್ಛೆ ತನ್ನ ಖಾಸಗಿ ಜೀವನ ಜನರ ಕಣ್ಣೆದುರು ಬಿಚ್ಚಿಟ್ಟ ಜೀವನವಾಗಬಾರದು ಎಂಬುದು. ಗೊಗೋಲನ ಕಥೆಯ ಬಗೆಗಿನ ಅವನ ಆಕ್ಷೇಪಣೆ ಗುಪ್ತ ಭಯವನ್ನು, ನಾಚಿಕೆಯನ್ನು ಒಳಗೆ ಅದುಮಿಡುವ ಒಂದು ವಿಫಲ ಆದರೆ ಅನಿವಾರ್ಯ ಪ್ರಯತ್ನ, ಅಷ್ಟೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಗೊಗೋಲನ ಕಥೆ ಎಂಥ ಅದ್ಭುತ ಪರಿಣಾಮ ಬೀರಬಲ್ಲದು ಎಂಬುದು. ಸ್ವತಃ ಮಕಾರ್ ಬಡತನವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಬಲ್ಲ. ವರ್ವ್ಹಾರಾಗೆ ಅವನು ಬರೆಯುವ ಒಂದು ಪತ್ರದಲ್ಲಿ ತಾನು

ವಾಸವಾಗಿರುವಂಥ ಸ್ಥಳ ಎಷ್ಟು ಕೆಟ್ಟದಾಗಿದೆ, ಆರ್ಥಿಕ ತೊಂದರೆಯಿಂದಾಗಿ ಹೇಗೆ ತಾನು ಕಡಿಮೆ ಬಾಡಿಗೆಯ ವಾಸದ ಕೋಣೆಯಲ್ಲಿರಬೇಕಾಗಿಬಂದಿದೆ ಎಂಬುದನ್ನು ತಿಳಿಸುತ್ತಾನೆ. ಬಡಜನರ ಪರಿಸ್ಥಿತಿ ಎಷ್ಟು ಶೋಚನೀಯ ಎಂಬುದನ್ನು ಒಂದುಕಡೆ ಹೀಗೆ ತಿಳಿಸುತ್ತಾನೆ: ''ನನ್ನೆದೆಯಲ್ಲಿ ಉರಿಯುವ ನೋವು. ಬಡಜನರು ಎಡವಟ್ಟು ಜನ. ನನಗನ್ನಿಸುತ್ತೆ ಅವರು ಹುಟ್ಟುವುದೇ ಆ ರೀತಿಯಲ್ಲಿ. ಇದಕ್ಕೂ ಮುಂಚೆ ಕೂಡಾ ನನಗೆ ಹೀಗನ್ನಿಸಿದೆ..... ಒಬ್ಬ ಬಡ ಮನುಷ್ಯ ಕಸಕ್ಕಿಂತ ಕಡೆ ಮತ್ತು ಯಾರಿಂದಲೂ ಗೌರವಿಸಲ್ಪಡಲಾರ .....'' ಮಕಾರ್ ವರ್‍ವಾರಾಗೆ ಹೇಳುತ್ತಾನೆ: ''.....ಒಬ್ಬ ಬಡ ಮನುಷ್ಯನು ಹುಡುಗಿಯೊಬ್ಬಳು ತನ್ನ ಬಗ್ಗೆಯೇ ಎಷ್ಟು ನಾಚಿಕೆ ಪಟ್ಟುಕೊಳ್ಳುತ್ತಾಳೋ ಅಷ್ಟೇ ತಾನೂ ನಾಚಿಕೆ ಪಟ್ಟುಕೊಳ್ಳುತ್ತಾನೆ.'' ಬಡಜನರು ಸಾಲ ಪಡೆಯಲಿಕ್ಕಾಗಿ ಯಾರ ಬಳಿಯಾದರೂ ಹೋದರೆ ಅವರಿಗೆ ಸಿಗುವುದು ತಿರಸ್ಕಾರದ ಒರಟು ಉತ್ತರ. 'ಸೆಕ್ಯೂರಿಟಿ' ಕೊಡುವ ಸ್ಥಿತಿಯಲ್ಲಿಲ್ಲ ಎಂದರೆ ಹೆಚ್ಚು ಮಾತಾಡದೆ ತೆಪ್ಪಗೆ ವಾಪಸ್ ಹೋಗಬೇಕು. ಮಕಾರ್ ಒಮ್ಮೆ ಸಾಲ ಕೇಳಲೆಂದು ಬಡ್ಡಿಯ ಮೇಲೆ ಸಾಲ ಕೊಡುವ ಗುಮಾಸ್ತನ ಬಳಿ ಹೋಗಬೇಕೆಂದಿದ್ದಾನೆ. ಅದರ ಬಗ್ಗೆ ವರ್‍ವಾರಾಗೆ ಹೀಗೆ ಬರೆಯುತ್ತಾನೆ : ''........ ದೇವರ ದಯೆಯಿಂದ ಸಾಲ ಸಿಗಲಿ. ನಮ್ಮ ಮನೆ ಮಾಲೀಕಳು ನನ್ನನ್ನು ಹೊರಕ್ಕಟ್ಟುತ್ತಿದ್ದಾಳೆ ಮತ್ತು ನನಗೆ ಊಟ ಕೊಡುವುದಿಲ್ಲ. ನನ್ನ ಬೂಟುಗಳು ಕೂಡ ಪೂರ್ತಿ ಹರಿದುಹೋಗಿವೆ ಮತ್ತು ಕೆಲವು ಗುಂಡಿಗಳು ಕಳೆದುಹೋಗಿವೆ..... ಆಮೇಲೆ ಏನೇನು ಕಳೆದುಹೋಗಿಲ್ಲ ಅಂತ ! ಅಪಮಾನ ಸ್ಥಿತಿಯ ನನ್ನ ದೇಹಾಕೃತಿಯನ್ನು ನಮ್ಮ ಮುಖ್ಯಾಧಿಕಾರಿಗಳಲ್ಲಿ ಯಾರಾದರೊಬ್ಬರು ಸರಿಯಾಗಿ ಗಮನಿಸಿದರೆ ಏನು ಮಾಡುವುದು ? ನಮ್ಮ ತೊಂದರೆಗಳಿಗೆ ಕೊನೆಯಿಲ್ಲ, ವರೆಂಕಾ, ಕೊನೆಯಿಲ್ಲ!.....'' ಹೋಗಿದ್ದ ಕಡೆ ಸಾಲ ಸಿಗದಿರಲು ಮಕಾರ್ ಮಳೆಯಲ್ಲಿ ನೆನೆದು ತನ್ನ ಕಚೇರಿಗೆ ತಡವಾಗಿ ಬರುತ್ತಾನೆ. ಅದರ ಬಗ್ಗೆ ವರ್‍ವಾರಾಗೆ ಹೀಗೆ ಬರೆಯುತ್ತಾನೆ : ''......ನಾನು ನನ್ನ ಬಟ್ಟೆಗಳನ್ನು ಬ್ರಷ್ ಮಾಡಬೇಕೆಂದಿದ್ದೇನೆ, ಆದರೆ ವಾಚ್‌ಮನ್ ಸ್ನೆಗಿರ್‌ಯೊವ್ ಅವಕಾಶ ಕೊಡಲಿಲ್ಲ. ನಾನು ಬ್ರಷ್‌ನ್ನು ಹಾಳು ಮಾಡಿಬಿಡಬಹುದು ಎಂಬ ಭಯ ಅವನಿಗೆ. ಆಮೇಲೆ ಆ ಬ್ರಷ್ ಎಷ್ಟಕ್ಕೂ ಕಚೇರಿಗೆ ಸೇರಿದ್ದು. ಹೀಗೆ, ನೋಡು ನನ್ನ ಮುದ್ದು, ಜನ ನನ್ನ ಮೈಮೇಲೇ ತಮ್ಮ ಪಾದಗಳನ್ನು ಒರೆಸಲಿಕ್ಕೆ ಸಿದ್ಧರಿದ್ದಾರೆ. ನನ್ನನ್ನು ಕೊಲ್ಲುತ್ತಿರುವುದೆಂದರೆ ಇದು, ವರೆಂಕಾ: ಹಣ ಇಲ್ಲದೇ ಇರೋದು ಅಲ್ಲ, ಆದರೆ ಈ ಸಂಕಟ, ಮುಸುನಗು, ಕುಚೋದ್ಯ ಮತ್ತು ವ್ಯಂಗ್ಯವಾಗಿ ಸೂಚಿಸುವ ಅಭಿಪ್ರಾಯಗಳು .......''.

**ಭಾವನೆಗಳ ಸಂಘರ್ಷ**

ದಾಸ್ತೊಯೆವ್‌ಸ್ಕಿಯು ತನ್ನ ಪಾತ್ರಗಳನ್ನು ಅವುಗಳ ಎಲ್ಲ ಸಂಕೀರ್ಣತೆಗಳಲ್ಲೂ ತೋರಿಸುತ್ತಾನೆ. ಸ್ವತಃ ದಾಸ್ತೊಯೆವ್‌ಸ್ಕಿಯ ವ್ಯಕ್ತಿತ್ವದಲ್ಲಿ ಅನೇಕ ವಿರೋಧಗಳಿದ್ದವು: ದೈವ ನಿಷ್ಠೆ ಮತ್ತು ನಾಸ್ತಿಕತೆ; ನರಳಾಟದ ಸ್ವೀಕಾರ ಮತ್ತು ತಿರಸ್ಕಾರ; ಮಣಿಯುವಿಕೆ ಮತ್ತು ಬಂಡಾಯ. ಈ ಸಂಮಿಶ್ರ ಭಾವನೆಗಳ ಸಂಘರ್ಷವನ್ನು ದಾಸ್ತೊಯೆವ್‌ಸ್ಕಿ ತನ್ನ ಎಲ್ಲ ಪ್ರಮುಖ ಪಾತ್ರಗಳಲ್ಲೂ ಕಾಣಿಸುತ್ತಾನೆ. ಮಕಾರ್‌ನನ್ನೇ ಪುನಃ ತೆಗೆದುಕೊಳ್ಳುವುದಾದರೆ, ಅವನು ಬಡತನವನ್ನು ಒಪ್ಪಿಯೂ ಕೊಳ್ಳುತ್ತಾನೆ ಮತ್ತು ಅದೊಂದು ಸಲ್ಲದ ಕೇಡು ಎಂದೂ ಹೇಳುತ್ತಾನೆ. ಅನ್ಯಾಯವನ್ನು ಪ್ರತಿಭಟಿಸಬೇಕು ಎನ್ನುವಷ್ಟರಲ್ಲೇ ಪ್ರತಿಭಟನೆಯು ತನ್ನ ಮತಧರ್ಮದ ವಿಷಯದಲ್ಲಿ ಯಾವ ಅಧಿಕಾರವನ್ನೂ ನಿಯಮವನ್ನೂ ಒಪ್ಪದವನ ಮುಕ್ತ ವಿಚಾರ ಆಗಿಬಿಡಬಹುದು ಎಂಬ ಭಯದಿಂದ ಸುಮ್ಮನಾಗಿಬಿಡುತ್ತಾನೆ. ವರ್‍ವಾರಾಳ ಕಠಿಣ ಜೀವನದ ಬಗ್ಗೆ ಯೋಚಿಸುತ್ತಾ, ಅದರ ಬಗ್ಗೆ ಮಾತಾಡುತ್ತಾ ಹೀಗೆ ಹೇಳುತ್ತಾನೆ: ''........ಬದುಕಿನಲ್ಲಿನ ನಿನ್ನ ಪಾಲು ಅಷ್ಟು ಕಠಿಣವಾಗಿ ಯಾಕಿರಬೇಕು? ಒಬ್ಬ ಒಳ್ಳೆಯ ಮನುಷ್ಯ ಬಡತನದಲ್ಲಿ ಮತ್ತೂ ಕಡೆಗಣಿಸಲ್ಪಟ್ಟು ಯಾಕಿರಬೇಕು - ಬೇರೆಯವರಿಗೆ ಸುಖ ತನ್ನಷ್ಟಕ್ಕೆ ತಾನೆ ಬರುವಾಗ? ಖಂಡಿತ, ನನ್ನ ಮುದ್ದು, ನನಗೆ ಗೊತ್ತು ನಾನಿಂಥ ವಿಚಾರಗಳನ್ನು ಹೊಂದಿರಬಾರದು ಅಂತ; ಯಾಕೆಂದರೆ ಅದು ಸ್ವತಂತ್ರ ವಿಚಾರದ ವಾಸನೆಯನ್ನು ಹೊಂದಿದೆ. ಆದರೂ........''

''ಪೂರ್ ಫೋಕ್''ನ ಉದ್ದಕ್ಕೂ ಬಡಜನರ ಭೀಕರ ಸ್ಥಿತಿ ಗತಿಗಳು, ಅವರು ಸಹಿಸುವ ಅನ್ಯಾಯ ಮತ್ತು ಅಪಮಾನ, ಅವರ ಬದುಕಿನ ಆಸೆ-ನಿರಾಸೆಗಳು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲ್ಪಟ್ಟಿವೆ. ಈ ಕಾದಂಬರಿಯಲ್ಲಿ ಬರುವ ಬಡತನದ ದಟ್ಟ ಹಾಗೂ ಸೂಕ್ಷ್ಮ ವಿವರಣೆ, ಯಾತನೆಯ ತೀಕ್ಷ್ಣ ಅಭಿವ್ಯಕ್ತಿ, ಒಂದು ಗುಂಗಾಗಿ ಬಿಡುವಂಥ ದಿಗಿಲು ಹುಟ್ಟಿಸುವ ಮತ್ತು ಅದರ ಜೊತೆಗೇ ಅದ್ಭುತವೆನಿಸುವಂಥ ಕಲಾತ್ಮಕ ನಿರೂಪಣೆ ವಿಶ್ವ ಸಾಹಿತ್ಯದಲ್ಲಿ ವಿರಳವೆನ್ನಬಹುದು. ಇಲ್ಲಿನ ದಾರಿದ್ರ್ಯದ ವಿವರಗಳು ಕೇವಲ ವಿವರಗಳಾಗಿ ಉಳಿಯುವುದಿಲ್ಲ; ಮನುಷ್ಯನ ಬದುಕು ಸಹನೀಯವಾಗಿರಲೆಂಬ, ಸಾಧ್ಯವಾದರೆ ಸುಂದರವಾಗಿರಲೆಂಬ ಆಸೆ ಈ ವಿವರಗಳ ಹಿಂದೆ ಅರಳುತ್ತಿರುವುದನ್ನು ನಾವು ಕಾಣಬಹುದಾಗಿದೆ.

ಗೊಗೋಲನ ಕಥೆಯಾಗಲಿ, ದಾಸ್ತೊಯೆವ್‌ಸ್ಕಿಯ ಕಾದಂಬರಿಯಾಗಲಿ, ವಿಶ್ವ ಸಾಹಿತ್ಯದ ಶ್ರೇಷ್ಠ ಸೃಷ್ಟಿ ಎನ್ನಬಹುದು. ಈ ಕಥೆಗಳು ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ಸಲ್ಲುವಂಥ, ಪ್ರಸ್ತುತವೆನಿಸುವಂಥ ಕೃತಿಗಳು. ಈ ಮಾತನ್ನು ನಾನು ವಿಶೇಷವಾಗಿ ಭಾರತದ ನಮ್ಮ ಸದ್ಯದ ಸಂದರ್ಭದಲ್ಲೂ ಹೇಳಬಹುದು. ಏಕೆಂದರೆ ಈ ಕಥೆಗಳಲ್ಲಿನ ಬಡಜನರು ನಮಗೆ ತೀರ ಹತ್ತಿರವಾಗುವ, ನಿಜವೆನಿಸುವ ಮತ್ತು ಒಂದು ವಿಚಿತ್ರ ರೀತಿಯಲ್ಲಿ ಪ್ರಿಯವೆನಿಸುವ ಜನರು. ಹತ್ತೊಂಬತ್ತನೆಯ ಶತಮಾನದ ರಷ್ಯಾದ ಸಾಮಾನ್ಯ ಜನರ ಜೀವನ ನಮ್ಮ ದೇಶದಲ್ಲಿ ಈ ಇಪ್ಪತ್ತನೆಯ ನಂತರದ ಶತಮಾನದಲ್ಲಿ ಇವೊತ್ತಿಗೂ ಕಾಣುವಂಥ ಜೀವನ; ರಷ್ಯಾದ ಅಂದಿನ ದಾರಿದ್ರ್ಯವನ್ನು ಇವೊತ್ತಿಗೂ ನಾವೂ ಇಲ್ಲಿ ಕಾಣಬಹುದು. ಟೀ ಬಗ್ಗೆ ಲೆಕ್ಕ ಹಾಕುವ, ಹೊಸ ಮೇಲಂಗಿ ಅಥವಾ ಯೂನಿಫಾರಮ್ಮೊಂದರ ಬಗ್ಗೆ ಕಷ್ಟಪಡುವ, ಬೂಟುಗಳ ಹಾಗೂ ಹರಿದ ಬಟ್ಟೆಗಳ ರಿಪೇರಿಗಾಗಿ ಕಾಸು ಕಾಸಿಗೂ ಯೋಚಿಸುವ ಗೊಗೋಲನ ಬಡಜನರೇ ಆಗಲಿ, ದಾಸ್ತೊಯೆವ್‌ಸ್ಕಿಯ ಬಡಜನರೇ ಆಗಲಿ, ನಾವು ನಮ್ಮಲ್ಲಿ ಪ್ರತಿದಿನ ಕಾಣುವ ಜನರೇ ಆಗಿದ್ದಾರೆ.

ಅಂದಹಾಗೆ, ಪ್ರಾಸಂಗಿಕವಾಗಿ ಇಲ್ಲೊಂದು ಮಾತು. ದಾಸ್ತೊಯೆವ್‌ಸ್ಕಿಯ ''ಪೂರ್ ಫೋಕ್'' ಕಾದಂಬರಿಯನ್ನು ನಾನು ಸದ್ಯಕ್ಕೆ ಕನ್ನಡಕ್ಕೆ ಅನುವಾದ ಮಾಡುತ್ತಿದ್ದು, ಅದೇ ಈ ಲೇಖನಕ್ಕೆ ಮುಖ್ಯ ಪ್ರೇರಣೆ ಎನ್ನಬಹುದು.

ಶ್ರೀನಿವಾಸ ವಿ. ಸುತ್ರಾವೆ
೧೬೯೨/೧೧೦ ಬಿ, ೫ನೇ ಕ್ರಾಸ್, ವಿನಾಯಕ ಬಡವಣೆ, ವಿದ್ಯಾನಗರ,
ದಾವಣಗೆರೆ - ೫೭೭ ೦೦೫

### ಸಿಯಾಟಲ್ ಫಲಶ್ರುತಿ

*ಪಂಚತಂತ್ರದ ಒಂದು ಕಥೆ ಹೀಗಿದೆ : ಕಾಡಿನಲ್ಲಿ ಸ್ವೇಚ್ಛೆಯಾಗಿ ಅಲೆದಾಡುತ್ತಾ, ಚೆನ್ನಾಗಿ ಉಂಡು, ಕೊಬ್ಬಿತ್ತು ಸಂಜೀವಕ ಎಂಬ ಎತ್ತು. ಅದರ ದಷ್ಟಪುಷ್ಟವಾದ ಅಂಗಾಂಗಗಳು ಯಾವ ಪ್ರಾಣಿಗೇ ಆದರೂ ತಿನ್ನಬೇಕೆಂಬ ಆಸೆ ಉಂಟುಮಾಡುವಂತಿದ್ದರೂ, ಅದರ ಮಹಾಕಾಯ, ಪೌರುಷ ಅವುಗಳನ್ನು ದೂರವಿಟ್ಟಿತ್ತು. ಆದರೆ ನರಿಯೊಂದು ಅದರ ಹಿಂದೆಯೇ ಆಸೆಯಿಂದ ಅನುಸರಿಸುತಿತ್ತು. ಒಂದಲ್ಲಾ, ಎರಡಲ್ಲಾ, ಹದಿನಾಲ್ಕು ವರ್ಷಗಳು ! ಕಾರಣ ಆ ಎತ್ತಿನ ಮಹಾ ಪ್ರಮಾಣದ ಬೀಜದ ಚೀಲ ಪೆಂಡುಲಂನಂತೆ ಆಡುತ್ತಾ, ಇನ್ನೇನು ಈಗಲೋ ಆಗಲೋ ಬಿದ್ದೇ ಹೋಗುವಂತೆ ಭಾಸವಾಗುತ್ತಿತ್ತು. ಅದು ಹಾಗೆ ಬಿದ್ದಾಗ ತಕ್ಷಣ ಆತುಕೊಂಡು, ತಿಂದು ಆನಂದಿಸುವ ಕನಸು ಆಸೆಬುರುಕ ನರಿಗೆ. ಹದಿನಾಲ್ಕು ವರ್ಷ ಕಾದಮೇಲೆ ಬುದ್ಧಿಬಂತು. ಇದು ಬೀಳುವ ವಸ್ತುವಲ್ಲ ಅಂತ. ಅಂದಿನಿಂದ ತನ್ನ ದಾರಿ ತಾನು ಹಿಡಿಯಿತು.*

*ಕಳೆದ ಐವತ್ತು ವರ್ಷಗಳಿಂದ ಶ್ರೀಮಂತ ರಾಷ್ಟ್ರಗಳ ಹಿಂದೆ ಬಿದ್ದ ಅಭಿವೃದ್ಧಿಶೀಲ ಮತ್ತು ಬಡ ರಾಷ್ಟ್ರಗಳದ್ದು ಇದೇ ಪಾಡಲ್ಲವೇ? ಐವತ್ತು ವರ್ಷ ನ್ಯಾಯಬದ್ಧ ವ್ಯಾಪಾರಾವಕಾಶಕ್ಕಾಗಿ ಕಾದು, ಕಾದು, ಚರ್ಚಿಸಿ, ಚರ್ಚಿಸಿ, ಇನ್ನೇನು ಒಂದಿಷ್ಟಾದರೂ ಉಪಯುಕ್ತ ತೀರ್ಮಾನ ಬಂದೀತೋ ಎಂದಾಗ ಸಿಯಾಟಲ್‌ನಲ್ಲಿ ಇದನ್ನು ಕೈ ಬಿಟ್ಟರಲ್ಲಾ.*

*ಎಪ್ಪತ್ತರಲ್ಲಿ ಈ ಅಭಿವೃದ್ಧಿಶೀಲ ಮತ್ತು ಹಿಂದುಳಿದ ರಾಷ್ಟ್ರಗಳು ತಮ್ಮದೇ ಬಣದಲ್ಲಿ ಚರ್ಚಿಸಿದ್ದ ಆರ್ಥಿಕ ನೀತಿಗೂ ''ಹೊಸ ಆರ್ಥಿಕ ನೀತಿ'' ಎಂತಲೇ ಹೆಸರಿತ್ತು. ಶ್ರೀಮಂತರ ಕೃಪೆಗೆ ಕಾಯದೆ, ನಮ್ಮ-ನಮ್ಮ ನಡುವೆಯೇ ನ್ಯಾಯಯುತ ಪರಸ್ಪರ ಪ್ರಯೋಜನವಾಗುವ ಸಹಕಾರದಿಂದ, ವ್ಯಾಪಾರ ನಡೆಸೋಣ ಎಂಬುದು ಅದರ ತಿರುಳು. ಆದರೆ ಈ ಚರ್ಚೆ ರೂಪಗೊಳ್ಳುವ ಮುಂಚೆಯೇ ಶ್ರೀಮಂತ ರಾಷ್ಟ್ರಗಳ ಪಿತೂರಿಯಿಂದ ಸಮಾಜವಾದೀಯ ರಾಷ್ಟ್ರಗಳು ಪತನವಾಗಿ, ಅಲಿಪ್ತ ರಾಷ್ಟ್ರಗಳು ನಿಸ್ಸತ್ವವಾಗಿ, ವಿಶ್ವ ವ್ಯಾಪಾರ ಮಂಡಳಿಯ ರಚನೆಯಾಗಿ, ಪುನಃ ಅವರ ಹಿಂದೆ ಹೋಗುವ ನಾಯಿಪಾಡು ಬಂತು. ಇದನ್ನು ನೆನಪಿನಲ್ಲಿಡುವುದು ಅಗತ್ಯ.*

*ಪಾರ್ಥ, ಬೆಂಗಳೂರು*




## ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು-ಸವಾಲುಗಳು

*ಡಾ|| ಮಹಾಬಲೇಶ್ವರ ರಾವ್*

**ಪುಟ : 272** **ಬೆಲೆ : ರೂ. 110**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು- 560 001.

*ಗಗನಚುಂಬಿ ಕಟ್ಟಡದ ಕಟ್ಟಕಡೆಯ ಮಹಡಿ ಆಧರಿಸಿರುವುದು ಅದರ ಮೊಟ್ಟಮೊದಲ ಸುತ್ತಿನ ತಳಪಾಯವನ್ನು. ಪ್ರಾಥಮಿಕ ಹಂತದ ಶಿಕ್ಷಣ ವ್ಯವಸ್ಥೆ ಮನುಷ್ಯನ ಭವಿಷ್ಯದ ಪರಿಪೂರ್ಣತೆಯನ್ನು ರೂಪಿಸಬಲ್ಲುದು. ಸ್ವತಃ ಉತ್ತಮ ಶಿಕ್ಷಕರಾಗಿರುವ ಲೇಖಕರು ಇಂಥ ಶಿಕ್ಷಣ ವ್ಯವಸ್ಥೆಯಲ್ಲಿ ಸ್ವಾತಂತ್ರ್ಯ ಪೂರ್ವದಿಂದಲೂ ನಮ್ಮ ದೇಶಕ್ಕಿರುವ ಸವಾಲು-ಸಮಸ್ಯೆಗಳತ್ತ ಕ್ಷ-ಕಿರಣ ಬೀರಿ, ಸಫಲತೆ-ವಿಫಲತೆಗಳತ್ತ ನಿರ್ದಾಕ್ಷಿಣ್ಯವಾಗಿ ಬೆಟ್ಟು ತೋರಿಸಿ, ಪ್ರಾರಂಭಿಕ ಹಂತದ ಶಿಕ್ಷಣ ವ್ಯವಸ್ಥೆಗೆ ನಮ್ಮಲ್ಲಿ ಹೇಗೆ ''ಕಲ್ಲು'' ಹಾಕಲಾಗಿದೆಯೆಂಬುದನ್ನು ವಿಶ್ಲೇಷಿಸಿದ್ದಾರೆ.*




## ಮಕ್ಕಳ ಮಾರಕ ರೋಗಗಳು

*ಡಾ|| ಕರವೀರಪ್ರಭು ಕ್ಯಾಲಕೊಂಡ*

**ಪುಟ: 104** **ಬೆಲೆ : ರೂ. 30**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು- 560 001

*ಸದ್ದಿಲ್ಲದೆ ಬಂದು ಮುದ್ದು ಮಗುವಿನೊಂದಿಗೆ ಆಟವಾಡಿ, ಬಂದ ನೆನಪಿಗೆ ಕಹಿ ಉಡುಗೊರೆ ನೀಡಿ ದಾಂಧಲೆ ಎಬ್ಬಿಸುವ, ಕರೆಯದೆ ಬರುವ ಅತಿಥಿಗಳು ಯಾರು? ಮಕ್ಕಳ ಶತ್ರುಗಳಾದ ಪೋಲಿಯೊ, ದಡಾರದಂತಹ ಅನೇಕ ಮಾರಕ ರೋಗಗಳ ಬಗ್ಗೆ ಡಾ|| ಕರವೀರಪ್ರಭು ಸಾದ್ಯಂತ ಪರಿಚಯ ಮಾಡಿಸಿದ್ದಾರೆ. ಮನೆಯ ಹಿರಿಯರು, ಹೆತ್ತವರು, ಮುಂಜಾಗ್ರತೆ ವಹಿಸಿ, ಮೂಢನಂಬಿಕೆಗಳನ್ನು ಬಿಟ್ಟು ಸಕಾಲದಲ್ಲಿ ಎಚ್ಚೆತ್ತು ಪ್ರಾಣಾಂತಿಕ ರೋಗಗಳಿಂದ ಮಗುವನ್ನು ರಕ್ಷಿಸಬೇಕಾದ ಅಗತ್ಯದ ಬಗ್ಗೆ ತಿಳಿಸಿದ್ದಾರೆ. ಎಲ್ಲರಿಗೂ ಉಪಯುಕ್ತ ಪುಸ್ತಕ.*



## ಶತಮಾನ (ಲೇಖನ ಸಂಗ್ರಹ)

*ಮೊಗಳ್ಳಿ ಗಣೇಶ್*

**ಪುಟ : 104** **ಬೆಲೆ : ರೂ. 50**

**ಲೋಹಿಯಾ ಪ್ರಕಾಶನ, 'ಕ್ಷಿತಿಜ' ಕಪ್ಪಗಲ್ಲು,** ಗಾಂಧಿನಗರ, ಬಳ್ಳಾರಿ - 583 101

*ಇಪ್ಪತ್ತನೇ ಶತಮಾನ ಅತ್ಯಂತ ವೇಗದ್ದು. ಜೀವನದ ಎಲ್ಲ ಕ್ಷೇತ್ರಗಳಲ್ಲಿ ಆಶ್ಚರ್ಯಕರ ಬದಲಾವಣೆಗಳಾಗಿವೆ. ಹಳೆಯ ಮತ್ತು ಹೊಸ ಸಾಂಸ್ಕೃತಿಕ ವಿಕಾಸಗಳು ಒಟ್ಟಾರೆ ಸಮುದಾಯದ ಮೇಲೆ ಗಾಢವಾದ ಪ್ರಭಾವ ಬೀರಿವೆ. ಇಲ್ಲಿ ಲೇಖಕರು ಕನ್ನಡದ ಸಂದರ್ಭದಲ್ಲಿ ಶತಮಾನದ ರೂಪಾಂತರಗಳನ್ನು, ತಳಮಳಗಳನ್ನು ವಿಶ್ಲೇಷಿಸಿದ್ದಾರೆ. ಏಳು ವಿಚಾರಪೂರ್ಣ ಲೇಖನಗಳಿವೆ.*

## ಕಾಲಗರ್ಭಕ್ಕೆ ಕೀಲಿಕೈ (ಲೇಖನ ಸಂಗ್ರಹ)

*ಟಿ. ಆರ್. ಅನಂತರಾಮು*

**ಪುಟ : 150** **ಬೆಲೆ : ರೂ. 100**

**ಬ್ಯಾಲದಕೆರೆ ಪ್ರಕಾಶನ,** ಜಿ. ನಾಗತಿಹಳ್ಳಿ ಅಂಚೆ, ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ

*ಕನ್ನಡದ ಮೂರು ಮಂದಿ ಖ್ಯಾತ ವಿಜ್ಞಾನಿಗಳ ಪರಿಚಯ ಸೇರಿದಂತೆ ಇಪ್ಪತ್ತೊಂದು ವಿಜ್ಞಾನ ಲೇಖನಗಳ ಸಂಗ್ರಹ. ವೈಜ್ಞಾನಿಕ ಲೇಖನಗಳಾದರೂ ಸರಳ ಶೈಲಿಯಿಂದ ಪ್ರಬಂಧಗಳಂತೆ, ಪ್ರವಾಸ ಲೇಖನಗಳಂತೆ ಓದುಗರ ಕುತೂಹಲ ಉಳಿಸಿಕೊಳ್ಳುವ ಲೇಖನಗಳು. ಹಲವು ಕಡೆ ಒದಗಿಸಿರುವ ಟಿಪ್ಪಣಿಗಳು ಲೇಖನಗಳ ಮೌಲ್ಯವನ್ನು ಹೆಚ್ಚಿಸಿವೆ.*



## ಸುಂದರನ ಕನಸುಗಳು (ಕಾದಂಬರಿ)

*ಬಿ. ವಿ. ನಾಗರಾಜು* **ಪುಟ : 136** **ಬೆಲೆ : ರೂ. 50**

**ಆಪ್ತ ಪ್ರಕಾಶನ,** 'ಲೇಖಿನಿ', ನಂ.18/1, ಎಂ.ಐ.ಜಿ. ಫ್ಲಾಟ್, 'ಆರ್' ಬ್ಲಾಕ್, ನಂದಿನಿ ಲೇಔಟ್, ಬೆಂಗಳೂರು-96.

*ಇದು ಬಾಲ್ಯದ ನೆನಪುಗಳ ಸುತ್ತ ಹೆಣೆದ ಕಿರು ಕಾದಂಬರಿ. ಇದರಲ್ಲಿ ಬಾಲಕನೊಬ್ಬ ಅನುಭವಿಸಿದ ಸಂಭ್ರಮ ನೋವು-ನಲಿವು ಇವುಗಳ ಹದವಾದ ಮಿಶ್ರಣವಿದೆ. ಎಲ್ಲ ಮಕ್ಕಳ ಬಾಲ್ಯವೂ ರಂಗುರಂಗಿನ ಕನಸುಗಳಂತಿದ್ದರೂ ಮೇಲ್ನೋಟಕ್ಕೆ ಯಾವುದೇ ಅತಿರೇಕದ ಪ್ರಸಂಗ ಜರುಗಿಲ್ಲವಾದರೂ ಸಮಾಜದ ಕೆಳಸ್ತರದಿಂದ ಬಂದ ಮಕ್ಕಳ ಬಾಲ್ಯದಲ್ಲಿ ನೋವಿನ ಎಳೆಯೊಂದು ಕಂಡೂ ಕಾಣದಂತಿರುವುದನ್ನು ಓದುಗರು ಗ್ರಹಿಸಬಹುದು.*




## ಸತ್ಯವೆಂಬುದು ಸತ್ಯವೇ ಅಲ್ಲವೇ

*ಬಿ. ಜನಾರ್ಧನ ಭಟ್*

**ಪುಟ : 115** **ಬೆಲೆ : ರೂ. 55**

**ಸುಮಂತ ಪ್ರಕಾಶನ** 1-183, ಉಪ್ಪಿನಕೋಟೆ (ಗಾಲದಕಟ್ಟೆ ರಸ್ತೆ), ಬ್ರಹ್ಮಾವರ, ಉಡುಪಿ - 576 213

*ಇಲ್ಲಿಯ ಲೇಖನಗಳು ಬೇರೆ ಬೇರೆ ಸಂದರ್ಭಗಳಿಗಾಗಿ ಬರೆದಿರುವ ಕೆಲವು ಸಾಹಿತ್ಯ ಪ್ರಕಾರಗಳ ಬಗೆಗಿನ ಲೇಖಕರ ಅನಿಸಿಕೆಗಳಾಗಿವೆ. ಹೆಚ್ಚಿನವು ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳು, ಅನೇಕ ಪತ್ರಿಕೆಗಳಲ್ಲಿ ಸಾಹಿತ್ಯ ಚಿಂತನೆಯಾಗಿ ರೂಪುಗೊಂಡಂಥವು ಹಾಗೂ ಕೆಲವು ಕಥಾಸಂಕಲನಗಳಿಗಾಗಿ ಬರೆದ ಮೌಲಿಕ ಮುನ್ನುಡಿಯ ಸಂಗ್ರಹಗಳು. ಸಾಹಿತ್ಯ ಪ್ರಕಾರಗಳ ಬಗೆಗೆ ಪ್ರಾತಿನಿಧಿಕ ಚಿಂತನೆಯನ್ನು ಇಲ್ಲಿ ಮಾಡಲಾಗಿದೆ.*



## ಅಮೆರಿಕದ ಕಥೆಗಳು (ಕಥಾ ಸಂಕಲನ)

*ಶಾಂತಾರಾಮ ಸೋಮಯಾಜಿ*

**ಪುಟ : 152** **ಬೆಲೆ : ರೂ. 55**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.,** ಬೆಂಗಳೂರು- 1.

*ಪ್ರಪಂಚದ ಪ್ರತಿಭೆಗಳನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿರುವ ಅಮೆರಿಕ ಇಲ್ಲಿನ ಪಾತ್ರಗಳನ್ನು ರೂಪಿಸಿದೆ. ಕಥಾಪಾತ್ರಗಳು ಇಲ್ಲಿನ ವೈಭವಯುತ ಜೀವನದ ಮಧ್ಯೆಯೂ ಅಮೂಲ್ಯವಾದುದನ್ನೇನೋ ಕಳಕೊಂಡಂತೆ, ತನ್ನತನವನ್ನು ಬಿಡಲಾಗದೆ ಚಡಪಡಿಸುತ್ತವೆ. ಮಕ್ಕಳ ಗುಟುಕಿಗಾಗಿ ಗೂಡುಬಿಟ್ಟ ಹಕ್ಕಿ ಬೇಟೆಗಾರನ ಬಲೆಯಲ್ಲಿ ಸಿಕ್ಕಿ ಒದ್ದಾಡುವ ಅನುಭವ, ಮತ್ತೆ ಗೂಡು ಸೇರುವ ತವಕ ಈ ಪಾತ್ರಗಳದ್ದು. ಓದಿನೋಡಿ.*

## ಚದುರಂಗರ ಸಮಗ್ರ ಕಥೆಗಳು

*ಚದುರಂಗ*

**ಪುಟ : 576** **ಬೆಲೆ : ರೂ. 300**

**ಅಭಿರುಚಿ ಪ್ರಕಾಶನ,**

386, 14ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು-9



*ಕಥಾಪ್ರಪಂಚಕ್ಕೆ ಉತ್ತಮ ಮಟ್ಟದ ಕೊಡುಗೆ ನೀಡಿದವರಲ್ಲಿ ಚದುರಂಗರ ಹೆಸರು ಅಗ್ರಪಂಕ್ತಿಯಲ್ಲಿರುತ್ತದೆ. ಅವರ ಅನೇಕ ಪ್ರಕಟಿತ ಕಥಾಸಂಕಲನಗಳಲ್ಲಿ ಹರಡಿಕೊಂಡಿರುವ ಅರವತ್ತು ಕಥೆಗಳನ್ನು ಇಲ್ಲಿ ಕಲೆಹಾಕಲಾಗಿದೆ. ಸುಮಾರು ಐವತ್ತು ವರ್ಷಗಳ ಅವರ ಬರವಣಿಗೆಯ ವಿದ್ವತ್ತು - ಕಾದಂಬರಿ ಕಥಾಸಾಹಿತ್ಯಗಳೆರಡರಲ್ಲೂ ಮಿಂಚಿದೆ.*

- ಇಂದಿರಾ ಕುಮಾರಿ

# ಅವಳ ಚರಿತ್ರೆ ಮತ್ತು ಚರಿತ್ರೆಯಲ್ಲಿನ ಮಿಥ್ಯೆ

ಡಾ॥ ಬಿ. ಎನ್. ಸುಮಿತ್ರಾಬಾಯಿ

**ಈ** ಗತಶತಮಾನದ ಕಡೆಯ ಎರಡು ದಶಕಗಳಲ್ಲಿ ಮಹಿಳಾ ದೃಷ್ಟಿಕೋನ, ಮಹಿಳಾ ಸಾಹಿತ್ಯ ಪರಂಪರೆಗಳನ್ನು ಕುರಿತಂತೆ ಸ್ತ್ರೀವಾದವು ಹುಟ್ಟಿಸಿದ ಚರ್ಚೆಗಳು ಈಗಿನ ಸೃಜನಶೀಲ ಮತ್ತು ಚಿಂತನಶೀಲ ಬರಹಗಳ ಮೇಲೆ ವಿಶಿಷ್ಟ ಪ್ರಭಾವವನ್ನು ಬೀರಿವೆ. ಆದ್ದರಿಂದಲೇ ಶತಮಾನದ ಕೊನೆಯ ವರ್ಷದಲ್ಲಿ ಮಹಿಳೆಯರ ಕತೆಗಳನ್ನು ಸಂಕಲಿಸುವ ಕಾರ್ಯವೊಂದು ನಡೆದಿದೆ ಎಂದಾಗ ಅದರಲ್ಲಿ ಸ್ತ್ರೀವಾದದ ಸಾಂಸ್ಕೃತಿಕ ಪ್ರಕ್ರಿಯೆಯನ್ನು ದಾಖಲಿಸಿ, ಅದರ ಮುಂಬೆಳಕಿನಲ್ಲಿ ಈ ಕತೆಗಳನ್ನು ಪರಿಶೀಲಿಸುವ ಯತ್ನವಿದ್ದೀತು ಎಂದು ನಿರೀಕ್ಷಿಸುವುದು ಸಹಜ. ಆದರೆ 'ಅವಳ ಕತೆಗಳು' ಸಂಕಲನದ ಸಂಪಾದಕರಾಗಿ ಜಿ. ಎಸ್. ಆಮೂರರು ಈ ರೀತಿಯ ನೇರವಾದ ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸುವುದಕ್ಕೆ ಎಲ್ಲಿಯೋ ಕೆಲವು ನಿಷೇಧಗಳನ್ನು ಇಟ್ಟುಕೊಂಡಂತೆ ಭಾಸವಾಗುತ್ತದೆ. ಕೃತಿಯ ಶೀರ್ಷಿಕೆಗೆ ಅವರು ಕೊಡುವ ವಿವರಣೆಯಿಂದ ಕೂಡ ಈ ಬಗೆಯ ರಿಸರ್ವೇಷನ್‌ಗಳನ್ನು ಕಾಣಬಹುದು. ಅವರು ಹೇಳುತ್ತಾರೆ : ''ಇಲ್ಲಿನ ಕತೆಗಳು ಅವಳು ಬರೆದ ಕತೆಗಳಾಗಿರುವಂತೆ 'ಅವಳ ಕತೆ'ಗಳೂ ಆಗಿವೆ. ಈ ಹೆಸರು ನನಗೆ ದೊರೆತದ್ದು ಮಂಗಲಾ ಆಠಲೇಕರ್ ಸಂಪಾದಿಸಿದ 'ತಿಚಿ ಕಥಾ' ಎಂಬ ಸಂಗ್ರಹದಿಂದ.'' (ಪುಟ xxvii).

### ತಾತ್ವಿಕ ದೃಷ್ಟಿ

ಈ ಮಂಗಲಾ ಆಠಲೇಕರ್ ಎಂಥ ತಾತ್ವಿಕ ದೃಷ್ಟಿಯಿಂದ, ಯಾವ ಸಂದರ್ಭದಲ್ಲಿ ಮರಾಠೀ ಮಹಿಳೆಯರ ಕತೆಗಳನ್ನು ಸಂಕಲಿಸಿದ್ದಾರೆಂಬುದರ ಬಗ್ಗೆ ಯಾವ ವಿವರವನ್ನೂ ಆಮೂರರು ನೀಡಿಲ್ಲವಾದರೂ ಆಕೆಯ ಮುನ್ನುಡಿಯಿಂದಲೂ ತಾವು ಪ್ರಯೋಜನವನ್ನು ಪಡೆದಿರುವುದನ್ನು ಸೂಚಿಸುತ್ತಾರೆ. ಆದುದರಿಂದ 'ಅವಳ ಕತೆಗಳು' ಎಂಬ ಕಥಾ ಸಂಗ್ರಹದ ಆಕೃತಿಯೂ, ಅದರ ವಿಚಾರಗಳೂ ಆ ಮರಾಠಿ ಕೃತಿಯ ಮಾದರಿಯಿಂದ ಕೆಲಮಟ್ಟಿಗೆ ರೂಪುಗೊಂಡಿವೆ ಎನ್ನಬಹುದೇನೋ. ಆದರೆ ಈ ರೀತಿಯ ಒಂದು ತಾತ್ವಿಕ ದೃಷ್ಟಿಕೋನವೇ ಸ್ತ್ರೀವಾದದ ಕಾಣಿಕೆಯಾಗಿದೆ ಎಂಬ ಬಗ್ಗೆ ಆಮೂರರ ಪ್ರಸ್ತಾವನೆಯಲ್ಲಿ ಯಾವ ಸುಳಿವೂ ಇರದಿರುವುದೇ ಕುತೂಹಲದ ಸಂಗತಿ. ಭಾರತೀಯ ಭಾಷಾ ಸಾಹಿತ್ಯದಲ್ಲಿ 'ಅವಳ ಕತೆ' / 'Her story' ಎಂಬ ಒಂದು ತಾತ್ವಿಕ ದೃಷ್ಟಿಕೋನವು ಪ್ರಮುಖವಾಗಿ ಕಾಣಿಸಿಕೊಂಡಿರುವುದು ಪಾಶ್ಚಿಮಾತ್ಯ ಸ್ತ್ರೀವಾದಿ ತಾತ್ವಿಕತೆಯ ಮೂಲಕವಾಗಿ. ಮನುಷ್ಯ ನಿರ್ಮಿತ ಚರಿತ್ರೆ ಎಂಬುದೆಲ್ಲ ಕೇವಲ 'His story'ಯೆಂದೇ ಪರಿಗಣಿತವಾಗುತ್ತಿದ್ದು ಅಂಥ ಧೋರಣೆ ಪುರುಷ ಪ್ರಧಾನ ವ್ಯವಸ್ಥೆಯ ಫಲವೆಂದು ಅದರ ವಿರುದ್ಧ ಬಂಡೆದ್ದ ಸ್ತ್ರೀವಾದಿಗಳು ಮಹಿಳೆಯ ಅಸ್ತಿತ್ವ ಮತ್ತು ಪಾಲ್ಗೊಳ್ಳುವಿಕೆಗಳನ್ನೂ ಬೆಳಕಿಗೆ ತಂದು ದಾಖಲಿಸಲು ಯತ್ನಿಸಿದ್ದಾರೆ. ಮಹಿಳೆ ಮಾನವ ಚರಿತ್ರೆಯಲ್ಲಿ ಕೇವಲ ನಿಷ್ಕ್ರಿಯ, ಜಡ ಪದಾರ್ಥವಲ್ಲ, ಅವಳು ಅದರ ಜೀವಂತ, ಕ್ರಿಯಾಶೀಲ ಭಾಗಿದಾರಳು. ಚರಿತ್ರೆ ಎನ್ನುವುದು ಬರಿಯ ಗಂಡಸರ ಯುದ್ಧದಾಹ, ರಾಜಕೀಯದ ಆಟ, ಹಿಂಸೆ, ಸಾಮ್ರಾಜ್ಯದಾಹಗಳ ಒಕ್ಕಣೆ ಎಂಬುದು ತಪ್ಪು ಕಲ್ಪನೆ. ರಾಜ್ಯಗಳನ್ನು ಕಟ್ಟುತ್ತ ಕೆಡವುತ್ತ 'ಶೌರ್ಯ' ಪ್ರದರ್ಶನದಲ್ಲಿ ಪುರುಷರು ನಿರತರಾದಾಗ ಮಹಿಳೆಯರು ಮನೆ-ಮೌಲ್ಯಗಳನ್ನು ಸೃಷ್ಟಿಸಿ ಬೆಳೆಸುವ ಇತ್ಯಾತ್ಮಕ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಪುರುಷರನ್ನು ಹೆತ್ತು ಈ ಹೋರಾಟಗಳಿಗೆ ತಾಕತ್ತನ್ನು ಒದಗಿಸಿದ್ದಾರೆ. ತಮ್ಮ ಪುರುಷರ ಜೊತೆಗೂಡಿ ತಮಗಿಂತ ದುರ್ಬಲರಾದವರನ್ನು ಶೋಷಿಸುವಲ್ಲೂ ಪಾಲು ಪಡೆದಿದ್ದಾರೆ. ಮಹಿಳೆಯರ ಇರವು ಹೀಗೆ ಕ್ರಿಯಾತ್ಮಕವಾಗಿದ್ದರೂ ಇದಾವುದೂ 'ಮುಖ್ಯ'ವೆನಿಸದೆ ಇದ್ದುದರಿಂದ ಪುರುಷರು ಕಟ್ಟಿಕೊಂಡ ಚರಿತ್ರೆಯಲ್ಲಿ ಮಹಿಳೆಗೆ ಪ್ರವೇಶ ದೊರೆತಿಲ್ಲ ಎಂಬ ಅನ್ಯಾಯ, ಅಸಮತೋಲನಗಳನ್ನು ಸರಿಪಡಿಸುವ ನಿಟ್ಟಿನಿಂದ ಸಾಹಿತ್ಯ, ಚರಿತ್ರೆ, ಸಂಸ್ಕೃತಿಯನ್ನು ಸ್ತ್ರೀದೃಷ್ಟಿಕೋನದಿಂದ ಅಧ್ಯಯನ ಮಾಡುವ, ವಿಮರ್ಶಿಸುವ ಮತ್ತು ಮರು ಮೌಲ್ಯ ಮಾಪನ ಮಾಡುವ ತಾತ್ವಿಕ ವಿಧಾನವೊಂದು ಬೆಳೆದಿದೆ. ಈ ತಾತ್ವಿಕ ವಿಧಾನದ ಸಾಂಕೇತಿಕ ನಾಮಧೇಯವೇ Her story/ಅವಳ ಕತೆ/ತಿಚಿ ಕಥಾ ಇತ್ಯಾದಿಗಳು.

ಈ ದೃಷ್ಟಿಕೋನದ ವೈಶಿಷ್ಟ್ಯವೆಂದರೆ ಯಾರೋ ಒಬ್ಬ ವ್ಯಕ್ತಿ ಇಲ್ಲವೇ ಒಂದು ಗುಂಪಿನ ಮೂಲಕ ಹುಟ್ಟಿದ ತತ್ವವನ್ನೇ ಸಾರ್ವತ್ರೀಕರಿಸಿ ಎಲ್ಲಾ ಮಹಿಳೆಯರನ್ನು ಅದರ ಒಳತಂದು ತುರುಕಲು ಅದು ಬಯಸುವ ರೀತಿಯದಲ್ಲ. ಬದಲಾಗಿ ಕಾಲ, ದೇಶ, ಸಾಂಸ್ಕೃತಿಕ ಪರಿಸರಗಳ ಭಿನ್ನತೆಗೆ ತಕ್ಕಂತೆ ಈ ಚರಿತ್ರೆ ಬಹುಮುಖಿಯಾಗಿ ಬಹುಸ್ತರಗಳನ್ನು ಒಳಗೊಳ್ಳುವುದಕ್ಕೆ ಯತ್ನಿಸುತ್ತದೆ. ಯಾರೊಬ್ಬರ ನೆಲೆಯನ್ನೂ ಯಜಮಾನಿಕೆಯ ನೆಲೆಯಿಂದ ಹತ್ತಿಕ್ಕುವುದು, ಏಕರೂಪಕ್ಕೆ ಇಳಿಸುವುದು ಈ ದೃಷ್ಟಿಗೆ ವಿರುದ್ಧವಾದದ್ದು. ಭೂತ- ಭವಿಷ್ಯತ್ತುಗಳೊಂದಿಗೂ ಕೊಂಡಿ ಬೆಸೆದುಕೊಳ್ಳುತ್ತಲೇ ತನ್ನ ನಿಕಟ ವರ್ತಮಾನವನ್ನು ಹಿಡಿದುಕೊಡಲು ಅದು ಯತ್ನಿಸುತ್ತದೆ. ಇಂಥ ಚರಿತ್ರೆಗೆ ನಿಶ್ಚಿತ ಗಡಿರೇಖೆ ಗಳಿರುವುದಿಲ್ಲ. ಅದರ ತುದಿಗಳು ತೆರೆದೇ ಇರುವಂಥವು.

### ಅನುಮಾನ

ಆಮೂರರು ಕತೆಗಳನ್ನು ಆಯ್ದುಕೊಂಡು, ಒಗ್ಗೂಡಿಸಿ, ವಿಮರ್ಶಿಸಿರುವಲ್ಲಿ ಈ ಬಗೆಯ ಖಚಿತವಾದ ಮಹಿಳಾ ದೃಷ್ಟಿಕೋನವನ್ನು ಹೊಂದಿದ್ದಾರೆಂಬುದು ಅನುಮಾನಾಸ್ಪದವೇ. ಏಕೆಂದರೆ ಮಹಿಳೆಯರ ಸಾಹಿತ್ಯವು ಪ್ರಧಾನ ವಿಮರ್ಶಾ ಪರಂಪರೆಯಿಂದ ಸಮರ್ಪಕ ಓದು, ವಿಶ್ಲೇಷಣೆ, ಅಭ್ಯಾಸಗಳ ಗಮನವನ್ನು ಪಡೆದುಕೊಂಡಿಲ್ಲ ಎಂಬುದು ಸ್ತ್ರೀವಾದವು ಎತ್ತುವ ಒಂದು ಆಕ್ಷೇಪ ಮಾತ್ರವಲ್ಲ, ಇತ್ತೀಚಿನವರೆಗೂ ಅದೊಂದು ವಾಸ್ತವಾಂಶ ಕೂಡ ಆಗಿತ್ತು. ಗಂಭೀರ ಓದಿಗೆ ಒಳಪಟ್ಟಿದ್ದಲ್ಲಿ ಮಹಿಳಾ ಸಾಹಿತ್ಯದ ಬೆಳವಣಿಗೆ ಇನ್ನಷ್ಟು ಚೆನ್ನಾಗಿ ಆಗಿರುತ್ತಿತ್ತೆಂಬ ಅರಿವನ್ನೂ ಆಮೂರರು ಒಂದೆಡೆ ಪ್ರಕಟಿಸಿದ್ದಾರೆ. ಆದರೆ ಕನ್ನಡ ಕಥಾಸಾಹಿತ್ಯ ಪರಂಪರೆ, ಚರಿತ್ರೆಗಳಿಂದ ಉತ್ತರಗಳನ್ನೂ, ಸಮಜಾಯಿಷಿಗಳನ್ನೂ ದೊರಕಿಸಿಕೊಳ್ಳಲು ಯತ್ನಿಸುತ್ತಾ ಈ ಪ್ರಶ್ನೆಗೆ ಪರಿಹಾರ ಸೂಚಿಸಲು ಬಯಸುತ್ತಾರೆ. ಮಹಿಳೆಯರ ಕತೆಗಳನ್ನು ಕಾಲಕಾಲಕ್ಕೆ ಸಂಕಲಿಸುವ ಒಂದು ಪರಂಪರೆಯೇ ಹಿಂದಿನಿಂದ ಬೆಳೆದುಬಂದಿದೆ. ಈ ಸಂಕಲನಗಳ ಸಂಪಾದಕ ಪುರುಷ ಬರಹಗಾರರು ಪೋಷಕ ವಿಮರ್ಶೆಯನ್ನು ಒದಗಿಸುವಲ್ಲಿ ಹಿಂದೆ ಬಿದ್ದಿಲ್ಲ ಎಂಬುದಕ್ಕೆ ದ.ರಾ. ಬೇಂದ್ರೆ, ದ. ಬಾ. ಕುಲಕರ್ಣಿ, ಚದುರಂಗ, ಬರಗೂರು ರಾಮಚಂದ್ರಪ್ಪ ಮುಂತಾದವರ ಅಭಿಪ್ರಾಯಗಳನ್ನೂ ಉದಾಹರಿಸಿದ್ದಾರೆ.

ತಮಗಿಂತ ಮೊದಲು ಮಹಿಳೆಯರ ಕತೆಗಳನ್ನು ಸಂಕಲಿಸಿದ ಯತ್ನಗಳಾದ 'ರಂಗವಲ್ಲಿ' (೧೯೩೭), 'ಹೆಂಗುಸರ ಕತೆಗಳು' (೧೯೫೦-೫೧), 'ಕಾಮಧೇನು' (೧೯೭೯), 'ಕಥಾಸೌರಭ' (೧೯೮೩), 'ಲೇಖಕಿಯರ ಕಥಾ ಸಂಕಲನ' (೧೯೮೪) ಮತ್ತು 'ಬೆಳ್ಳಿಬಾಗಿನ'

**''ಅವಳ ಕತೆಗಳು'' ಎಂಬ 'ಈ ಶತಮಾನದ ಮಹಿಳೆಯರ ಆಯ್ದ ಇಪ್ಪತ್ತೈದು ಕತೆಗಳ ಸಂಕಲನ'ವನ್ನು ಓದಿದಾಗ, ಕತೆಗಳನ್ನು ಆಯ್ದು, ಸುದೀರ್ಘ ಪ್ರಸ್ತಾವನೆಯನ್ನೂ ಅದಕ್ಕೆ ಒದಗಿಸಿರುವ ಜಿ. ಎಸ್. ಆಮೂರರು ಪ್ರಕಟಿಸಿರುವ ಕೆಲವು ವಿಚಾರಗಳನ್ನು ಕುರಿತಂತೆ ನನ್ನಲ್ಲಿ ಅನೇಕ ಪ್ರಶ್ನೆಗಳೆದ್ದವು.ಈ ಪ್ರಶ್ನೆಗಳು ನಮ್ಮ ನಿಕಟ ವರ್ತಮಾನದ ಸ್ತ್ರೀವಾದಿ ಸಾಂಸ್ಕೃತಿಕ ವಿಮರ್ಶೆಯ ಸಂದರ್ಭದಲ್ಲಿ ಹುಟ್ಟುವಂಥವು.**

(೧೯೯೦) ಎಂಬ ಕೃತಿಗಳನ್ನೂ, ಅವುಗಳ ಸಂಪಾದಕರು ಆಯಾ ಕಾಲದಲ್ಲಿ ತಳೆದಿದ್ದ ತಾತ್ವಿಕ ನಿಲುವುಗಳನ್ನೂ ಆಮೂರರು ಪರಿಚಯಿಸುತ್ತಾರೆ. ಸ್ವತಃ ಇಂತಹ ಸಂಕಲನಕ್ಕಾಗಿ ದುಡಿಯಬೇಕಾದಾಗ ಈ ಬಗೆಯ ಪೂರ್ವಚರಿತ್ರೆಯೊಂದನ್ನು ಗುರುತಿಸಿಕೊಳ್ಳುವುದು ಅವರಿಗೆ ಅವಶ್ಯಕವಾಗಿರುತ್ತದೆ. ಅದೇ ಹೊತ್ತಿನಲ್ಲಿ ಈ ಹಳೆಯ ದಾಖಲೆಗಳೇ ಲಭ್ಯವಿಲ್ಲದ ಹೊಸ ಅನ್ವೇಷಕರಿಗೆ, ಅಧ್ಯಯನಕಾರರಿಗೆ ಕೆಲಮಟ್ಟಿಗೆ ದಾಖಲೆ ಸಾಮಗ್ರಿಯಾಗಿಯೂ ಇದು ಪ್ರಯೋಜನಕಾರಿ.

### ಗಂಭೀರ ವಿಮರ್ಶೆಯ ಕೊರತೆ

ಆದರೆ ಬೇಂದ್ರೆಯವರಿಂದ ರಾಮಚಂದ್ರಪ್ಪನ ವರವರೆಗೂ ಲಭ್ಯವಾಗುವ ವಿಮರ್ಶಕರ ಹೇಳಿಕೆಗಳನ್ನು ಮಹಿಳಾ ಸಾಹಿತ್ಯದ ಗಂಭೀರವಾದ ಓದಿನಿಂದ ಹುಟ್ಟಿದಂಥ ವಿಮರ್ಶೆ ಎಂದು ಹೇಳುವುದು ಕಷ್ಟ. ಏಕೆಂದರೆ ಸಂಕಲನಗಳ ಮುನ್ನುಡಿಗಳು ಸಾಮಾನ್ಯವಾಗಿ ಬೆನ್ನುತಟ್ಟಿ ಪ್ರೋತ್ಸಾಹಿಸುವ ಹಿರಿತನದ ಔದಾರ್ಯದ ಸಂದರ್ಭಗಳಾಗಿರುವುದೇ ಹೆಚ್ಚು. ಅದರಲ್ಲೂ ಮಹಿಳೆಯರ ಬರಹಕ್ಕೆ ಎಂದಾಗ ಪ್ರೋತ್ಸಾಹ ನೀಡುವುದೇ ಮುಖ್ಯವಾಗಿರುವುದುಂಟು. ಸ್ವತಃ ಕತೆಗಾರರಾಗಿದ್ದು, 'ಲೇಖಕಿಯರ ಕಥಾ ಸಂಕಲನ'ದ ಸಂಪಾದಕರೂ ಆದ ವೀಣಾ ಶಾಂತೇಶ್ವರರು ಕೂಡ ತಾವೇ ಸಂಪಾದಿಸಿರುವ ಕತೆಗಳ ಆಯ್ಕೆಯಲ್ಲಿ ಯಾವುದೇ ತಾತ್ವಿಕ ನಿಲುವುಳ್ಳ ಆಯ್ಕೆಗಳಿಗೆ ಬದ್ಧರಾಗುವುದಿಲ್ಲ ಮಾತ್ರವಲ್ಲ, ತಾವು ಸಂಪಾದಿಸು ತ್ತಿರುವ ಮಹಿಳಾ ಬರಹದೊಂದಿಗೆ ಯಾವುದೇ ತಾದಾತ್ಮ್ಯವನ್ನೂ ಇಟ್ಟುಕೊಳ್ಳಬಯಸದೇ ಲೋಪ ದೋಷಗಳನ್ನು ಹೇಳುವ ವಸ್ತುನಿಷ್ಠತೆ ತೋರಿದ್ದಾರೆ. ಆದರೆ ತಾವಾಗಲೀ, ತಮ್ಮ ಮುಂದಿನವರಾಗಲೀ ಹಳೆಯ ಮಹಿಳಾಕತೆಗಾರರಿಂದ ಸತ್ವಯುತವಾಗಿ ಉಪಯುಕ್ತವಾಗಬಲ್ಲ ಏನನ್ನಾದರೂ ಸ್ವೀಕರಿಸಿರ ಬಹುದೇ, ಎಂಬ ಬಗ್ಗೆ ಯಾವುದೇ ಇತ್ಯಾತ್ಮಕ ಯತ್ನವನ್ನೂ ಅವರು ಮಾಡುವುದಿಲ್ಲ. ಹೀಗಾಗಿ ಈ ಹಿಂದಿನ ಮಹಿಳಾ ಕಥಾ ಸಂಕಲನಗಳಲ್ಲಿ ಕಂಡುಬರದೇ ಇರುವ ಮಹಿಳಾ ಕಥಾಸಾಹಿತ್ಯದ ಪರಂಪರೆಯೊಂದನ್ನು ಗುರುತಿಸಿಕೊಡಬೇಕಾದ ಜವಾಬ್ದಾರಿಯೆಲ್ಲ ಇಲ್ಲಿ ಆಮೂರರೇ ವಹಿಸುವಂತಾಗಿದೆ. ಆದರೆ ಆಮೂರರದು ಬಹುಮಟ್ಟಿಗೆ ನವ್ಯಸಾಹಿತ್ಯದೊಂದಿಗೆ ಹುಟ್ಟಿಕೊಂಡ ವಸ್ತುನಿಷ್ಠತೆ, ಕಲಾತ್ಮಕತೆ ಮತ್ತು ಆಧುನಿಕತೆಗಳಿಗೆ ಒತ್ತುಕೊಡುವ ವಿಮರ್ಶಾದೃಷ್ಟಿ. ಅದರೊಂದಿಗೇ ಅವರು ಮಹಿಳಾ ಸಾಹಿತ್ಯವನ್ನೂ ನಿರ್ವಹಿಸಲು ಮುಖ್ಯವಾಗಿ ಯತ್ನಿಸುತ್ತಾರೆ. ಉದಾಹರಣೆಗೆ, ಮಹಿಳಾ ಕತೆಗಾರರು ಬದುಕನ್ನೂ, ಅನುಭವವನ್ನೂ ನೋಡುವ ಬಗೆ ಹೇಗೆ ಬದಲಾಗುತ್ತ ಬಂದಿದೆ ಎಂಬುದಕ್ಕೆ ಅವರು ನಾಲ್ಕು ಹಂತಗಳ ಬೆಳವಣಿಗೆಯನ್ನು ಗುರುತಿಸುತ್ತಾರೆ. ಅವುಗಳನ್ನು ತುಂಬ ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು:

### ಗುರುತಿಸಿರುವ ಬೆಳವಣಿಗೆ

ಅ. ವಾಸ್ತವ ಬದುಕನ್ನು ಅದು ಇರುವಂತೆಯೇ ಚಿತ್ರಿಸುವವರ ಹಂತ; ಶ್ಯಾಮಲಾದೇವಿ, ಕೊಡಗಿನ ಗೌರಮ್ಮ, ರಾಜವಾಡೆ ಮುಂತಾದವರು ಈ ಹಂತದವರು.

ಆ. ಸ್ವಪ್ರಜ್ಞೆಯ ಬೆಳವಣಿಗೆಯಿಂದ ಹುಟ್ಟಿದ ವಿಮರ್ಶೆ, ಪ್ರತಿಭಟನೆಗಳೇ ಪ್ರಧಾನವಾದ ಹಂತ; ತ್ರಿವೇಣಿ, ಅನುಪಮಾ ನಿರಂಜನರು ಇಂಥ ಮಾದರಿಗಳು.

ಇ. ಸ್ವಾತಂತ್ರ್ಯೋತ್ತರ ಕಾಲದ ತೀವ್ರ ವೈಚಾರಿಕತೆ, ಜ್ಞಾನ ವಿಸ್ತರಣೆಯಿಂದ ಹುಟ್ಟಿದ ಸ್ವತ್ವದ ಶೋಧನೆ, ಮನೋವಿಶ್ಲೇಷಣೆ, ಅಂತರ್ಮುಖತೆ ಮುಖ್ಯವಾದ ಹಂತ; ವೀಣಾ, ರಾಜಲಕ್ಷ್ಮಿಯರು ಇದರ ಪ್ರತಿನಿಧಿಗಳು.

ಈ. ಪ್ರಾದೇಶಿಕತೆ, ಉಪಸಾಂಸ್ಕೃತಿಕ ಅನುಭವ ಗಳು, ಹೊಸ ಮಾನವ ಸಂಬಂಧದ ಹುಡುಕಾಟ, ಸಮಾನತಾ ಶೋಧನೆ ಮುಖ್ಯ ಲಕ್ಷಣವಾಗಿರುವ ಸಮಕಾಲೀನ ಹಂತದಲ್ಲಿ ಮಹಿಳಾ ಕತೆಗಾರರ ಸಂಖ್ಯೆ

**ಸಂಭಾಷಣೆ**

ಪೌರ್ಣಮಿಯ ರಾತ್ರಿಯಲ್ಲಿ
ಆಗಸದಲ್ಲಿನ ಚಂದ್ರಮನೆಷ್ಟು
ಚೆಲುವು ? ಎಂದ ಪ್ರಿಯೆಗೆ
ಚೆಲುವಿನ ಖನಿಯಂತಿರುವ
ನಿನ್ನೀ ಬೊಗಸೆ ಕಂಗಳಲಿ
ನನ್ನೀ ಕಂಗಳು ಬೆರೆತಾಗ
ಕಾಣುವಷ್ಟು ಎಂದುತ್ತರಿಸಿದ ಪ್ರಿಯ

ಎನ್. ಶ್ರೀನಿವಾಸ್
ದ್ವಿ.ದ.ಸ. ಗ್ರಾಮೀಣ ಅಭಿವೃದ್ಧಿ ತರಬೇತಿ ಕೇಂದ್ರ,
ವಿ.ಸಿ. ಫಾರಂ, ಮಂಡ್ಯ-೫೭೧ ೪೦೫

ಗಮನಾರ್ಹವಾಗಿ ಹೆಚ್ಚಿದೆ ಎಂಬುದನ್ನು ಆಮೂರರು ಗುರುತಿಸುತ್ತಾರೆ.

ಅವರು ವಿಭಜಿಸಿರುವ ಈ ನಾಲ್ಕು ಹಂತಗಳ ಮುಖ್ಯ ಲಕ್ಷಣಗಳನ್ನು ಸೂಕ್ಷ್ಮವಾಗಿ ನೋಡಿದರೆ ಇವೆಲ್ಲ ನವೋದಯ, ಪ್ರಗತಿಶೀಲ, ನವ್ಯ ಮತ್ತು ನವ್ಯೋತ್ತರ ಎಂಬ ಸ್ಥಾಪಿತ ಸಾಹಿತ್ಯ ಘಟ್ಟಗಳ ವೈಲಕ್ಷಣ್ಯಗಳೇ ಎಂಬುದು ಗಮನಕ್ಕೆ ಬರಬಲ್ಲದು. ಅಂದರೆ ಇಂಥ ಪ್ರಧಾನ ವಾಹಿನಿಯ ಚಾರಿತ್ರಿಕ ಘಟ್ಟಗಳನ್ನು ಹೆಸರಿಲ್ಲದೆ ಹೇಳಿದರೆ ಅದು ಮಹಿಳಾ ಸಾಹಿತ್ಯ ಪರಂಪರೆ ಆಗುತ್ತದೆಯೇ ? ಅಥವಾ ಬೇರೆ ರೀತಿ ಹೇಳುವುದಾದರೆ, ವಾಸ್ತವತೆಯ ಯಥಾವತ್ತಾದ ಪ್ರತಿಪಾದನೆ, ಸ್ವಪ್ರಜ್ಞೆ, ಸಮಾಜ ವಿಮರ್ಶೆ, ಪ್ರತಿಭಟನೆ, ವೈಚಾರಿಕ ತೀವ್ರತೆ, ಸತ್ವದ ಹುಡುಕಾಟ, ಅಂತರ್ಮುಖತೆ ಮುಂತಾದ ಲಕ್ಷಣಗಳು ಮಹಿಳಾ ಸಾಹಿತ್ಯ ಪರಂಪರೆಗಷ್ಟೇ ಹೇಗೆ ವಿಶಿಷ್ಟವಾದವು ಅಥವಾ ಅಲ್ಲ ಎಂದು ಕಂಡುಕೊಳ್ಳಲು ಆಮೂರರು ಯಾವ ಆಧಾರವನ್ನೂ ಒದಗಿಸುವುದಿಲ್ಲ. ಬದಲಾಗಿ ಆಯಾ ಯುಗಧರ್ಮವನ್ನು ಮಹಿಳೆಯರೂ ಬಿಂಬಿಸಿ ದ್ದಾರೆಂಬುದೇ ಇಲ್ಲಿ ಹೊರಡುವ ಅರ್ಥವಾಗುತ್ತದೆ. ವಾಸ್ತವವೆಂದರೆ ಮಹಿಳಾ ಕಥಾಸಾಹಿತ್ಯ ಪರಂಪರೆಯ ಆದ್ಯೆಯರೆಂದು ಹೆಸರಿಸಲಾಗಿರುವ ಶ್ಯಾಮಲಾದೇವಿ, ಸರಸ್ವತಿಬಾಯಿ ರಾಜವಾಡೆಯಂಥವರು ತಮ್ಮ ಕತೆ ಗಳೊಳಗೆ ಎಷ್ಟು ಸೂಕ್ಷ್ಮ ವಿವರಗಳಲ್ಲಿ ಸಂಪ್ರದಾಯ, ಕಂದಾಚಾರ, ಡಾಂಭಿಕ ಧಾರ್ಮಿಕ ಸೋಗು ಮುಂತಾದವುಗಳನ್ನು ವಿಡಂಬಿಸುತ್ತಾರೆ, ವಿಮರ್ಶೆಗೆ ಒಳಗು ಮಾಡುತ್ತಾರೆ ಎಂಬುದರ ನೇರ ಪರಿಚಯ ಇರುವವರಿಗೆ, ಇವರುಗಳನ್ನು ವಾಸ್ತವದ ಯಥಾವತ್ ಚಿತ್ರಣಕಾರರೆಂದು ಭಾವಿಸುವುದೇ ಅಸಾಧ್ಯವಾಗಿ ತೋರಬಲ್ಲದು.

### ಮಹಿಳಾ ಸಾಹಿತ್ಯ ಪರಂಪರೆ

ಆಮೂರರು ಕಟ್ಟಿಕೊಡಲು ಯತ್ನಿಸುವ 'ಮಹಿಳಾ ಕಥಾ ಸಾಹಿತ್ಯ ಪರಂಪರೆ' ಎಂಬುದು ನಿಜವಾಗಿ ಮಹಿಳೆಯರ ಕತೆಗಳ ಮೂಲಕವಾಗಿಯೇ ಕಟ್ಟಲ್ಪಟ್ಟಿ ದೆಯೋ ಇಲ್ಲವೆ ತಮ್ಮ ತಾತ್ವಿಕ ದೃಷ್ಟಿಯಿಂದ ಆಮೂರರು ಮಾಡಿಕೊಂಡ ಆಯ್ಕೆಯಿಂದ ಇದು ಸೃಷ್ಟಿಯಾಗಿ ದೆಯೋ ಎಂಬುದನ್ನು ಸ್ವಲ್ಪ ವಿವರವಾಗಿ ಪರಿಶೀಲಿಸ ಬೇಕಿದೆ. ಸಾಹಿತ್ಯ ಪ್ರಕಾರದ ರೂಪ, ರಾಚನಿಕ ಚೌಕಟ್ಟು, ಕಲಾತ್ಮಕತೆ ಮತ್ತು ಆಧುನಿಕತೆ ಇವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ತಾವು ಈ ಕತೆಗಳನ್ನು ಆಯ್ಕೆ ಮಾಡಿರುವುದಾಗಿ ಆಮೂರರು ಖಚಿತಪಡಿಸುತ್ತಾರೆ:

"ಕತೆ ಸಣ್ಣ ಕತೆಯಾಗಬೇಕಾದರೆ ಅದಕ್ಕೆ ಕಲೆಯ ಲೇಪನ ಅವಶ್ಯವಿದೆ. ಈ ಸಂಸ್ಕಾರ ಎರಡು ವಿಧವಾಗಿ ನಡೆಯಬಲ್ಲದು. ಒಂದು, ಲೇಖಕನ ಆಶಯಗಳು, ಸಾಹಿತ್ಯ ಪ್ರಕಾರಗಳ ನಿಯಮಗಳು ಹಾಗೂ ಸಾಂಸ್ಕೃತಿಕ ಅಂಶಗಳನ್ನು ಒಳಗೊಳ್ಳುವ ಮೂಲಕ ರೂಪ,

ಆಕೃತಿಗಳನ್ನು ಪಡೆಯುವುದರಲ್ಲಿ, ಎರಡು, ಆತ್ಮನಿಷ್ಠ ಅನುಭವ ಹಾಗೂ ಅಭಿವ್ಯಕ್ತಿಯ ನೆಲೆಯಲ್ಲಿ''. (ಪು xiv). ''ಈ ಸಂಗ್ರಹಕ್ಕೆ ಕತೆಗಳನ್ನು ಆಯುವಾಗ ಅವುಗಳ ಕಲಾತ್ಮಕತೆಯನ್ನೇ ನಾನು ಮುಖ್ಯವಾದ ನಿಕಷವನ್ನಾಗಿ ಇಟ್ಟುಕೊಂಡಿದ್ದೇನೆ.'' (ಅದೇ.)

''.... ಭೂತವನ್ನು ಕಡೆಗಣಿಸಿ ವರ್ತಮಾನವನ್ನೇ ಅಧಿಕರಿಸುವುದು. ಅನಿಶ್ಚಿತವಾದ ಭವಿಷ್ಯವನ್ನು ಕಲ್ಪಿಸುವಲ್ಲಿ ಮುಕ್ತದೃಷ್ಟಿಯನ್ನಿಟ್ಟುಕೊಳ್ಳುವುದು ಹಾಗೂ ಸದೈವ ಹೊಸತಿಗಾಗಿ ಹಂಬಲಿಸುವುದು. ಕತೆಗಳನ್ನು ಆರಿಸುವಾಗ ಆಧುನಿಕತೆಯ ಈ ಮೂರು ಮುಖಗಳನ್ನು ನಾನು ಲಕ್ಷ್ಯದಲ್ಲಿಟ್ಟುಕೊಂಡಿದ್ದೇನೆ.'' (ಪು xv).

ಇದು ಕೃತಿಯೊಳಗೇ ಕಲೆ ಸಿದ್ಧಿಸಬೇಕಾದ್ದು ಅವಶ್ಯಕ ಎಂಬ ದೃಷ್ಟಿ. ಆದರೆ ನವ್ಯಯುಗದ ಈ ರಾಚನಿಕವಾದಿ ದೃಷ್ಟಿಗೆ ದಿಢೀರನೆ ನವ್ಯೋತ್ತರ ಚಿಂತನೆಗಳ ಸಾಲಿಗೆ ಸೇರುವಂಥ ಸ್ತ್ರೀವಾದಿ ಚಿಂತನೆಯನ್ನು ಜೋಡಿಸಿಕೊಳ್ಳಲೂ ಲೇಖಕರು ಯತ್ನಿಸುತ್ತಾರೆ. ಅದಕ್ಕೆಂದು ಕನ್ನಡದಲ್ಲಿ ರಾಚನಿಕೋತ್ತರ, ನವ್ಯೋತ್ತರ, ವಸಾಹತೋತ್ತರ ಮುಂತಾದ ತಾತ್ವಿಕತೆಗಳ ತಜ್ಞರೆಂದು ಹೆಸರುಳ್ಳ ಡಿ. ಆರ್. ನಾಗರಾಜ ಅವರ ಕೆಲವು ಅಭಿಪ್ರಾಯಗಳನ್ನು ಆಮೂರರು ಉಲ್ಲೇಖಿಸುವುದು ಮಾತ್ರವಲ್ಲ, ಅಪ್ರಶ್ನಿತವಾಗಿ ಅವುಗಳನ್ನು ಬಳಸಿಕೊಳ್ಳಲೂ ಯತ್ನಿಸುತ್ತಾರೆ. ರಾಚನಿಕವಾದವನ್ನೂ, ರಾಚನಿಕೋತ್ತರ ದೃಷ್ಟಿಗಳನ್ನೂ ಥಳಕು ಹಾಕಲು ಯತ್ನಿಸಿದಲ್ಲಿ, ಅದೂ ಆ ಹೊತ್ತಿಲ್ಲಿ ಸ್ಥಳೀಯ ಸಾಂಸ್ಕೃತಿಕ ಮಾದರಿಗಳು ನಮ್ಮ ಕಣ್ಣೆದುರು ಇರದಿದ್ದರೆ ಏನಾಗುತ್ತದೆ ಎಂಬುದನ್ನು ಇಲ್ಲಿ ಕೊಂಚ ಗಮನಿಸಬೇಕು. ಆಮೂರರ ಮಾತುಗಳಿವು: ''ಸ್ತ್ರೀವಾದಿ ಸಾಹಿತ್ಯದ ಮೂರು ರಚನೆಗಳನ್ನು ಡಾ॥ ಡಿ. ಆರ್. ನಾಗರಾಜ್ ಗುರುತಿಸುತ್ತಾರೆ. (ಅ) ಪುರುಷ ಸ್ಥಿರೀಕರಣದ ರಚನೆಗಳು (ಆ) ಪುರುಷ-ಸ್ತ್ರೀ ಸಮಸ್ಯಾತ್ಮಕ ರಚನೆಗಳು ಹಾಗೂ (ಇ) ಸ್ತ್ರೀ ಸಮೃದ್ಧತೆಯ ರಚನೆಗಳು.'' (ಪು xv).

ಇಲ್ಲಿ ಸ್ತ್ರೀವಾದಿ ಸಾಹಿತ್ಯ ಎಂಬುದನ್ನು ಈವರೆಗೆ ರೂಢಿಸಿರುವಂತೆ Feminist Literature ಎಂಬುದಕ್ಕೆ ಸಂವಾದಿಯಾದದ್ದು ಎಂದು ಭಾವಿಸಿದರೆ, ಸ್ತ್ರೀವಾದಿ ನಿಲುವೇ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳ, ತಾರತಮ್ಯ ನೀತಿಗಳ ವಿರುದ್ಧವಾಗಿ ಬಂಡೇಳುವ ನಿಲುವು. ಇಂಥ ನಿಲುವಿನಿಂದ ಹೊರಡುವ ಸಾಹಿತ್ಯದಲ್ಲಿ ಮೊದಲ ರಚನೆ ''ಪುರುಷ ಸ್ಥಿರೀಕರಣ''ದ ರಚನೆಗಳಾಗಿರುವುದು ಹೇಗೆ ಸಾಧ್ಯ? ಅಂದರೆ ಸ್ತ್ರೀವಾದಿ ಸಾಹಿತ್ಯವು ಲಿಂಗಪ್ರಭೇದದ ವಿರೋಧಿಯಾಗಿದ್ದೂ, ಪುರುಷ ಸ್ಥಿರೀಕರಣಕ್ಕೂ ಯತ್ನಿಸುತ್ತದೆ ಎಂಬುದು ಸ್ವತಃ ವಿರೋಧಿಯಾದ ಚಿಂತನೆಯನ್ನು ಸೂಚಿಸಲಾರದೆ? ಇಲ್ಲಿ ಕಾಣುವ ವೈಚಾರಿಕ ಗೊಂದಲ ಈ ಇಬ್ಬರು ವಿಮರ್ಶಕರ ಪೈಕಿ ಯಾರದು ಎಂಬುದು ಇಲ್ಲಿ ಮುಖ್ಯವಲ್ಲ. ತಜ್ಞತೆಯೂ ತನ್ನ ನಿಕಟ ನಿಜವನ್ನು ಕೂಡ ಕಾಣದೆ ಹೋಗುವುದಕ್ಕೆ ಇದೊಂದು ನಿದರ್ಶನ ಎನ್ನಬೇಕಷ್ಟೇ.

### ಗೊಂದಲದ ಮೂಲಕಾರಣ

ವೈಚಾರಿಕವಾಗಿ ಇಲ್ಲಿ ಹುಟ್ಟುವ ಗೊಂದಲದ ಮೂಲಕಾರಣಕ್ಕೆ ನಾವು ಬೇರೆ ಕಡೆ ಹುಡುಕಬೇಕು. ಆಂಗ್ಲೋ ಅಮೆರಿಕನ್ ಸ್ತ್ರೀವಾದಿ ವಿಮರ್ಶಕರ ನಡುವೆ ಬಹು ಪ್ರಸಿದ್ಧರಾದ ಎಲೈನ್ ಶೋವಾಲ್ಟರ್ ಇಂಗ್ಲಿಷ್ ಮಹಿಳಾ ಸಾಹಿತ್ಯವನ್ನು ಒಟ್ಟಾರೆಯಾಗಿ ಮೂರು ಭಾಗಗಳಾಗಿ ವಿಂಗಡಿಸಿ, ಅವು ಆ ಸಾಹಿತ್ಯ ಪರಂಪರೆಯ ಮೂರು ಮುಖ್ಯ ಹಂತಗಳೆಂದು ಗುರುತಿಸುತ್ತಾರೆ. (ಅ) ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಲ್ಲೇ ಬದುಕುತ್ತಾ ಬರಹದಲ್ಲೂ ಅವುಗಳನ್ನೇ ಅಭಿವ್ಯಕ್ತಿಸುವ ಮೊದಲ ಹಂತ, 'Feminine' ಹಂತ. (ಆ) ಪಿತೃಪ್ರಧಾನ ವ್ಯವಸ್ಥೆಯ ವಿರುದ್ಧವಾದ ಪ್ರತಿಭಟನೆ ತೋರುವ ಜಾಗೃತ ಸ್ತ್ರೀವಾದದ ಹಂತ, Feminist ಹಂತ, ಹಾಗೂ (ಇ) ಮಹಿಳೆ ತನ್ನೊಳಗಿನ ಸತ್ವ, ಸಾಮರ್ಥ್ಯ, ವೈಶಿಷ್ಟ್ಯಗಳನ್ನು ಅಂತರ್ಮುಖಿಯಾಗಿ ಗುರುತಿಸಿ ಕಾಣಿಸುವ Female ಹಂತ. ಡಿ. ಆರ್. ನಾಗರಾಜರು ಶೋವಾಲ್ಟರ್ ಹೇಳಿದ ಈ ರಚನಾ ಮಾದರಿಗಳನ್ನು ತಮ್ಮದೇ ರೀತಿಯಿಂದ ಹೆಸರಿಸಿ ಕನ್ನಡದ ಸಂದರ್ಭಗಳಿಗೆ ಅವುಗಳನ್ನು ಅನ್ವಯಿಸಲು ಹೊರಟಿದ್ದಾರೆಂಬುದು ಸ್ಪಷ್ಟ. ಆದರೆ ಈ ತಾತ್ವಿಕತೆಯನ್ನು ನಾಗರಾಜ್ ಅವರ ಸ್ವೋಪಜ್ಞ ವಿಚಾರಗಳೆಂದು ಕೈಗೆತ್ತಿಕೊಳ್ಳುವ ಆಮೂರರೂ ಅದೇ ರೀತಿ ಅವುಗಳನ್ನು ಬಳಸಲು ಹೊರಟದ್ದು ಕುತೂಹಲಕರ.

ಏಕೆಂದರೆ ಶೋವಾಲ್ಟರ್ ಕಟ್ಟಿಕೊಳ್ಳುವ ವಿಮರ್ಶಾ ಆಕೃತಿ ಆಂಗ್ಲಸಾಹಿತ್ಯದ ಸಂದರ್ಭಕ್ಕೆ ಅನ್ವಯಿಸಬಹುದಾದದ್ದು. ಆ ಬಗ್ಗೆ ಕೂಡ ವಿವಾದಗಳಿವೆ. ಕನ್ನಡದ ಮಹಿಳಾ ಕಥಾ ಪರಂಪರೆಯಲ್ಲಿ ಒಂದು ಮೌಖಿಕ ಜಾನಪದದ ನೆಲೆಯಿದೆ. ಮತ್ತೊಂದು ಆಧುನಿಕ ಮಹಿಳಾ ಕಥಾಸಾಹಿತ್ಯದ ನೆಲೆಯಿದೆ. ಈ ಎರಡರಲ್ಲೂ 'ಪುರುಷ ಸ್ಥಿರೀಕರಣ' (ಹೊನ್ನಮ್ಮನ ಮಾದರಿಯಲ್ಲಿ) ಇದೆ ಎಂದು ಹೇಳಲು ಬರುವುದಿಲ್ಲ. ಹೆಣ್ಣು ಮಕ್ಕಳೇ ಕಟ್ಟಿದ್ದು, ಅವರೇ ಕಥಿಸುವ ಜಾನಪದ ಕಥೆಗಳಲ್ಲಿ, ಸ್ಥಾಪಿತ ಪಿತೃಪ್ರಧಾನ ವ್ಯವಸ್ಥೆಯ ರೂಢಿಗತ ಸ್ತ್ರೀ ಮೌಲ್ಯಗಳನ್ನು ಬುಡಮೇಲಾಗಿಸುವ ತಂತ್ರಗಳೂ ಪರ್ಯಾಯ ಮೌಲ್ಯಗಳ ಸಾಧ್ಯತೆಗಳೂ ಸೃಷ್ಟಿಯಾಗುವ ಬಗೆಯನ್ನು ಎ. ಕೆ. ರಾಮಾನುಜನ್ ತೋರಿಸಿಕೊಟ್ಟಿದ್ದಾರೆ. (ನೋಡಿ: Towards a Counter System : Women's Tales in GENDER, GENRE AND POWER IN SOUTH ASIAN EXPRESSIVE TRADITIONS. DELHI-1991. pp. 33-55) ಕನ್ನಡದ ನಿರಕ್ಷರಸ್ಥ ಕೆಳಸ್ತರದ ಮಹಿಳೆಯರು ಕಟ್ಟುವ ಈ ಕತೆಗಳೂ ಕಲ್ಪನೆಯ ಮೂಲಕ ವಾಸ್ತವ ಬದುಕಿನ ಪುರುಷರ ನಿರ್ಬಂಧಗಳನ್ನು ಅತಿಕ್ರಮಿಸುವುದರತ್ತ ಸೂಚನೆ ಇಲ್ಲಿದೆ.

ಇನ್ನು ಆಧುನಿಕ ಯುಗದ ಮಹಿಳಾ ಕಥಾ ಸಾಹಿತ್ಯ ಎನ್ನುವುದು ಭಾರತದಲ್ಲಿ ಸ್ತ್ರೀ ಶಿಕ್ಷಣ, ಸ್ತ್ರೀ ಜಾಗೃತಿ, ಸ್ತ್ರೀ ಸುಧಾರಣೆ, ಪ್ರಗತಿಗಳೆಲ್ಲದರ ಪ್ರಭಾವದಿಂದಲೇ ಹುಟ್ಟಿದ್ದು. ಹೀಗಾಗಿ ತಿರುಮಲಾಂಬಾ, ಕಲ್ಯಾಣಮ್ಮ ಕೂಡ ಅತ್ಯಂತ ಸಾಂಪ್ರದಾಯಿಕ ಸ್ತ್ರೀ ಮೌಲ್ಯಗಳನ್ನೇ ಪ್ರತಿಪಾದಿಸುವವರಂತೆ ಕೆಲವು ಕಡೆ ತೋರಿದರೂ, ಮತ್ತೆ ಕೆಲವು ಕಡೆ ಮಹಿಳೆಯರು ಎಲ್ಲದಕ್ಕೂ ಪುರುಷಾವಲಂಬಿ ಪರಪುಟ್ಟಗಳಾಗಿರುವ ಸ್ಥಿತಿಯನ್ನು ಬಿಟ್ಟು, ತಮ್ಮತನ, ತಮ್ಮ ಬುದ್ಧಿ ವಿವೇಕಗಳನ್ನು ಬೆಳೆಸಿಕೊಳ್ಳುವತ್ತ ಎಚ್ಚರ ಮೂಡಿಸಲೂ ಯತ್ನಿಸಿದ್ದಾರೆ. ಹಾಗಿರುವಾಗ ಆ ಆದ್ಯರ ಬರಹಗಳ ಇಂಥ ಸಂಕೀರ್ಣವೂ ಸಂದಿಗ್ಧವೂ ಆದ ನೆಲೆಗಳನ್ನು ಉದ್ದೇಶಪೂರ್ವಕವಾಗಿಯೋ, ಅಲ್ಲದೆಯೋ ನಿರಾಕರಿಸಿ, ಇಂಥವರನ್ನು 'ಪುರುಷ ಸ್ಥಿರೀಕರಣ'ಕ್ಕೆ ಮಾದರಿಗಳೆಂದು ಕರೆದುಬಿಡುವ ಯತ್ನ ವಾಸ್ತವದ ಸರಳೀಕರಣವಷ್ಟೇ ಆಗಬಲ್ಲದು. ಈ ಶತಮಾನದುದ್ದಕ್ಕೂ ಕ್ರಮ ಕ್ರಮವಾಗಿ ಸ್ತ್ರೀಯರ ಸ್ವತ್ವದ ಅರಿವು ಬೆಳೆಯುತ್ತ ಬಂದಿದೆ ಎಂಬುದನ್ನು ನೋಡದೆಯೇ, ಆಮೂರರು ಈ ರಚನೆಗಳ ಬಹುಪಾಲು ಸ್ತ್ರೀ-ಪುರುಷ ಸಂಬಂಧಗಳ ಸಮಸ್ಯೆಗಳಿಗೇ ಸೀಮಿತವೆಂದೂ ಇವುಗಳಲ್ಲಿ ಕೆಲವು ಪಿತೃಪ್ರಾಧಾನ್ಯವನ್ನು ಪ್ರತಿಭಟಿಸಿದ್ದರೆ, ಮತ್ತೆ ಕೆಲವು ಪುರುಷ ನಿರ್ಮಿತ ಸ್ತ್ರೀ ಮಾದರಿಗಳನ್ನು ನಿರಾಕರಿಸುವ ರೀತಿಯವೆಂದೂ ತೀರ್ಮಾನಕ್ಕೆ ಬರುತ್ತಾರೆ. (ಪು. xv).

ಆದರೆ ಕಳೆದ ಎರಡು ದಶಕಗಳಲ್ಲಿ ನಡೆದಂಥ ಸ್ತ್ರೀವಾದಿ ವಿಮರ್ಶೆಗಳು, ಮಹಿಳಾ ಸಾಹಿತ್ಯದ ಅಧ್ಯಯನಗಳು, ಮಹಿಳೆಯರ ರಚನೆಗಳು, ಪಿತೃಪ್ರಧಾನ ಸಂಸ್ಕೃತಿಯ ಒಳಗೇ ಉಪಸಾಂಸ್ಕೃತಿಕವಾಗಿ ಅರಳುತ್ತ ಬಂದವು. ಅಲ್ಲದೆ, ಅವುಗಳಲ್ಲಿ ತೆರೆದುಕೊಳ್ಳುವ ಸ್ತ್ರೀಲೋಕವು ಪುರುಷಪರ, ವಿರೋಧಿ, ಸಹಕಾರಿ, ಸ್ವಾಯತ್ತ ಮುಂತಾದ ಬಹುಸ್ತರೀಯ ಲಕ್ಷಣಗಳನ್ನು ಪ್ರಕಟಿಸುವುದನ್ನೂ ತೋರಿಸಿಕೊಟ್ಟಿವೆ. ಈ ಹಿನ್ನೆಲೆಯಿಂದ ನೋಡಿದಾಗ ಸ್ತ್ರೀವಾದಿ ಸಂಸ್ಕೃತಿ ವಿಮರ್ಶೆಯನ್ನು ಒಳಗಿನಿಂದ ಮಾಡದೆ ಅವರ ಮಿತಿಗಳ ಬಗ್ಗೆ ಮಾತ್ರ ಚಿಂತಿಸುವ ಪ್ರಕ್ರಿಯೆಯಿಂದ ಮೂಡಿಬರುವ ''ಮಹಿಳಾ ಕಥಾಸಾಹಿತ್ಯ ಪರಂಪರೆ''ಯು ಎಷ್ಟರ ಮಟ್ಟಿಗೆ ನಿಜವಾಗಿ ಮಹಿಳೆಯರನ್ನು ಪ್ರತಿನಿಧಿಸಬಲ್ಲದು ಎಂಬುದನ್ನು ಬರುವ ಕಾಲವೇ ನಿರ್ಧರಿಸಬೇಕು.

**ಅವಳ ಕತೆಗಳು**

ಆಯ್ಕೆ ಮತ್ತು ಪ್ರಸ್ತಾವನೆ : ಜಿ. ಎಸ್. ಆಮೂರ.
**ಪ್ರಿಸಂ ಬುಕ್ಸ್ ಪ್ರೈ.ಲಿ.**, ಬೆಂಗಳೂರು.
ಪುಟ : xxx + ೧೮೭ ಬೆಲೆ ರೂ. ೧೫೦.

**ಡಾ॥ ಬಿ. ಎನ್. ಸುಮಿತ್ರಾಬಾಯಿ**
ನಂ. ೫೦೯, ೧೬ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ,
ಶ್ರೀನಗರ, ಬೆಂಗಳೂರು - ೫೬೦ ೦೫೦

## ಪುಸ್ತಕ ಬಿಡುಗಡೆ

ಮಹಾರಾಷ್ಟ್ರದ ಆನಂದವನದಲ್ಲಿ ಜರುಗಿದ ಆನಂದ ಮೇಳದಲ್ಲಿ ನವಕರ್ನಾಟಕದ ಪ್ರಕಟಣೆಯಾದ 'ಬಾಬಾ ಆಮಟೆ : ಜೀವನ ಸಾಧನೆ' ಅನುವಾದ ಕೃತಿಯನ್ನು ಬಿಡುಗಡೆ ಮಾಡಲಾಯಿತು.



ಚಿತ್ರದಲ್ಲಿ : ಕೃತಿಯ ಅನುವಾದಕರಾದ ಶ್ರೀ ವಿರೂಪಾಕ್ಷ ಕುಲಕರ್ಣಿ ಶ್ರೀಮತಿ ಸಾಧನಾ ಆಮಟೆ ಮತ್ತು ಶ್ರೀ ಬಾಬಾ ಆಮಟೆ



ಕರ್ನಾಟಕ ನಾಟಕ ಅಕಾಡೆಮಿ ಮತ್ತು ಭಾರತ್ ಯಾತ್ರಾ ಕೇಂದ್ರ ಇವು ಕಾಲೇಜು ರಂಗ ಚಟುವಟಿಕೆಗಳಿಗೋಸ್ಕರ ನೀಡುವ 'ಸಂಸ ರಂಗ ಪ್ರಶಸ್ತಿ' ಈ ವರ್ಷ, 'ಹೊಸತು' ಓತ್ಸೈಷಿಗಳೂ, ಸಂಸ್ಕೃತ ಪ್ರಾಧ್ಯಾಪಕರೂ ಆದ ಡಾ॥ ಜಿ. ಶ್ರೀನಿವಾಸಮೂರ್ತಿ ಅವರಿಗೆ ಲಭಿಸಿದೆ. ಶ್ರೀಯುತರಿಗೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ.

## ಅತ್ಯುತ್ತಮ ಪುಸ್ತಕ ಬಹುಮಾನ





ನವದೆಹಲಿಯಲ್ಲಿರುವ ಭಾರತೀಯ ಪ್ರಕಾಶಕರ ಒಕ್ಕೂಟವು ಏರ್ಪಡಿಸಿದ್ದ '೨೦೦೦ದ ಅತ್ಯುತ್ತಮ ವಿನ್ಯಾಸ ಸ್ಪರ್ಧೆ'ಯಲ್ಲಿ ನವಕರ್ನಾಟಕ ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿರುವ 'ನವಕರ್ನಾಟಕ ಜ್ಞಾನ ವಿಜ್ಞಾನ ಕೋಶ' ವೈಜ್ಞಾನಿಕ / ವೈದ್ಯಕೀಯ ವಿಭಾಗದಲ್ಲಿ ಪ್ರಾದೇಶಿಕ ಭಾಷೆಗಳ ಕೃತಿಗಳ ಪೈಕಿ ವಿಷಯ, ವಿನ್ಯಾಸ, ಮುದ್ರಣಕ್ಕಾಗಿ ಮೊದಲನೆಯ ಬಹುಮಾನ ಗಳಿಸಿದೆ. ಫೆಬ್ರುವರಿ ೧೧ ರಂದು ದೆಹಲಿಯಲ್ಲಿ ನಡೆದ ಸಮಾರಂಭದಲ್ಲಿ ಬಹುಮಾನ ವಿತರಣೆ ಮಾಡಲಾಯಿತು. ಮೊದಲ ಮುದ್ರಣ ಪ್ರಕಟವಾದ ಹನ್ನೊಂದು ತಿಂಗಳಿಗೇ ಪ್ರತಿಗಳು ಮುಗಿದು, ಎರಡನೇ ಆವೃತ್ತಿಯೂ ಪ್ರಕಟ ವಾಗಿರುವುದು ಇದರ ಮತ್ತೊಂದು ವೈಶಿಷ್ಟ್ಯ. ಈ ಪ್ರಯತ್ನದಲ್ಲಿ ಸಹಕರಿಸಿದ ಎಲ್ಲರಿಗೆ, ಹಾಗೇ ವಿಜ್ಞಾನಾಸಕ್ತ ಕನ್ನಡ ಓದುಗರಿಗೆ ಸಂದ ಗೌರವ ಇದು.





## 'ಹೊಸತು' ಬಳಗದ ಸಭೆ






ಮೈಸೂರಿನ ಇನ್‌ಸ್ಟಿಟ್ಯೂಷನ್ ಆಫ್ ಎಂಜನಿಯರ್ಸ್ ಸಭಾಂಗಣದಲ್ಲಿ ಫೆಬ್ರುವರಿ ೬ ಭಾನುವಾರ 'ಹೊಸತು' ಬಳಗದ ಸಭೆ ಜರುಗಿತು. ಖ್ಯಾತ ಅಂಕಣಕಾರ ಶ್ರೀ ಎಚ್ಚೆಸ್ಕೆಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮೈಸೂರಿನ ಉತ್ಸಾಹಿ ಓದುಗರು, ಲೇಖಕರು, ಪತ್ರಕರ್ತರು, ಪ್ರಕಾಶಕರು, ವಿದ್ಯಾರ್ಥಿಗಳು ಭಾಗವಹಿಸಿ 'ಹೊಸತು' ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದರು. ಇಂಥ ಪತ್ರಿಕೆ ಈ ಸಂದರ್ಭದಲ್ಲಿ ಅಗತ್ಯವಿದೆ ಎಂಬುದು ಎಲ್ಲರಿಗೂ ಮನವರಿಕೆಯಾಗಿತ್ತು. ಪತ್ರಿಕೆ ಹೇಗಿದ್ದರೆ ಇನ್ನೂ ಹೆಚ್ಚು ಓದುಗರನ್ನು ತಲುಪಬಹುದು ಎಂಬ ಬಗ್ಗೆ ಸಲಹೆಗಳನ್ನು ನೀಡಿದರು. ವಿಷಯ ಗಂಭೀರವಾಯಿತೆಂದು, ಭಾಷೆ ಸರಳವಾಗಿರಬೇಕೆಂದು, ವಿನ್ಯಾಸದ ಬಗ್ಗೆ ಹೆಚ್ಚು ಗಮನ ಹರಿಸಬೇಕೆಂದು ಓದುಗರು ಸೂಚಿಸಿದರು. ಈ ಪತ್ರಿಕೆ ಯಾವುದೋ ಒಂದು ಪಂಥಕ್ಕೆ ಸೇರಿದ ಪತ್ರಿಕೆಯಂತೆ ಕಾಣಿಸುತ್ತದೆ ಎಂದೂ ಅಭಿಪ್ರಾಯ ಸೂಚಿಸಿದವರಿದ್ದರು. ಪತ್ರಿಕೆಯ ಬಗ್ಗೆ ಹೊಗಳಿಕೆಯಂತೆಯೇ ಲೋಪದೋಷಗಳ ಬಗ್ಗೆಯೂ ವಿಮರ್ಶೆ-ಟೀಕೆಗಳು ವ್ಯಕ್ತಪಟ್ಟವು. ಸಂಪಾದಕ ಡಾ॥ ಜಿ. ರಾಮಕೃಷ್ಣ ಅವರು ಓದುಗರ ಅಭಿಪ್ರಾಯಗಳನ್ನು ಗಮನಕ್ಕೆ ತಂದುಕೊಂಡುದಲ್ಲದೆ ಪತ್ರಿಕೆಯ ಮುನ್ನಡೆಗೆ ಓದುಗರ, ಲೇಖಕರ ಸಹಕಾರ ಕೋರಿದರು.

# 'ನೀರು' ಚಿತ್ರಕ್ಕೆ ಕಲ್ಲು

ಪ್ರೊ॥ ಜಿ. ಕೆ. ಗೋವಿಂದ ರಾವ್

ದಿನಗಳು ಕಳೆಯುತ್ತಿದ್ದಂತೆ ಒಂದೊಂದಾಗಿ ನಮ್ಮ ಕೇಂದ್ರ ಸರಕಾರದ ಅಪ್ರಕಟಿತ ಕಾರ್ಯಕ್ರಮಗಳೆಲ್ಲಾ ಹೊರಬರುತ್ತಿವೆ. ನೂರಾರು ವರ್ಷಗಳಿಂದ ಒಳಗೇ ಕುದಿಯುತ್ತಿದ್ದ ಅಸಹನೆ, ದ್ವೇಷ, ಹಿಂಸಾ ಮನೋಭಾವಗಳು ಮಾತಿನಲ್ಲಿ, ಕೃತಿಯಲ್ಲಿ ಅಭಿವ್ಯಕ್ತಗೊಳ್ಳುತ್ತಿವೆ. ತಾವು ತಮ್ಮ ಬಲದ ಮೇಲೆಯೇ ಸರಕಾರ ರಚಿಸಲು ಸಾಧ್ಯವಿಲ್ಲ ಎಂಬ ಪ್ರಜ್ಞೆ ಇದ್ದೂ ಬಿಜೆಪಿ ಪರಿವಾರ ಈ ಠೇಂಕಾರ ಪ್ರದರ್ಶಿಸುತ್ತಿದ್ದಾರೆ. ನಾಳೆ ಆ ಪಕ್ಷಕ್ಕೇ ನಿಚ್ಚಳ ಬಹುಮತ ಬಂದು ಸರಕಾರ ಸ್ಥಾಪಿಸುವಂತಾದರೆ ಏನಾಗಬಹುದು ಎಂದು ಊಹಿಸಲೂ ಆಗದಷ್ಟು ಭಯಂಕರ ಕಲ್ಪನೆಗಳು ತಲ್ಲಣಗೊಳಿಸುತ್ತವೆ.

ಆರ್. ಎಸ್. ಎಸ್. ಹೆಚ್ಚು ಹೆಚ್ಚು ಪ್ರಕಟವಾಗಿ ತನ್ನ ಹಸ್ತಕ್ಷೇಪ ಆರಂಭಿಸಿದೆ. ರಾಜಕೀಯವಾಗಿ ಯಾವ ರೀತಿಯಲ್ಲೂ ಜನಗಳಿಗೆ ಉತ್ತರಿಸಬೇಕಿಲ್ಲದ ಈ ಸಂಸ್ಥೆಯ ಕಪಿಮುಷ್ಟಿಯಲ್ಲಿ ಸಿಲುಕಿ ಕೊಂಡು, ಅಥವಾ ಅದಕ್ಕೂ ಹೆಚ್ಚಿನ ಸಾಧ್ಯತೆ ಎಂದರೆ ಈ ಸಂಸ್ಥೆಯ ಆಪ್ಯಾಯ ಮಾನ ಅಪ್ಪುಗೆಯಲ್ಲಿ ಸಂಭ್ರಮಿಸುತ್ತ, ಬಿ.ಜೆ.ಪಿ. ಪಕ್ಷ ತನ್ನ ಕರಾಳ ಕೃತ್ಯಗಳಲ್ಲಿ ಎಗ್ಗಿಲ್ಲದೆ ತೊಡಗಿದೆ.

ಇತ್ತೀಚೆಗಷ್ಟೇ - ಬಹುಶಃ ಇನ್ನೂ ಒಂದು ವರ್ಷವೂ ಕಳೆದಿರಲಿಕ್ಕಿಲ್ಲ - ಶಿವಸೇನೆ ಎಂಬ ಆರ್. ಎಸ್. ಎಸ್. ಸೋದರ ಸಂಬಂಧಿ ರಾಜಕೀಯ ಸಾಮಾಜಿಕ ಗೂಂಡಾಗಳ ಪಕ್ಷ ಮುಂಬೈನಲ್ಲಿ ನಟ ದಿಲೀಪ್ ಕುಮಾರ್ ತನ್ನ ದೇಶಭಕ್ತಿಯನ್ನು ಸಾಬೀತುಗೊಳಿಸ ಬೇಕೆಂದು ಹಟ ಹಿಡಿದು ಲಜ್ಜಾಸ್ಪದ ಪ್ರದರ್ಶನಗಳಲ್ಲಿ ತೊಡಗಿದ್ದು ನಾವು ಮರೆಯಲು ಸಾಧ್ಯವಿಲ್ಲ. ೭೦ ವರ್ಷಕ್ಕೂ ಮೀರಿದ ಹಿರಿಯ, ಗೌರವಾನ್ವಿತ ನಟ ದಿಲೀಪ್ ಕುಮಾರ್. ಆತನಿಗೆ ಪಾಕಿಸ್ತಾನ ಸರಕಾರ ತನ್ನ ಅತ್ಯುನ್ನತ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಆತ ಮುಸ್ಲಿಮನೆಂಬ ಕಾರಣಕ್ಕೆ ಈ ಪ್ರಶಸ್ತಿಯನ್ನು ಆತ ಸ್ವೀಕರಿಸಿದುದರ ಕುರಿತಾಗಿ ಖಂಡನೆ ಹಾಗೂ ಗಲಭೆಗಳಲ್ಲಿ ತೊಡಗಿದ ಶಿವಸೇನೆ ಆತನ ಪ್ರಶಸ್ತಿಯನ್ನು ಹಿಂತಿರುಗಿಸಿದರೆ ಮಾತ್ರ ನಿಜ ದೇಶಭಕ್ತ ಎಂದು ಒಪ್ಪಿಕೊಳ್ಳಲು ಸಾಧ್ಯ ಎಂದು ಚೀರಾಡಿತು. ಅಂದರೆ ಈ ದೇಶಕ್ಕೆ ನಿಷ್ಠರು ಯಾರು ಅನಿಷ್ಠರು ಯಾರು ಎಂಬುದನ್ನು ತೀರ್ಮಾನಿಸುವ ಯಜಮಾನಿಕೆಯನ್ನು ಈ ಶಕ್ತಿಗಳು ತಮ್ಮ ಮೇಲೆ ತಾವೇ ಹೊರೆಸಿಕೊಂಡು ಬೀಗಬಹುದು ಎಂದು ಭಾವಿಸಿದಂತಿದೆ. ಈ ಸಂದರ್ಭದಲ್ಲಿ ದಿಲೀಪ್ ಕುಮಾರ್ - ಆತ ಹಾಗೆ ಮಾಡುವ ಅವಶ್ಯಕತೆ ಒಂದು ಎಳ್ಳು ಕಾಳಿನಷ್ಟೂ ಕೂಡ ಇಲ್ಲದಿದ್ದಾಗ್ಯೂ - ಸ್ವತಃ ಪ್ರಧಾನಮಂತ್ರಿಯವರನ್ನು ಭೇಟಿಯಾಗಿ ಈ ವಿಷಯ ಚರ್ಚಿಸಿದಾಗ ಅವರು ಮಗುಮ್ಮಾಗಿ – ವಾಜಪೇಯಿಯಂಥ 'ಅಜಾತ ಶತ್ರು' ಜಾಣನಿಗೆ ಮಾತ್ರ ಸಾಧ್ಯವಾಗುವಂಥ ರೀತಿಯಲ್ಲಿ – 'ಪ್ರಶಸ್ತಿ ಉಳಿಸಿ ಕೊಳ್ಳುವುದು, ಬಿಡುವುದು ನಿಮ್ಮ ನಿರ್ಧಾರಕ್ಕೆ ಬಿಟ್ಟದ್ದು' ಎಂದಂದು ತಮ್ಮ ಸಮ್ಮೋಹಕ ಮುಗುಳ್ನಗೆಯನ್ನು ಬೀರಿ ಕಳಿಸಿಕೊಟ್ಟರು. ವಾಜಪೇಯಿ ಕವಿ ಎಂಬ ಮಾತು ಆಗಾಗ ಕೇಳಿಬರುತ್ತಿದೆ. ಒಬ್ಬ ಕವಿ ಒಬ್ಬ ಕಲಾವಿದನಿಗೆ ತೋರುವ ವಿಶ್ವಾಸ, ಗೌರವಗಳು ಈ ಬಗೆಯದೆ? ವಾಜಪೇಯಿ ಒಬ್ಬ ರಾಜಕಾರಣಿ; ಆತನಿಗೆ ನೂರಾರು ಒತ್ತಡಗಳು, ಬಲವಂತಗಳು ಇರುತ್ತವೆ ಎಂದು ಕೊಂಚ ವಿನಾಯತಿ ತೋರಿಸೋಣ ಎಂದುಕೊಂಡು, ನಮ್ಮ ಕಲಾವಿದರು ಆ ಸಂದರ್ಭದಲ್ಲಿ ಏನು ಮಾಡಿದರು ಎಂದು ನೋಡೋಣ. ೨೦ನೇ ಶತಮಾನದ ಶ್ರೇಷ್ಠ ಕಲಾವಿದ ಎಂದು ಬಿ.ಬಿ.ಸಿ. ಪಟ್ಟ ಕಟ್ಟಿದೆ ಅಮಿತಾಭ್ ಬಚ್ಚನ್ ಎಂಬ ನಟನಿಗೆ. ಈ ಆರು ಅಡಿಗೂ ಮಿಗಿಲಾಗಿ ಎತ್ತರಕ್ಕಿರುವ ವ್ಯಕ್ತಿ ದಿಲೀಪ್ ಕುಮಾರ್ ಪ್ರಸಂಗದಲ್ಲಿ ಅತ್ಯಂತ ಕುಬ್ಜನಾಗಿ, ಕೀಳಾಗಿ, ಸ್ವಾರ್ಥಿಯಾಗಿ, ಹೇಡಿಯಾಗಿ ನಡೆದುಕೊಂಡ. 'ಈ ಘಟನೆಯ ಕುರಿತು ನಿಮ್ಮ ಅಭಿಪ್ರಾಯವೇನು' ಎಂದು ಕೇಳಿದ ಪತ್ರಿಕಾ ಪ್ರತಿನಿಧಿಗಳಿಗೆ "ಈ ಇಡೀ ಪ್ರಸಂಗ ಕೇವಲ ದಿಲೀಪ್ ಕುಮಾರ್ ಹಾಗೂ ಶಿವಸೇನೆಯ ಮಧ್ಯೆ ಇತ್ಯರ್ಥವಾಗಬೇಕಾದದ್ದು" ಎಂದು ಕೈ ಝಾಡಿಸಿಕೊಂಡ.



ಶಬನಾ, ದೀಪಾ ಮೆಹ್ತಾ, ನಂದಿತಾ ದಾಸ್

ಆರ್. ಎಸ್. ಎಸ್., ಶಿವಸೇನೆ ಮತ್ತು ಅಂಥ ಕೋಮುಶಕ್ತಿಗಳು, ಫ್ಯಾಸಿಸ್ಟ್ ಶಕ್ತಿಗಳು ತಲೆ ಎತ್ತುವುದಕ್ಕೆ ಹಾಗೂ ಬೆಳೆದು ಭಯಾನಕವಾಗುವುದಕ್ಕೆ ನೀರೆರೆಯು ವವರು ಬುದ್ಧಿವಂತರೆನಿಸಿಕೊಂಡ, ಕಾನ್ವೆಂಟ್ ಶಿಕ್ಷಣ ಪಡೆದು ಬಹು ಸುಶಿಕ್ಷಿತರಾದ, ಸಂಭಾವಿತರಾದ ಮತ್ತು ಇದಕ್ಕೆಲ್ಲಕ್ಕಿಂತ ಹೆಚ್ಚಿಗೆ ಕಲಾವಿದರು ಎನಿಸಿಕೊಂಡ ಅಮಿತಾಭ್‌ರಂಥವರು ಎಂದು ನಾವು ಮರೆಯಬಾರದು.

ಈಗ ಮತ್ತೆ ಅಂಥದೇ ಮತ್ತೊಂದು ಸಂದರ್ಭ ಸೃಷ್ಟಿಯಾಗಿದೆ. ಇಂಥ ಸಂದರ್ಭಗಳು ಇನ್ನು ಮುಂದೆ ಸೃಷ್ಟಿಯಾಗುತ್ತಲೇ ಇರುತ್ತವೆ. ಸವಾಲು ಇರುವುದು ನಾವು ಗಳು – ಸಾಮಾನ್ಯರು, ನಾಗರಿಕರು, ಪ್ರಜಾಪ್ರಭುತ್ವದ ಮೌಲ್ಯಗಳಲ್ಲಿ ನಂಬಿಕೆ ಇರುವವರು ಎಂದುಕೊಂಡವರು– ಹೇಗೆ ಪ್ರತಿಕ್ರಿಯಿಸುತ್ತೇವೆ, ಹೇಗೆ ಎದುರಿಸುತ್ತೇವೆ ಎಂಬುದರಲ್ಲಿದೆ. ೫೦ ವರ್ಷಗಳ ನಮ್ಮ ಜಾಣಮೌನಗಳು, ನಮ್ಮ ಸ್ವಾರ್ಥಗಳು, ನಮ್ಮ ಮಾನಸಿಕ ಅಸ್ಥಿರತೆಯ ಸ್ಥಿತಿ ಈಗಾಗಲೇ ಸಾಕಷ್ಟು ಅನಾಹುತವನ್ನು ಸೃಷ್ಟಿಸಿಯಾಗಿದೆ. ಸದ್ಯದ ಸ್ಥಿತಿ ಹೇಗಾಗಿದೆ ಎಂದರೆ ಈ ಅನಾಹುತಗಳ ಜೊತೆಗೂ ಅಪ್ರಜ್ಞಾಪೂರ್ವಕವಾಗಿ ನಾವು ಶಾಮೀಲಾಗಿ ಬಿಡುತ್ತಿದ್ದೇವೆಯೋ ಏನೋ ಎಂಬ ಅನುಮಾನ ಹುಟ್ಟಿಸುವಂಥದಾಗಿದೆ. ಮತ್ತೆ ಅದಕ್ಕೂ ಹೆಚ್ಚಿನ ಅಪಾಯದ ಸೂಚನೆ ಎಂದರೆ ಈ ಬೆಳವಣಿಗೆಗಳೆಲ್ಲ ಸಹಜ ಮತ್ತು ಸೂಕ್ತ ಎಂದು ನಮ್ಮ ತಾರ್ಕಿಕ ಮನಸ್ಸು ನಮ್ಮನ್ನು ಈ ವಿಷವೃತ್ತದತ್ತ ಸ್ವಸಂತೋಷದಿಂದ ನಡೆದು ಹೋಗುವಂತೆ ಆಕರ್ಷಣೆ ಗಳನ್ನು ಒಡ್ಡುತ್ತಿದೆ.

ದೀಪಾ ಮೆಹ್ತಾ ಹಿಂದೆ 'ಫೈರ್' ಚಿತ್ರ ನಿರ್ದೇಶಿಸಿ ಪ್ರದರ್ಶಿಸಿದರು. ಆಗ ಅಸಹನೆಯ ಭುಗಿಲೆಬ್ಬಿಸಿದವರು ಈ ಮೂಲಭೂತವಾದೀ, 'ಭಾರತೀಯ ಸಂಸ್ಕೃತಿ'ಯ ಯಜಮಾನರೆಂದು ಭಾವಿಸಿದ ಶಿವಸೇನೆ, ಆರ್.ಎಸ್.ಎಸ್. ತಂಡಗಳು.

ಈಗ ದೀಪಾ ಮೆಹ್ತಾ 'ವಾಟರ್' ಎಂಬ ಚಿತ್ರ ತಯಾರುಮಾಡುವ ಹವಣಿಕೆಯಲ್ಲಿದ್ದು ವಾರಣಾಸಿಯಲ್ಲಿ ಚಿತ್ರೀಕರಣಕ್ಕೆ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಂತೆ, ಈ 'ವಾಟರ್'ಗೆ ಬೆಂಕಿ ಹಚ್ಚುವ ಯತ್ನ ನಡೆಸಿ, ಸದ್ಯಕ್ಕಂತೂ ಉತ್ತರ ಪ್ರದೇಶದ ಸರಕಾರದ ಆಶೀರ್ವಾದದ ಬೆಂಬಲದಿಂದ, ಸಫಲವಾಗಿವೆ ಇವೇ ಕೋಮುಶಕ್ತಿಗಳು.

ಈ 'ವಾಟರ್' ಚಿತ್ರ ಇಷ್ಟು ಕೋಲಾಹಲವೆಬ್ಬಿಸಲು ಕಾರಣವಾದರೂ ಏನು ?

ಸಾವಿರಾರು ವರ್ಷಗಳಿಂದ ಶೋಷಣೆಗಳಿಗೊಳಗಾದ ಹಿಂದೂ ವಿಧವೆಯರ ಕುರಿತಾದ ವಸ್ತುವನ್ನುಳ್ಳದ್ದು ಈ ಕತೆ – ಅಷ್ಟೇ ಕಾರಣ.

ಚಿಕ್ಕ ಹುಡುಗರಿಂದ ಹಿಡಿದು ಅತ್ಯಂತ ಮುದಿವಯಸ್ಸಿನ ಹೆಣ್ಣುಮಕ್ಕಳವರೆಗೆ ಅವರು ವಿಧವೆಯರು ಎಂಬ ಒಂದು ಕಾರಣಕ್ಕೆ ಅವರನ್ನು ನಡೆಸಿಕೊಳ್ಳುತ್ತಿರುವ ರೀತಿ, ಅವರ ಮೇಲೆ ಹೇರಲ್ಪಟ್ಟ ಬದುಕಿನ ಶೈಲಿ, ಅವರು ಅನಿವಾರ್ಯವಾಗಿ ಕಂಡುಕೊಳ್ಳಬೇಕಾದ ಬದುಕಿನ ಬೇರೆ ಬೇರೆ ಮಾರ್ಗಗಳು ಇವುಗಳು ಆ ಚಿತ್ರಕತೆಯ ಮೂಲವಸ್ತು. ಹಿಂದೂ ಮತೀಯವಾದಿಗಳಿಗೆ ಇಷ್ಟು ಸಾಕು ದಾಂಧಲೆ ಮಾಡುವುದಕ್ಕೆ, ಸುಡುವುದಕ್ಕೆ, ನಾಶ ಮಾಡುವುದಕ್ಕೆ, ಹುಯಿಲೆಬ್ಬಿಸಿ 'ದೊಂಬಿ ಆಡಳಿತ' ಸ್ಥಾಪಿಸುವುದಕ್ಕೆ.

ಕಾಶ್ಮೀರಕ್ಕೆ ಬಟಾಲಿಯನ್ ಮೇಲೆ ಬಟಾಲಿಯನ್ ಕಳಿಸಿ 'ಶಾಂತಿ ಸುವ್ಯವಸ್ಥೆ' ಕಾಪಾಡಿದ್ದೇನೆಂದು ಮೆರೆಯುತ್ತಿರುವ

ನಮ್ಮ ಗೃಹಮಂತ್ರಿಗಳಿಗೆ, ತಮ್ಮ ಸರಕಾರವೇ ಚಿತ್ರೀಕರಣಕ್ಕೆ ಅನುಮತಿ ನೀಡಿದ ಒಂದು ಚಿತ್ರದ ತಂಡಕ್ಕೆ ರಕ್ಷಣೆ ಒದಗಿಸಲಾರದಂಥ 'ಅಸಹಾಯ' ಸ್ಥಿತಿ ಒದಗಿದೆ, ಪಾಪ ! ಇದರ ಜೊತೆಗೆ ಮೊನ್ನೆ ಮೊನ್ನೆಯವರೆಗೆ ಸಚಿವರಾಗಿದ್ದ ಉಮಾ ಭಾರತಿಯವರ ಕಂಡ ಉಗುಳುವ ಮಾತುಗಳು ಇನ್ನೂ ಹೆಚ್ಚಿಗೆ ಆತಂಕವುಂಟುಮಾಡುವಂಥವು. ಈಕೆ ಇನ್ನೂ ಚಿಕ್ಕ ವಯಸ್ಸಿನವಳು. ಮಹಿಳೆ. ಇದಕ್ಕೆಲ್ಲಕ್ಕಿಂತ ಹೆಚ್ಚಿಗೆ ಸರ್ವಸಂಗ ಪರಿತ್ಯಾಗಮಾಡಿದ ಕೇಸರಿ ಧರಿಸಿದ ಸನ್ಯಾಸಿ. ತಾಳ್ಮೆ, ಪ್ರೀತಿ, ಸೋದರಭಾವ ಸಾಧ್ಯವಾಗಬೇಕಾಗಿದ್ದ ಇಂಥ ಒಬ್ಬ ಹೆಣ್ಣುಮಗಳು, ಈ ದೇಶದ ದುರದೃಷ್ಟಕರ ಸ್ಥಿತಿಯಲ್ಲಿ ನಲುಗಿಹೋಗುತ್ತಿರುವ ಹೆಣ್ಣುಗಳ ಬಗ್ಗೆ ಚಿತ್ರ ಮಾಡಿ ಇದರ ಕುರಿತು ಸಾರ್ವಜನಿಕ ಜಾಗೃತಿ ಉಂಟುಮಾಡ ಹೊರಟ ಯತ್ನವನ್ನು "ಕಲ್ಲು ಹೊಡೆದು ನಿಲ್ಲಿಸುವುದಾಗಿ" ಎಚ್ಚರಿಕೆ ನೀಡಿದ್ದಾಳೆ. ಇದುವೆ ಸ್ತ್ರೀ ಧರ್ಮ? ಇದುವೆ ಹಿಂದು ಸಂಸ್ಕೃತಿ? ಇದುವೆ ಸನ್ಯಾಸತ್ವದ ಲಕ್ಷಣಗಳು? ಈಗ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿರುವ ಶ್ರೀಮತಿ ಉಮಾ ಭಾರತಿಯವರಿಗೆ ಸ್ವಲ್ಪ ಹೆಚ್ಚಿಗೆ ವಿರಾಮ ಸಾಧ್ಯವಾಗಿರಬೇಕು. ಕೊಂಚ ಬಿಡುವು ಮಾಡಿಕೊಂಡು ವಾರಣಾಸಿಯಲ್ಲಿ ಕಾಶಿ ವಿಶ್ವೇಶ್ವರನ ದರ್ಶನಕ್ಕೆ ಮುಂಚೆ ತನ್ನಂತೆಯೇ ಮಹಿಳೆಯರಾದ, ನತದೃಷ್ಟರಾದ, ಹಿಂದೂ ಸಂಸ್ಕೃತಿಯೆಂಬ ಹೆಸರಿನಡಿ ನುಚ್ಚುನೂರಾಗುತ್ತಿರುವ ಹೆಣ್ಣುಮಕ್ಕಳ ಸ್ಥಿತಿಗತಿಗಳನ್ನು ಸ್ವತಃ ಪ್ರತ್ಯಕ್ಷವಾಗಿ ಅವಲೋಕಿಸಲಿ. 'ಕಲ್ಲು ಹೊಡೆಯುವ ಮಾತು' ಸ್ವಲ್ಪ ಬದಿಗಿರಲಿ, ಸದ್ಯಕ್ಕೆ. ಈ ದೇಶದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವೆಂಬುದರ ಕುರಿತಾಗಿ ಅಷ್ಟೇ ಅಲ್ಲ ಇಲ್ಲಿ ಇರುವ ಪ್ರಶ್ನೆ. ಅದಕ್ಕಿಂತ ಮೂಲಭೂತವಾದ ಪ್ರಶ್ನೆ ಇದೆ. ಇದನ್ನೂ ಧೈರ್ಯವಾಗಿ, ಪ್ರಾಮಾಣಿಕವಾಗಿ ಎದುರಿಸುವ ಸ್ಥೈರ್ಯ, ಆತ್ಮವಿಶ್ವಾಸ ಈಗ ನಾವು ತೋರಬೇಕಾಗಿದೆ.

ಪ್ರಶ್ನೆ ಇದು : ಒಂದು ಪರಂಪರೆಯನ್ನು ವಿಶ್ಲೇಷಿಸುವ ಮಾರ್ಗದಲ್ಲೇ ಅಲ್ಲವೆ ಒಂದು ನಾಗರಿಕತೆಯ ವಿಕಾಸ ಸಾಧ್ಯವಾಗುವುದು ?

ಅಂದರೆ ನಮ್ಮೊಳಗೆ, ನಮ್ಮ ಸಂಪ್ರದಾಯಗಳೊಳಗೆ, ನಮ್ಮ ನಂಬಿಕೆಗಳೊಳಗೆ ಗುಪ್ತವಾಗಿ ಸೇರಿಹೋಗಿರುವ ಗುರುತಿಸಲಾಗದ ಕೊಳಕು ಹೊಲಸುಗಳನ್ನು ಸಾರ್ವಜನಿಕವಾಗಿ ತೊಳೆದು, ಶುಚಿಗೊಳಿಸಿ, ಶುಭ್ರವಾಗಿ, ಸ್ವಚ್ಛವಾಗಿ ಇಟ್ಟುಕೊಳ್ಳುವುದರಲ್ಲಿ ಅಲ್ಲವೆ ಒಂದು ಧರ್ಮದ ಜೀವಂತಿಕೆ ಇರುವುದು ?

ಹೀಗೆ ಶುಚಿಗೊಳಿಸುವ, ಶುಭ್ರಗೊಳಿಸುವ ಈ ಪ್ರಕ್ರಿಯೆ ನಮ್ಮೊಳಗೆ ಗಟ್ಟಿಯಾಗಿ ನೆಲೆಮಾಡಿ, ಒಂದು ಬಗೆಯ ಸ್ಥಿರತೆ, ದೃಢತೆಯನ್ನು ನೀಡಿರಬಹುದಾದ ಮನಃಸ್ಥಿತಿಗೆ ಕೊಡಲಿಪೆಟ್ಟು ಕೊಟ್ಟ ಹಾಗೆ – ಖಂಡಿತ ಹೌದು. ಆದರೆ ಹಾಗೆ ಈ ಪೆಟ್ಟುಗಳನ್ನು ತಡೆದುಕೊಳ್ಳುವ ಶಕ್ತಿ ಇಲ್ಲದವರು, ಅಥವಾ ಶಕ್ತಿ ಇಲ್ಲದ ತಲೆಮಾರುಗಳು ಪ್ರಗತಿಯ ಹಾದಿಯಲ್ಲಿ ನಡೆಯಲು ಸಾಧ್ಯವೇ? ನಮ್ಮ ಒಳಗಿನ ಭಯ ಆತಂಕಗಳನ್ನು ನಾವು ನಮ್ಮ ಹೆಮ್ಮೆಯ ಗರ್ವದ ಪರಂಪರೆ, ಇತಿಹಾಸ, ಸಂಸ್ಕೃತಿ ಎಂದೆಲ್ಲ ಕರೆದುಕೊಳ್ಳಬಹುದು. ಆದರೆ ಇವೆಲ್ಲ ದೌರ್ಬಲ್ಯದ ಆತ್ಮವಂಚನೆಯ – ವಿವಿಧ ಮುಖಗಳು ಅಷ್ಟೇ.

ಹೀಗೆ ಒಳಗೆ ಭಯ ಆತಂಕಗಳಿರುವುದರಿಂದಲೇ ನಾವು ಹಿಂಸೆಗೆ ತೊಡಗುವುದು ಎಂಬುದನ್ನು ಮರೆಯಬಾರದು. ಆರ್.ಎಸ್.ಎಸ್., ಶಿವಸೇನೆ ಗುಂಪುಗಳಿಗೆ ಇದು ಅರ್ಥವಾಗಲಿಕ್ಕಿಲ್ಲ. ಅವರು ಅರ್ಥ ಮಾಡಿಕೊಳ್ಳುವುದಕ್ಕೆ ತಯಾರೂ ಇಲ್ಲ. ಆದರೆ ಅದಕ್ಕಿಂತ ಹೆಚ್ಚಿನ ಭಯದ ವಿಷಯವೆಂದರೆ - ಆರ್.ಎಸ್.ಎಸ್., ಶಿವಸೇನೆಯ ತತ್ವಗಳೊಂದಿಗೆ ಕಿಂಚಿತ್ತು ಸಹಾನುಭೂತಿ ಇಲ್ಲವೆಂದು ಭಾವಿಸಿದ ನೂರಕ್ಕೆ ೮೦ರಷ್ಟು ಜನ ತಮ್ಮ ಮೌನದಿಂದ, ಸಿನಿಕತನದಿಂದ ನಡೆಯುತ್ತಿರುವ ಅನಾಹುತಗಳತ್ತ ಕಣ್ಣು ತಿರುಗಿಸದೇ, ವಿರುದ್ಧ ದಿಕ್ಕಿನಲ್ಲಿ ಬಹು 'ನಾಗರಿಕ'ರಾಗಿ ನಡೆದು ಹೋಗುತ್ತಿದ್ದೇವಲ್ಲ ಅದು.

ಇದನ್ನೇ ನಾವು ಎಷ್ಟು ಬೇಗ ಅರಿತರೆ ಅಷ್ಟು ನಮಗೆ, ನಮ್ಮ ಸ್ವತಂತ್ರ, ಸಮಾನತೆಗಳ ಮೌಲ್ಯಕ್ಕೆ ಅರ್ಥಬರುತ್ತದೆ.

ಇಂದೇ ನಾವು ಈಗ ಕಾರ್ಯ ಪ್ರವೃತ್ತರಾಗಬೇಕು- ಮತ್ತು ತಡಮಾಡದೆ.

**ಪ್ರೊ॥ ಜಿ. ಕೆ. ಗೋವಿಂದ ರಾವ್**
೧೬೭೧, ೧೧ನೇ ಮಹಡಿ, ೩೩ ನೇ 'ಎ'ಕ್ರಾಸ್, ೭ನೇ ಬ್ಲಾಕ್,
ಜಯನಗರ, ಬೆಂಗಳೂರು-೫೬೦ ೦೮೨

# ಕೃಷಿ ಎಂಬ ಮಾಯಾಲೋಕ

ಡಾ॥ ಜಿ. ಎನ್. ಎಸ್. ರೆಡ್ಡಿ

ದೇಶದಲ್ಲಿ ಆಹಾರ ಉತ್ಪಾದನೆಗೆ ಬೇಕಾದ ವಾತಾವರಣ ಮೂಡಿಸಲು ಕಳೆದ ನಾಲ್ಕು ದಶಕಗಳಲ್ಲಿ ಸರ್ಕಾರ ಅನೇಕ ಕ್ರಮಗಳನ್ನು ಕೈಗೊಂಡಿದೆ. ಕೃಷಿ ಬೆಳವಣಿಗೆಗೆ ಪೂರಕವಾದ ಸಾಲ, ಸಬ್ಸಿಡಿ, ಕೃಷಿ ಕುರಿತ ಹೆಚ್ಚಿನ ಸಂಶೋಧನೆ, ತಂತ್ರಜ್ಞಾನ ವರ್ಗಾವಣೆ, ಮಾರುಕಟ್ಟೆ ಅಭಿವೃದ್ಧಿ, ಇವು ಇಂತಹ ಕೆಲವು ಕ್ರಮಗಳು.

ಕೃಷಿಕರಿಗೇಕೆ ಸಬ್ಸಿಡಿ ಕೊಡಬೇಕು? ವಿದ್ಯುಚ್ಛಕ್ತಿಗೇಕೆ ರಿಯಾಯಿತಿ ಇರಬೇಕು? ರಾಸಾಯನಿಕ ಗೊಬ್ಬರದ ಮೇಲಿನ ಸಬ್ಸಿಡಿ ಏಕೆ ತೆಗೆಯಬಾರದು? ಇಂತಹ ನೂರಾರು ಪ್ರಶ್ನೆ ಕುರಿತು ಚರ್ಚೆಯನ್ನು ಗಮನಿಸಬಹುದು. ಇಂತಹ ಅನೇಕ ಚರ್ಚೆಗಳಿಗೆ ಗ್ರಾಸ ಒದಗಿಸುವವರು ತಾವೇ ಅತ್ಯುತ್ತಮ ಆರ್ಥಿಕ ತಜ್ಞರೆನಿಸಿಕೊಂಡಿರುವ ಬುದ್ಧಿಜೀವಿಗಳು.

ಇವರ ದೃಷ್ಟಿಕೋನ ಮಾನದಂಡಗಳೆಲ್ಲವೂ ಪಾಶ್ಚಿಮಾತ್ಯ ರಾಷ್ಟ್ರಗಳ ಅಂಧಾನುಕರಣೆಯ ಹುಟ್ಟಿನಿಂದ ಆಗಿವೆ. ಹಾಗೆ ನೋಡಿದರೆ ಕೃಪಾಪೋಷಕ ಕೃಷಿ ಭಾರತಕ್ಕೆ ಸ್ವಲ್ಪ ಹೊಸದೇ. ಸಂಪೂರ್ಣ ಸ್ವಾವಲಂಬಿಯಾಗಿದ್ದ ಭಾರತೀಯ ಕೃಷಿಯನ್ನು ಪರಾವಲಂಬನೆಯೆಡೆಗೆ ಕೊಂಡೊಯ್ದವರೇ ಇಂದು ಸಬ್ಸಿಡಿಗಳ ವಿರುದ್ಧವಾಗಿರುವ ತಜ್ಞರು. ರೈತರು ತಾವು ಬಳಸುವ ಬೀಜ, ಕ್ರಿಮಿನಾಶಕ, ತಂತ್ರಜ್ಞಾನ ಎಲ್ಲದಕ್ಕೂ ಪರಾವಲಂಬಿಗಳಾಗಿ ರಬೇಕಾದ ಸ್ಥಿತಿ ಸೃಷ್ಟಿಸಿಬಿಟ್ಟಿರುವ ತಜ್ಞರುಗಳಿಗೆ ಎಂದು ಅರಿವು ಮೂಡುವುದೋ ಗೊತ್ತಿಲ್ಲ. ಹಾಗೆಯೇ ಈ ಸಬ್ಸಿಡಿಗಳ ಬಗ್ಗೆ ದೊಡ್ಡ ಧ್ವನಿ ಎತ್ತುತ್ತಿರುವವರು ಯಾರು ಗೊತ್ತೆ? ವರ್ಲ್ಡ್ ಬ್ಯಾಂಕ್ ಮತ್ತು ಐ.ಎಮ್.ಎಫ್.ಗಳ ವಿವಿಧ ಡೋನರ್ ಏಜೆನ್ಸಿಸ್‌ಗಳಿಗೆ ಕನ್ಸಲ್‌ಟೆಂಟ್‌ಗಳಾಗಿ ಬರುವ ವಿದೇಶಿ ತಜ್ಞರು ಈ ಹಿಂದೆ ಇದ್ದಾರೆ. ಪಶ್ಚಿಮದ ಸಂಶೋಧನಾ ಕೇಂದ್ರಗಳು, ವಿದ್ಯಾಲಯಗಳಿಗೆ ಭೇಟಿ ಕೊಡುವ ನಮ್ಮ ಕೃಷಿ ತಜ್ಞರುಗಳಿಗೆ ಅಲ್ಲಿಯ ಎಲ್ಲವನ್ನು ಇದ್ದ ಹಾಗೆಯೇ ಭಟ್ಟಿ ಇಳಿಸುವ ಒಂದು ಜಾಡ್ಯವಿದೆ.



*ಸರಿಯಾದ ಒಳಚರಂಡಿ ವ್ಯವಸ್ಥೆ ಇಲ್ಲದ ಕಾರಣ ವರ್ಷದಲ್ಲಿ ಸದಾಕಾಲವೂ ಅತಿ ಹೆಚ್ಚು ನೀರನ್ನು ತಮ್ಮ ಹೊಲ / ಹುಲ್ಲುಗಾವಲುಗಳಿಂದ ಹೊರಗೆ ತೆಗೆಯುವುದೇ ಇಲ್ಲಿಯ ರೈತರಿಗೆ ದೊಡ್ಡ ಸಮಸ್ಯೆ*

ಪಶ್ಚಿಮದ ಯಾವ ರಾಷ್ಟ್ರದಲ್ಲಿಯೂ ಕೃಷಿಗೆ ಸಬ್ಸಿಡಿ ಇಲ್ಲವೆ? ಉದಾಹರಣೆಗೆ : ಯೂರೋಪಿನಲ್ಲಿ ಉತ್ಪತ್ತಿಯಾಗುವ ಹಾಲು, ಆಲೂಗೆಡ್ಡೆ, ಮತ್ತಿತರ ಅನೇಕ ಕೃಷಿ ಉತ್ಪನ್ನಗಳು ಸಬ್ಸಿಡಿ ಪ್ರೇರೇಪಿತವಾದಂತಿದೆ. ನಮ್ಮಲ್ಲಿ ಹೈನು ಉತ್ಪಾದನೆ ಸಬ್ಸಿಡಿ ಬಳಸುತ್ತಿದ್ದರೆ ಯೂರೋಪಿನಲ್ಲಿ ಹಾಲು ಮುಂತಾದ ವಸ್ತುಗಳನ್ನು ಕಡಿಮೆಗೊಳಿಸಲು ಸಬ್ಸಿಡಿ ಕೊಡಲಾಗುತ್ತದೆ. ಇದೊಂದು ದೊಡ್ಡ ವಿಪರ್ಯಾಸ. ಯೂರೋಪಿನ ಕೃಷಿ ಕೋಟಾ ಪದ್ಧತಿ ನಿಮಗೆ ಗೊತ್ತಿದೆಯೇ? ಉದಾಹರಣೆಗೆ:- ಹಾಲೆಂಡಿನಲ್ಲಿ ಒಬ್ಬ ರೈತ ನೂರು ಹಸುವಿನ ಜೊತೆಗೆ ಮತ್ತೆ ಹತ್ತು ಹಸು ಸೇರಿಸಿಕೊಳ್ಳಬೇಕೆಂದರೆ ಅವನಿಗೆ ಅನುಮತಿ ಇಲ್ಲ . ಹಾಗೊಂದು ವೇಳೆ ಅತೀ ಜರೂರಾಗಿ ಹಸು ಕೊಳ್ಳಬೇಕೆಂದಿದ್ದರೆ ಬೇರೊಬ್ಬ ರೈತನಿಗೆ ನಿಗದಿತವಾಗಿರುವ ಹಸುಗಳ ಕೋಟಾವನ್ನು ಖರೀದಿಸಿ (ಅರ್ಥಾತ್ ಅವರ ಹಸುಗಳ ಸಂಖ್ಯೆ ಕಡಿಮೆ ಮಾಡಿ), ತನ್ನ ಹಸುಗಳ ಸಂಖ್ಯೆ ಜಾಸ್ತಿ ಮಾಡಬಹುದೇ ಹೊರತು, ಒಟ್ಟಾರೆ ಹಸುಗಳ ಸಂಖ್ಯೆ ಜಾಸ್ತಿ ಆಗುವ ಹಾಗಿಲ್ಲ . ರೈತರಿಂದ ಮಾರುಕಟ್ಟೆ ದರಕ್ಕಿಂತ ಹೆಚ್ಚಿನ ದರದಲ್ಲಿ ಹಾಲು, ಇತರ ಉತ್ಪನ್ನ ಖರೀದಿಸುವ ಮೂಲಕ ಸರ್ಕಾರ ಅಲ್ಲಿಯ ರೈತರನ್ನು ಸಂತುಷ್ಟಿಗೊಳಿಸಿದೆ.

ಇತರ ಕೃಷಿ ಉದ್ದಿಮೆ ಪರಿಸ್ಥಿತಿ ಇದಕ್ಕಿಂತಲೂ ಭಿನ್ನವಾದುದೇನಲ್ಲ. ಇದರ ಅರ್ಥ ಯೂರೋಪಿನ ಕೃಷಿ ಭಾರತದ ಕೃಷಿಗಿಂತ ಮುಂದುವರಿದಿದೆ ಅಂತೇನಲ್ಲ. ಸ್ವಾಭಾವಿಕ ಸಂಪನ್ಮೂಲಗಳ ದುರ್ಬಳಕೆಯಿಂದಾಗಿ ತಾತ್ಕಾಲಿಕ ಹೆಚ್ಚಳ ಸಾಧಿಸಿರುವ ಯೂರೋಪಿನ ರೈತರು ಅಧೋಗತಿಯತ್ತ ನಡೆಯಲು ತುಂಬಾ ದಿನವೇನೂ ಬೇಕಿಲ್ಲ . ಅತ್ಯಂತ ಹೆಚ್ಚಿನ ರಾಸಾಯನಿಕ ಬಳಸಿ, ವಿದೇಶದಿಂದ ಆಮದು ಮಾಡಿಕೊಂಡಿರುವ ವಸ್ತುಗಳನ್ನು ಬಳಸಿ, ಕೃಷಿಯಲ್ಲಿ ಪ್ರಗತಿ ಸಾಧಿಸಿ ರೈತರಿಗೆ ಇಂದು ತುಂಬಾ ಪೀಕಲಾಟಕ್ಕೆ ಇಟ್ಟುಕೊಂಡಿದೆ. ತಮ್ಮ ಜಮೀನಿನ ಸ್ವಾಭಾವಿಕ ರಚನೆಯನ್ನು ಹಾಳುಮಾಡಿಕೊಂಡಿರುವ ಇವರಿಗೆ ತಮ್ಮ ಅಧಿಕ ಉತ್ಪಾದನೆಯ ಬೆಲೆ ಗೊತ್ತಾಗುತ್ತಿದೆ. ಮುಂದಿನ ಅನೇಕ ವರ್ಷಗಳಲ್ಲಿ ಪ್ರಯತ್ನಪಟ್ಟರೂ ಇವರ ಭೂಮಿ ಜೀವಂತಿಕೆ ಪಡೆಯುವ ಲಕ್ಷಣಗಳಿಲ್ಲ.

ತುಂಬಾ ಕಲುಷಿತಗೊಂಡಿರುವ ನೀರಿನ ಮೂಲಗಳು ಅವರ ಬಳಕೆಗೆ ಒದಗಿಬರುವಂತಿಲ್ಲ. ಅಧಿಕ ಉತ್ಪಾದನೆ ಹುಚ್ಚಿನಲ್ಲಿ ತಮ್ಮಲ್ಲಿ ಇದ್ದ ನಿಸರ್ಗದತ್ತ ಅರಣ್ಯಸಂಪನ್ಮೂಲಗಳನ್ನು ನಾಶ ಮಾಡಿದ ರೈತರು ಏಕಬೆಳೆ ಅಳವಡಿಸಿಕೊಂಡಿರುವ ಫಲವಾಗಿ, ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ನಡೆಯುವ ನೀರು, ಪೋಷಕಾಂಶ, ಅನಿಲ ಚಕ್ರವೆಲ್ಲವೂ ಏರುಪೇರುಗೊಂಡಿವೆ. ಅವು ತಮ್ಮ ಐಷಾರಾಮಿ ಫಲವಾಗಿ ಉತ್ಪಾದಿಸುತ್ತಿರುವ ಸಾವಿರಾರು ಟನ್‌ಗಟ್ಟಲೆ ಇಂಗಾಲದ ಡೈ ಆಕ್ಸೈಡ್ ಬಳಸಿಕೊಳ್ಳಲು, ಆ ಮೂಲಕ ವಾತಾವರಣವನ್ನು ಶುಚಿಗೊಳಿಸಲು ಅರಣ್ಯ ಸಂಪನ್ಮೂಲಗಳು ನಶಿಸಿಹೋಗಿವೆ. ಇದರ ಪರಿಣಾಮವಾಗಿ ಆಮ್ಲ ಮಳೆಯಂತಹ ಭೀಕರ ಸ್ವಾಭಾವಿಕ ವಿಕೋಪಗಳಿಗೆ ತುತ್ತಾಗುತ್ತಿದ್ದಾರೆ.

ಅತ್ಯಂತ ಆಧುನಿಕ ತಂತ್ರಜ್ಞಾನಗಳನ್ನು ಬಳಸಿ ಅತಿ ಹೆಚ್ಚಿನ ಸಾಂದ್ರತೆಯಲ್ಲಿ ಕೈಗೊಂಡಿರುವ ಕೋಳಿ ಸಾಕಾಣಿಕೆ, ಹಂದಿ ಸಾಕಾಣಿಕೆ ಹಾಗೂ ಹೈನೋದ್ಯಮದಲ್ಲಿ ಉಂಟಾಗುತ್ತಿರುವ ವಿಪರೀತ ಪರಿಣಾಮಗಳ ಬಗ್ಗೆ ಬರೆದಷ್ಟೂ ಕಡಿಮೆ. ತುಂಬಾ ಅಮಾನವೀಯ ಎನ್ನಬಹುದಾದ ಇಕ್ಕಟ್ಟಿನ ಜಾಗಗಳಲ್ಲಿ ಬೆಳೆಯುವ ಈ ಪ್ರಾಣಿಯ ಮಾಂಸ ಎಷ್ಟರ ಮಟ್ಟಿಗೆ ಆರೋಗ್ಯಪೂರ್ಣ ಆಗಬಹುದೆಂಬುದು ಪ್ರಶ್ನಾರ್ಹ. ಅತೀ ಹೆಚ್ಚು ರಾಸಾಯನಿಕ ಬಳಸಿ ಸಾಕುವ ಈ ಪ್ರಾಣಿಗಳ ಮಾಂಸವು ಬಹುವಾಗಿ ಮನುಷ್ಯರ ಆರೋಗ್ಯದ ಮೇಲೆ ಅತೀ ಕೆಟ್ಟ ಪ್ರಭಾವ ಬೀರುತ್ತದೆ.

ಸುಮಾರು ಎರಡು ವರ್ಷಗಳ ಹಿಂದೆ ನಾವೆಲ್ಲರೂ ಪತ್ರಿಕೆಗಳಲ್ಲಿ ಓದಿದ ಮಾಹಿತಿ ನಿಮಗೆ ಗೊತ್ತಿರಬೇಕು. ಹಾಲೆಂಡಿನಿಂದ ಎಷ್ಟೋ ಹಡಗುಗಳಲ್ಲಿ ಪುಕ್ಕಟ್ಟೆಯಾಗಿ ಸಗಣಿ ಭಾರತಕ್ಕೆ ಬರುತ್ತಿತ್ತು . ಕೆಲವೊಂದು ಪರಿಸರ ಸಂಘಟನೆಗಳ ವಿರೋಧಗಳಿಂದಾಗಿ ಕೊನೆಗಳಿಗೆಯಲ್ಲಿ ಕೈಬಿಡಲಾಗಿತ್ತು.

ಅಭಿವೃದ್ಧಿಶೀಲ ದೇಶಗಳಿಂದ ಹಿಂಡಿ, ಕಾಳು, ಮರಗೆಣಸು ಮುಂತಾದ ವಸ್ತುಗಳನ್ನು ಆಮದು ಮಾಡಿಕೊಂಡು ಅತಿ ಹೆಚ್ಚಿನ ಸಾಂದ್ರತೆಯಲ್ಲಿ ಹಸು, ಹಂದಿ, ಕೋಳಿಗಳನ್ನು ಸಾಕತೊಡಗಿದ ಇಲ್ಲಿನ ರೈತರಿಗೆ ಈಗ ಪೀಕಲಾಟವಾಗಿದೆ. ಹೊರಗಡೆಯಿಂದ ಬಂದ ಎಲ್ಲ ವಸ್ತುಗಳಿಂದ ಉತ್ಪತ್ತಿಯಾಗುವ (ಸಾವಯವ) ತ್ಯಾಜ್ಯವಸ್ತುಗಳನ್ನು ಅನೇಕ ವರ್ಷಗಳಿಂದ

ಭೂಮಿಗೆ ಸೇರಿಸಿದ ಪರಿಣಾಮವಾಗಿ ಇಂದು ಭೂಮಿಯಲ್ಲಿ ನೈಟ್ರೇಟ್ ಮತ್ತು ಪಾಸ್ಫೇಟ್ ಪ್ರಮಾಣ ಅತೀ ಹೆಚ್ಚಾಗಿಬಿಟ್ಟಿದೆ. ಇದರ ಜೊತೆಗೆ ರಾಸಾಯನಿಕಗಳ ಕಾಟ ಬೇರೆ. ಹಾಲೆಂಡಿನಲ್ಲಿ ನೀರಿಗೆ ಬರವಿಲ್ಲ. ಕೆಲವೇ ಅಡಿಗಳ ಆಳದ ಗುಂಡಿ ತೋಡಿದರೂ ಸಾಕಷ್ಟು ನೀರು ದೊರಕುತ್ತದೆ. ಆದರೆ ಯಾವುದೇ ನೀರು ಕುಡಿಯಲು ಯೋಗ್ಯವಿಲ್ಲ. ಈ ಕಲುಷಿತ ನೀರನ್ನು ಏನು ಮಾಡುವುದೆಂಬುದೇ ಅವರಿಗೀಗ ತಿಳಿಯುತ್ತಿಲ್ಲ.

ಪ್ರತಿಯೊಂದನ್ನೂ ವೈಜ್ಞಾನಿಕ ತತ್ವಗಳ ಆಧಾರದ ಮೇಲೆಯೇ ಮಾಡುವ ಇವರಿಗೆ ತಮ್ಮ ಭೂಮಿ ಹಾಗೂ ನೀರಿಗೆ ಸೇರುತ್ತಿರುವ ಕಲ್ಮಷಗಳ ಬಗ್ಗೆ ಏಕೆ ಗೊತ್ತಾಗಲಿಲ್ಲವೊ? ಪ್ರತಿಯೊಂದಕ್ಕೂ ಮಣ್ಣು ಪರೀಕ್ಷೆ ಎಂದು ರೆಕಮೆಂಡ್ ಮಾಡುವ ವಿಜ್ಞಾನಿಗಳು ದಾರಿ ತಪ್ಪಿದ್ದೆಲ್ಲಿ?

ಪಾಶ್ಚಿಮಾತ್ಯ ಕೃಷಿಯನ್ನೇ ಅವಲಂಬಿಸುತ್ತಾ, ಜಪಾನಿನ ಫುಕುವೋಕಾರವರು ತಮ್ಮ Road Back To Nature ಎಂಬ ಪುಸ್ತಕದಲ್ಲಿ ಹೇಳಿದಂತೆ ಆಧುನಿಕ ನಾಗರಿಕತೆಯ ಉತ್ತುಂಗ ಮುಟ್ಟಿರುವ, ಅತ್ಯಂತ ಆಧುನಿಕ ಕೃಷಿ ಕಾರ್ಯವನ್ನು ಅಳವಡಿಸಿಕೊಂಡಿರುವ ಅಮೆರಿಕಾದ ಕ್ಯಾಲಿಫೋರ್ನಿಯಾ ಕೆಲವೇ ದಶಕಗಳಲ್ಲಿ ಅತ್ಯಂತ ದೊಡ್ಡ ಮರುಭೂಮಿಯಾಗಿ ರೂಪುಗೊಳ್ಳಲಿದೆ. ಸ್ಥಳೀಯ ಪರಿಸರ ಅವಶ್ಯಕತೆ ಗಮನಿಸದೇ ಹೆಚ್ಚು ಉತ್ಪಾದನೆ ಹುಚ್ಚು ಕುದುರೆಯನ್ನೇರಿದ ಎಲ್ಲಾ ದೇಶಗಳ ಪರಿಸ್ಥಿತಿಯೂ ಇದೇ ಜಾಡಿನಲ್ಲಿದೆ.

ತಮ್ಮಲ್ಲಿ ಉಂಟಾಗಿರುವ ನೈಸರ್ಗಿಕ ಅಸಮತೋಲನೆಯನ್ನು ಸರಿಪಡಿಸುವಂಥ ಯುರೋಪ್ ದೇಶಗಳ ಒಕ್ಕೂಟ ಇಂದು ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ರೈತರಿಗೆ ತಮ್ಮ ಹೊಲಗಳಲ್ಲಿ ಮರ ನೆಡಲು ಪ್ರೋತ್ಸಾಹ ದೊರಕುತ್ತಿದೆ. ರೈತರ ಜಮೀನನ್ನು ಕೊಂಡು ಕಾಡು ಬೆಳೆಸುವ ಪ್ರಯತ್ನ ನಡೆದಿದೆ.

ಅತಿ ಕ್ಲಿಷ್ಟ ಕಾನೂನು ಅಳವಡಿಸಿಕೊಳ್ಳುವುದರ ಮೂಲಕ ಅಪಾರ ಮಾರಕ ರಾಸಾಯನಿಕಗಳ ಬಳಕೆಯನ್ನು ನಿಷೇಧಿಸಿದೆ. ಶೇಕಡಾ ಮೂರರಿಂದ 10ರವರೆಗೆ ಕೃಷಿಯಲ್ಲಿ ತೊಡಗಿರುವ ಜನಸಂಖ್ಯೆ ಇರುವಲ್ಲಿ ಬಹುಶಃ ಇಂಥ ಕ್ರಮದಿಂದ ಪ್ರಯೋಜನ ಆಗಿದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿದ್ದಂತೆ ನಮ್ಮಲ್ಲಿ ಪ್ರಕೃತಿ ವಿರೋಧಿ ಹೆಜ್ಜೆಯನ್ನು ಇಡತೊಡಗಿದರೆ, ಅದನ್ನು ಕಾನೂನಿನ ಮೂಲಕ ಸರಿಪಡಿಸುವುದಂತೂ ಅಸಾಧ್ಯ ಮಾತೇ ಸರಿ. ಈ ತಪ್ಪುಗಳು ಆಗದಂತೆ ತಡೆಯಲು ಕೃಷಿಯಲ್ಲಿ ನಿಸರ್ಗಕ್ಕೆ ಪೂರಕ ವಾಗುವಂತಹ ಕೃಷಿ ನೀತಿ ನಿರ್ಮಿಸುವುದು ಅವಶ್ಯಕ. ಈ ದಿಕ್ಕಿನಲ್ಲಿ ವಿಜ್ಞಾನಿಗಳು, ಕೃಷಿ ಯೋಜನಾ ತಜ್ಞರು ಹಾಗೂ ಆಡಳಿತಗಾರರಿಗೆ ತಿಳುವಳಿಕೆ ಕೊಡುವ ಅವಶ್ಯಕತೆಯಿದೆ. ಈ ದಿಕ್ಕಿನಲ್ಲಿ ಚಿಂತಿಸಿ ತಮ್ಮ ಮಿತಿಯೊಳಗೆ ಕಾರ್ಯಪ್ರವೃತ್ತ ವಾಗಿರುವ ಅನೇಕ ವ್ಯಕ್ತಿಗಳಿದ್ದಾರೆ. ಇವರೆಲ್ಲರೂ ಹೆಚ್ಚಾಗಿ ಕೃಷಿಕರಾಗಿರುವುದೇ ಒಂದು ದೊಡ್ಡ ವಿಶೇಷ. ಆದರೆ ಕೃಷಿಕರಿಂದ ಕಲಿತು ತಮ್ಮ ಕಾರ್ಯಕ್ರಮವನ್ನು ರೂಪಿಸಲು ಬೇಕಾದ ವಿಶಾಲವಾದ ಮನೋಭಾವದ ವಿಜ್ಞಾನಿಗಳ, ಆಡಳಿತಗಾರರ ಕೊರತೆಯಿದೆ.

ಇದನ್ನು ಸಾಧಿಸಲು ಬೇಕಾದ ವ್ಯವಸ್ಥೆ ನಮ್ಮಲ್ಲಿ ಇಲ್ಲ. ಎಲ್ಲಾ ಕೃಷಿ ಸಮಿತಿಗಳಲ್ಲಿ ಕೂರುವವರು ರಾಜಕೀಯ ವ್ಯಕ್ತಿಗಳು. ಕೇವಲ ತೋರಿಕೆಗೆ ಕೃಷಿ ಶ್ರೀಮಂತವಾಗಿರುವುದು ಸಾಮಾನ್ಯವಾಗಿಬಿಟ್ಟಿದೆ. ಕೃಷಿಯಲ್ಲಿ ಅಗಾಧ ಪ್ರಯೋಗಗಳನ್ನು ಕೈಗೊಂಡಿರುವ ಅನೇಕ ಕೃಷಿ ಋಷಿಗಳು ಎಲೆಮರೆ ಕಾಯಿಯಂತೆ ತಮ್ಮ ಪಾಡಿಗೆ ತಾವು ಇದ್ದುಬಿಟ್ಟಿದ್ದಾರೆ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬಗ್ಗೆ ವಿಶೇಷ ಕಾಳಜಿ ಹಾಗೂ ಚಿಂತನೆಗಳಿರುವ ವ್ಯಕ್ತಿ ಮತ್ತು ಸಂಘ ಸಂಸ್ಥೆಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಸಂಬಂಧಪಟ್ಟ ವಿಶೇಷ ಪ್ರಯತ್ನವಿಲ್ಲದೆ ಈ ಎಲ್ಲಾ ವ್ಯಕ್ತಿ ಸಂಘಟನೆಗಳನ್ನು ಒಟ್ಟುಗೂಡಿಸಿ ಪ್ರಯೋಜನವಾಗುವುದಿಲ್ಲ. ಅನೇಕ ಜಿಲ್ಲೆಗಳಲ್ಲಿ ಸ್ವಯಂ ಇಚ್ಛೆಯಿಂದ ಈಗಾಗಲೇ ರೂಪುಗೊಂಡಿರುವ ರೈತಸಂಘಟನೆಗಳನ್ನು ಈ ಉದ್ದೇಶಕ್ಕೋಸ್ಕರ ಬಳಸಿಕೊಳ್ಳುತ್ತಾ ಸಂಬಂಧಪಟ್ಟ ಅಧಿಕಾರಿಗಳು ಯೋಜಿಸಿ ಕೊಳ್ಳಬೇಕಾಗಿದೆ.

ಡಾ|| ಜಿ. ಎನ್. ಎಸ್. ರೆಡ್ಡಿ
ಮುಖ್ಯ ಕಾರ್ಯಕ್ರಮ ಸಂಯೋಜಕ ಅಧಿಕಾರಿಗಳು, ಬೈಫ್, ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಕ)
ಕಾಮಧೇನು, ಅಂ. ಪೆ. ೩, ಶಾರದಾನಗರ, ತಿಪಟೂರು- ೫೭೨ ೨೦೨

# ಸಪ್ನ ದಿವ್ಯ ದರ್ಶನ ಮಾಲಿಕೆ

(ಪ್ರಧಾನ ಸಂಪಾದಕರು : ಪ್ರೊ॥ ಎಲ್. ಎಸ್. ಶೇಷಗಿರಿರಾವ್)

ಝಾನ್ಸಿರಾಣಿ ಲಕ್ಷ್ಮೀಬಾಯಿ



ಪುಟ 48 ರೂ. 14

ಏಬ್ರಹ್ಯಾಮ್ ಲಿಂಕನ್



ಪುಟ 48 ರೂ. 14

ಲಾಲ್ ಬಹದ್ದೂರ್ ಶಾಸ್ತ್ರಿ



ಪುಟ 48 ರೂ. 14

ಜಯಪ್ರಕಾಶ್ ನಾರಾಯಣ್




ಪುಟ 48 ರೂ. 14

ಜನರಲ್ ಕೆ. ಎಸ್. ತಿಮ್ಮಯ್ಯ




ಪುಟ 48 ರೂ. 14

ಏಸುಕ್ರಿಸ್ತ




ಪುಟ 48 ರೂ. 14

ಅಶೋಕ




ಪುಟ 48 ರೂ. 14

ತ್ಯಾಗರಾಜರು




ಪುಟ 48 ರೂ. 14

ಈ ಎಲ್ಲಾ ಪುಸ್ತಕಗಳು ನಿಮ್ಮ ಸ್ಥಳೀಯ ಪುಸ್ತಕದ ಅಂಗಡಿಗಳಲ್ಲಿ ಲಭ್ಯ. ಇಲ್ಲವಾದಲ್ಲಿ ಪ್ರತಿಗಳಿಗಾಗಿ ಸಂಪರ್ಕಿಸಿ

## ಸಪ್ನ ಬುಕ್ ಹೌಸ್

ಗಾಂಧಿನಗರ, ಬೆಂಗಳೂರು-560 009

✆ : 2266088/2262815/2269448/2261871

ಫ್ಯಾಕ್ಸ್ : 080-2269648

---

**ಆಡಳಿತ ಮಂಡಳಿ**

1. ಶ್ರೀ ಸಿ. ಹನುಮಾನ್ : ಅಧ್ಯಕ್ಷರು
2. ಶ್ರೀ ಐ. ನಾರಾಯಣ ರೆಡ್ಡಿ : ಉಪಾಧ್ಯಕ್ಷರು
3. ಶ್ರೀ ಎಂ. ಜಯರಾಮೇಗೌಡ : ನಿರ್ದೇಶಕರು
4. ಶ್ರೀ ಗಿರಿಯಣ್ಣ : " "
5. ಶ್ರೀ ಕೆ. ಪುಟ್ಟಸ್ವಾಮಿ : " "
6. ಡಾ॥ ಎ. ಕಾಳಪ್ಪ : " "
7. ಪ್ರೊ॥ ಎಸ್. ಎನ್. ನಂಜೇಗೌಡ : " "
8. ಶ್ರೀ ಟಿ. ಚಿಕ್ಕರಾಮಯ್ಯ : " "
9. ಶ್ರೀ ಬಿ. ಹೆಚ್. ನರಸಿಂಹಯ್ಯ : " "
10. ಶ್ರೀ ಸಿ. ಬಿ. ವಿಜಯಕುಮಾರ್ : " "
11. ಶ್ರೀಮತಿ ಜಯಲಕ್ಷ್ಮಿ : " "
12. ಶ್ರೀ ರುದ್ರೇಗೌಡ : " "
13. ಶ್ರೀ ವಿ. ಗೋವಿಂದ : " "
14. ಶ್ರೀ ಬಿ. ಬೋರೇಗೌಡ : " "
15. ಶ್ರೀ ಎಲ್. ಗಂಗಾಧರ್ : " "

ಶ್ರೀ ಸಿ. ಎಲ್. ಮರಿಗೌಡ — ಪ್ರಧಾನ ವ್ಯವಸ್ಥಾಪಕರು

ಶ್ರೀ ಬಿ. ಲಕ್ಷ್ಮಣ್‌ಸಿಂಗ್ — ವ್ಯವಸ್ಥಾಪಕರು

*ಹಾರ್ದಿಕ ಶುಭಾಶಯಗಳೊಂದಿಗೆ*



## ದಿ ಜನತಾ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಸ್ಥಾಪನೆ : 1964

ಮಲ್ಲೇಶ್ವರಂ, ಬೆಂಗಳೂರು-55.

ದೂರವಾಣಿ : 3341972, 3445490, 3442648

**ಅವಧಿ ಠೇವಣಿಗಳ ಮೇಲಿನ ಬಡ್ಡಿ ದರಗಳು**

| ಅವಧಿ | ಶೇಕಡ |
|---|---|
| 15 ದಿನಗಳಿಂದ 30 ದಿನಗಳವರೆಗೆ | 5 |
| 31 ದಿನಗಳಿಂದ 180 ದಿನಗಳವರೆಗೆ | 9 |
| 181 ದಿನಗಳಿಂದ 1 ವರ್ಷದವರೆಗೆ | 10 |
| 1 ವರ್ಷಕ್ಕೆ ಮೇಲ್ಪಟ್ಟು 2 ವರ್ಷಗಳವರೆಗೆ | 12.5 |
| 2 ವರ್ಷಕ್ಕೆ ಮೇಲ್ಪಟ್ಟು 3 ವರ್ಷಗಳವರೆಗೆ | 13 |
| 3 ವರ್ಷಗಳಿಗೆ ಮೇಲ್ಪಟ್ಟು 4 ವರ್ಷಗಳವರೆಗೆ | 14 |
| 4 ವರ್ಷಗಳಿಗೆ ಮೇಲ್ಪಟ್ಟು | 15 |
| ಉಳಿತಾಯ ಖಾತೆ ಮೇಲಿನ ಬಡ್ಡಿ | 5.5 |

**ಬ್ಯಾಂಕಿನ ಆರ್ಥಿಕ ಸ್ಥಿತಿಯ ವಿವರ**

ರೂ. ಲಕ್ಷಗಳಲ್ಲಿ

| | |
|---|---|
| ಅಧಿಕೃತ ಷೇರು ಬಂಡವಾಳ | 200 |
| ಪಾವತಿಯಾದ ಷೇರು ಬಂಡವಾಳ | 205 |
| ನಿಧಿಗಳು | 154 |
| ಠೇವಣಿಗಳು | 5200 |
| ಸಾಲ ಮತ್ತು ಮುಂಗಡಗಳು | 3235 |
| ದುಡಿಯುವ ಬಂಡವಾಳ | 5617 |



# ಅಮೆರಿಕದ ಅಧ್ಯಕ್ಷರು ಬರುತ್ತಿದ್ದಾರೆ – ಎಚ್ಚರಿಕೆ

ರಾಷ್ಟ್ರಗಳ ನಡುವೆ ಸಂಬಂಧಗಳಲ್ಲಿ ಉನ್ನತ ಮಟ್ಟದ ಶೃಂಗಸಭೆಗಳು ಜರುಗುವುದು ಹೊಸದೇನಲ್ಲ. ಅವು ಸಂಬಂಧಪಟ್ಟ ರಾಷ್ಟ್ರಗಳ ನಡುವಣ ಮೈತ್ರಿ, ಸಹಕಾರಗಳನ್ನು ಎಲ್ಲ ರೀತಿಯಲ್ಲೂ ಇನ್ನಷ್ಟು ವರ್ಧಿಸಲು ಸಹಾಯಕ. ಅಂಥ ಸಾಧ್ಯತೆಗಳು ಹೆಚ್ಚಾಗುವುದು ಸಂಬಂಧಪಟ್ಟ ರಾಷ್ಟ್ರಗಳು ಸಮಾನ ಮನಸ್ಕರಾಗಿದ್ದರೆ ಮಾತ್ರ. ಮೂಲಭೂತ ವಿಷಯಗಳ ಬಗ್ಗೆ ಭಿನ್ನದೃಷ್ಟಿ ಇರುವಾಗ ಅಂಥ ಸಭೆಗಳು ಕೇವಲ ಔಪಚಾರಿಕವಾಗಿ ಪರಿಣಮಿಸುತ್ತವೆ, ಇಲ್ಲವೇ ಒಂದು ರಾಷ್ಟ್ರ ಇನ್ನೊಂದರ ಮೇಲೆ ತನ್ನ ಅಭಿಪ್ರಾಯ ಹೇರುವುದಕ್ಕೆ ಪ್ರಯತ್ನಿಸಲು ಅವಕಾಶ ನೀಡುತ್ತದೆ. ಭಾರತ-ಅಮೆರಿಕಗಳ ಸಂದರ್ಭದಲ್ಲಿ ಇದು ಎದ್ದು ಕಾಣುತ್ತದೆ.

ಭಾರತಕ್ಕೆ ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್ ಭೇಟಿ ಕೊಡುತ್ತಿದ್ದಾರೆ. ಕಳೆದೆರಡು ದಶಕಗಳಲ್ಲಿ ಅಮೆರಿಕದ ಅಧ್ಯಕ್ಷರು ಯಾರೂ ಈ ದೇಶಕ್ಕೆ ಭೇಟಿ ಕೊಡುವ ಗೋಜಿಗೆ ಹೋಗಲಿಲ್ಲ. ಅದರಿಂದ ನಮಗೆ ನಷ್ಟವೇನಾಗಲಿಲ್ಲ. ಕಳೆದ ಐವತ್ತು ವರ್ಷಗಳಿಂದ ಭಾರತ-ಅಮೆರಿಕ ಸಂಬಂಧಗಳು ಅಷ್ಟಕ್ಕಷ್ಟೆ. ಈಗಲೂ ಭಾರತದ ವಿಚಾರದಲ್ಲಿ ಅಮೆರಿಕದ ಆಡಳಿತಗಾರರ ದೃಷ್ಟಿ ಮೂಲಭೂತವಾಗಿ ಬದಲೇನಾಗಿಲ್ಲ. ಅಧ್ಯಕ್ಷ ಕ್ಲಿಂಟನ್‌ರ ಭಾರತದ ಭೇಟಿಯ ಕುರಿತು ಸ್ವತಃ ಕ್ಲಿಂಟನ್ ಹಾಗೂ ಅಮೆರಿಕದ ಉನ್ನತಾಧಿಕಾರಿಗಳ ಹೇಳಿಕೆಗಳಿಂದ ಇದು ಸ್ಪಷ್ಟವಾಗುತ್ತದೆ. ಭಾರತ ಸರಕಾರದ ಮೇಲೆ ಎಲ್ಲ ಬಗೆಯಲ್ಲೂ ಒತ್ತಡ ತಂದು ತನ್ನೆಡೆಗೆ ಒಲಿಸಿಕೊಳ್ಳಲು ಇದು ಸಕಾಲವೆಂದು ಅಮೆರಿಕದ ಆಡಳಿತಗಾರರು ಭಾವಿಸಿರುವಂತಿದೆ. ಭಾರತದಲ್ಲಿ ರಾಷ್ಟ್ರೀಯ ಪತ್ರಿಕೆಗಳು ಎನಿಸಿಕೊಂಡಿರುವವು ಹಾಗೂ ಆಡಳಿತದಲ್ಲಿರುವವರು ನಡೆಸಿರುವ ಗದ್ದಲ ನೋಡಿದರೆ ಅಮೆರಿಕದ ಲೆಕ್ಕಾಚಾರ ಸರಿ ಎನಿಸುತ್ತದೆ.

ಅಧ್ಯಕ್ಷ ಕ್ಲಿಂಟನ್ ಭಾರತಕ್ಕೆ ಭೇಟಿ ನೀಡುವರು ಎಂಬ ಸುದ್ದಿ ಪ್ರಕಟವಾದ ದಿನದಿಂದ ಇಂದಿನವರೆಗೆ ಮಾಧ್ಯಮಗಳಲ್ಲಿ ನಡೆದಿರುವ ಪ್ರಚಾರವನ್ನು ಗಮನಿಸಿದರೆ ಈ ಭೇಟಿಯಿಂದ ನಮ್ಮ ಭಾಗ್ಯದ ಬಾಗಿಲು ತೆರೆದಂತೆಯೇ ಎನ್ನುವ ಭ್ರಮೆ ಹುಟ್ಟಲು ಸಾಕು. ಇದಕ್ಕೆ ನಮ್ಮ ಆಡಳಿತಗಾರರೂ ಸಾಕಷ್ಟು ಪೋಷಣೆ ನೀಡಿದ್ದಾರೆ, ಅಮೆರಿಕದಿಂದ ಡಾಲರು ಬಂಡವಾಳದ ಹೊಳೆ ಹರಿದು ಬರುವುದೆಂಬ ಪ್ರಲೋಭನೆ ಉಂಟುಮಾಡಿದ್ದಾರೆ. ಅದಕ್ಕಾಗಿಯೇ ನಮ್ಮ ರಾಜ್ಯಗಳ ಕೆಲ ಮುಖ್ಯಮಂತ್ರಿಗಳು ಕ್ಲಿಂಟನ್‌ರನ್ನು ತಮ್ಮ ರಾಜ್ಯಕ್ಕೆ ಬರಮಾಡಿಕೊಳ್ಳಲು ಪೈಪೋಟಿ ನಡೆಸಿದ್ದಾರೆ ಅಸಹ್ಯಕರವಾಗಿ. ಅಮೆರಿಕದ ಬಂಡವಾಳಗಾರರನ್ನು ಮೆಚ್ಚಿಸಲು, ಬಹುರಾಷ್ಟ್ರೀಯ ಕಾರ್ಪೊರೇಷನ್ನುಗಳನ್ನು ಆಕರ್ಷಿಸಲು ನಾ ಮುಂದು ತಾ ಮುಂದು ಎಂದು ನಡೆಮುಡಿ ಕಟ್ಟಿ ನಮ್ಮನ್ನಾಳುತ್ತಿರುವವರು ಹೊರಟಿರುವುದು ನೋಡಿದರೆ ಭಯವಾಗುತ್ತದೆ, ದೇಶವನ್ನು ಎಲ್ಲಿಗೆ ಕೊಂಡೊಯ್ಯುತ್ತಿದ್ದಾರೆ ಎಂದು.

ಅಮೆರಿಕ ಯಾವುದೇ ಕ್ರಮವನ್ನು ಕೈಗೊಂಡರೂ ಅದು ತನ್ನ ಸ್ವಂತ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ. ಇದನ್ನು ಅಮೆರಿಕದ ಆಡಳಿತಗಾರರು ಎಂದೂ ಮುಚ್ಚುಮರೆ ಮಾಡಿಲ್ಲ. ಎಂಥ ದುಷ್ಕೃತ್ಯದಲ್ಲಿ ತೊಡಗಿದರೂ ಅದು ಅದರ ಹಿತಾಸಕ್ತಿಯ ರಕ್ಷಣೆಗಾಗಿಯೇ! ಅಮೆರಿಕದ ಈ



ಹಿತಾಸಕ್ತಿ ಕಬಂಧ ಬಾಹುವಿನಂತೆ ಪ್ರಪಂಚದ ಎಲ್ಲ ಭಾಗಗಳಿಗೂ ಹರಡಿರುತ್ತದೆ. ಎರಡನೆಯ ಮಹಾಯುದ್ಧಾನಂತರದ ಕಾಲದಲ್ಲಿ ಅಮೆರಿಕದ ಕಾರ್ಯ ಚಟುವಟಿಕೆಗಳನ್ನು ಗಮನಿಸಿದವರಿಗೆ ಇದು ಸ್ಪಷ್ಟವಾಗಿ ತಿಳಿದಿದೆ. ಅಮೆರಿಕದ ಹಿತಾಸಕ್ತಿಗಳ ರಕ್ಷಣೆಯಿಂದಾಗಿ ಪ್ರಪಂಚದಲ್ಲಿ ಏನೇನು ಅನಾಹುತಗಳು, ಕಷ್ಟನಷ್ಟಗಳು ಸಂಭವಿಸಿವೆ ಎನ್ನುವುದನ್ನೂ ಇಲ್ಲಿ ಪಟ್ಟಿ ಮಾಡುವುದು ಅಗತ್ಯವಿಲ್ಲ. ಈ ಬಗ್ಗೆ ಜನ ಎಚ್ಚರದಿಂದಿರಬೇಕು ಅಷ್ಟೇ.

ಭಾರತ ಸ್ವಾತಂತ್ರ್ಯಗೊಂಡ ಮೊದಲ ದಿನಗಳಿಂದಲೂ ಅಮೆರಿಕ ಭಾರತದ ಬಗ್ಗೆ ಅಸಹನೆಯ ಧೋರಣೆಯನ್ನು ತಳೆದಿದೆ. ಕಾಶ್ಮೀರದ ಪ್ರಶ್ನೆಯಾಗಲಿ, ಗೋವಾ ವಿಮೋಚನೆಯಾಗಲಿ, ಭಾರತ-ಪಾಕಿಸ್ತಾನಗಳ ನಡುವಿನ ಸಂಬಂಧಗಳಾಗಲಿ ಅಮೆರಿಕ ಭಾರತ ವಿರೋಧಿ ನಿಲುವನ್ನೇ ಅನುಸರಿಸಿದೆ. ಭಾರತದ ಅಲಿಪ್ತ ನೀತಿಯನ್ನು, ಅಭಿವೃದ್ಧಿ ಯೋಜನೆಗಳನ್ನು ಅಮೆರಿಕ ಯಾವತ್ತೂ ಸಂಶಯದಿಂದ ನೋಡಿದೆ; ಭಾರತದ ತಾತ್ವಿಕ ನಿಲುವನ್ನು ಸತತವಾಗಿ ವಿರೋಧಿಸುತ್ತ ಬಂದಿದೆ. ಅದೇ ಸಮಯದಲ್ಲಿ ಭಾರತವನ್ನು ತನ್ನ ಪ್ರಭಾವ ವಲಯಕ್ಕೆ ಸೆಳೆದುಕೊಳ್ಳಲು ಅಮೆರಿಕ ಪ್ರಯತ್ನಿಸುತ್ತ ಬಂದಿದೆ.

ಪ್ರಾಯಶಃ ಈಗ ಬಲೆ ಬೀಸಲು ಕಾಲ ಪಕ್ವಗೊಂಡಿದೆ ಎಂದು ಅಮೆರಿಕ ಭಾವಿಸಿದೆ. ಆರ್ಥಿಕ ಉದಾರೀಕರಣ, ಜಾಗತೀಕರಣ, ವಿಶ್ವವ್ಯಾಪಾರ ಸಂಸ್ಥೆ, ಐ.ಎಂ.ಎಫ್, ವರ್ಲ್ಡ್ ಬ್ಯಾಂಕ್ ಬೀಸಿರುವ ಮಾಯಾಜಾಲ ಅಮೆರಿಕಾಗೆ ಪ್ರಶಸ್ತವಾದ ವಾತಾವರಣ ಕಲ್ಪಿಸಿಕೊಟ್ಟಿದೆ. ಭಾರತದಲ್ಲಿ ಈಗ ಆಡಳಿತದಲ್ಲಿರುವ ಪಕ್ಷದವರೂ ಸಹ ಅಮೆರಿಕಾದೊಂದಿಗೆ ಹೇಗಾದರೂ ಸಂಬಂಧ ಕುದುರಿಸಿಕೊಳ್ಳಲು ಹಾತೊರೆಯುತ್ತಿದ್ದಾರೆ. ಮೊದಲಿನಿಂದಲೂ ಅವರು ಅಮೆರಿಕದ ಪರ ಧೋರಣೆಯನ್ನೇ ಪ್ರತಿಪಾದಿಸಿದ್ದಾರೆ. ಕ್ಲಿಂಟನ್ ಭೇಟಿ ತಮ್ಮ ಪುಣ್ಯವೆಂದೇ ಭಾವಿಸಿರುವುದಲ್ಲದೆ ಅದು ತಮ್ಮ ಸರಕಾರದ ಒಂದು ಅದ್ಭುತ ಸಾಧನೆಯಾದೀತು ಎಂದು ಅವರು ಪರಿಗಣಿಸುತ್ತಿದ್ದಾರೆ. ಈ ಕ್ಲಿಂಟನ್ ಮಹಾಶಯ ಪಾಕಿಸ್ತಾನಕ್ಕೆ ಭೇಟಿ ನೀಡದಿದ್ದರೆ ತಮ್ಮ ಕಿರೀಟಕ್ಕೆ ಇನ್ನೊಂದು ಗರಿ ಸೇರಿದ ಹಾಗೆ ಎಂದು ಭಾಜಪ ನಾಯಕರು ಭಾವಿಸಿದ್ದಾರೆ. ಈ ಸಂಬಂಧದಲ್ಲಿ ವಿದೇಶಾಂಗ ಖಾತೆ ಕಾರ್ಯದರ್ಶಿ ಈಚೆಗೆ ನೀಡಿದ ಹೇಳಿಕೆಯೊಂದರಲ್ಲಿ ಕ್ಲಿಂಟನ್ ಪಾಕಿಸ್ತಾನಕ್ಕೆ ಭೇಟಿ ಕೊಡುವುದು ಅನುಚಿತ ಎಂದು ಹೇಳಿದ್ದು ಮೂರ್ಖತನದ ಪರಮಾವಧಿ.

ಭಾರತಕ್ಕೆ ಕ್ಲಿಂಟನ್ ಭೇಟಿಯಿಂದ ಏನೋ ಅದ್ಭುತ ಸಾಧನೆಯಾಗುತ್ತದೆ ಎಂಬ ಮಿಥ್ಯೆಯನ್ನು ಆಡಳಿತ ಪಕ್ಷದವರು ಸೃಷ್ಟಿಸಿದ್ದಾರೆ. ಆದರೆ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಮೆಡಲಿನ್ ಆಲ್‌ಬ್ರೈಟ್ ಈಚೆಗೆ ನವದೆಹಲಿಗೆ ಭೇಟಿ ನೀಡಿದ್ದಾಗ ಕ್ಲಿಂಟನ್ ಭೇಟಿಯಿಂದ ಅಸಾಧಾರಣ ನಿರೀಕ್ಷೆಗಳನ್ನಿರಿಸಿಕೊಳ್ಳುವುದು ಸಲ್ಲ ಎಂದು ಸ್ಪಷ್ಟವಾಗಿ ಹೇಳಿರುವುದನ್ನು ಗಮನಿಸುವುದು ಸೂಕ್ತ. ಕಾಶ್ಮೀರ ಹಾಗೂ ಸಿಟಿಬಿಟಿ ವಿಷಯದಲ್ಲಿ ಅಮೆರಿಕ ಗಂಭೀರವಾದ ಕಾಳಜಿ ಹೊಂದಿರುವುದನ್ನು ಆಕೆ ಪ್ರಸ್ತಾಪಿಸಿದ್ದಾರೆ. ಆದರೆ ನಮ್ಮ ಅಧಿಕೃತ ವಕ್ತಾರರು ಮಾತ್ರ ಈ ಪ್ರಸ್ತಾಪವನ್ನು ತೇಲಿಸಿಬಿಟ್ಟಿದ್ದಾರೆ, ಭಿನ್ನಾಭಿಪ್ರಾಯಗಳು ಎಲ್ಲಿ ಇರುವುದಿಲ್ಲ ಎಂದು ಹೇಳಿ.

ಇದುವರೆಗೆ ಕ್ಲಿಂಟನ್ ಭಾರತ ಭೇಟಿ ಸಂಬಂಧದಲ್ಲಿ ಬಂದಿರುವ ವರದಿಗಳನ್ನೆಲ್ಲ, ಹೇಳಿಕೆಗಳನ್ನೆಲ್ಲ, ಗಮನಿಸಿದರೆ ಒಂದಂಶವಂತೂ ಸ್ಪಷ್ಟವಾಗುತ್ತದೆ. ಅದು ಅಮೆರಿಕ ಕಾಶ್ಮೀರದ ವಿಷಯದಲ್ಲಿ ಮಧ್ಯಸ್ಥಿಕೆ ವಹಿಸಲು ಹಾತೊರೆಯುತ್ತಿದೆ ಎಂಬುದು. ಯಾವುದಾದರೂ ರೀತಿಯಲ್ಲಿ ಅದು ಮೂಗು ತೂರಿಸಲು ನೋಡುತ್ತಿದೆ. ಇನ್ನು ಸಿಟಿಬಿಟಿ ವಿಷಯದಲ್ಲಿ ಹೆಚ್ಚು ಒತ್ತಾಯ ತರಲು ಅಮೆರಿಕ ನೈತಿಕ ಬಲ ಕಳೆದುಕೊಂಡಿದೆ. ಏಕೆಂದರೆ ಅಮೆರಿಕದ ಶಾಸಕಾಂಗವೇ ಅದನ್ನು ದೃಢಗೊಳಿಸಿಲ್ಲ. ಈ ಭೇಟಿಯ ಫಲ ನಿರೀಕ್ಷೆಯಲ್ಲಿ ಕೆಲವು ಮಿಲಿಯ ಡಾಲರುಗಳ ತುಣುಕು ಲಭಿಸೀತೇನೋ! ಅದೇ ಪರಮ ಪಾವನ ಎನಿಸೀತು ಅಮೆರಿಕದ ಅಧ್ಯಕ್ಷರಿಗೆ ಪರಾಕು ಹೇಳುವವರಿಗೆ. ಒಟ್ಟಿನಲ್ಲಿ ಬೆಟ್ಟ ಕಣಿದರೆ ಇಲಿ ಹೋ...

(ಮುಂದಿನ ಪುಟ ನೋಡಿ)

## ಮೊದಲು ತಿಳಿಸಿದ್ದು ಯಾರು ?

ಇದು ಕಂಪ್ಯೂಟರ್, ಇಂಟರ್‌ನೆಟ್‌ಗಳ ಯುಗ. ಅನೇಕ ಸಂದರ್ಭಗಳಲ್ಲಿ ಇದರಿಂದುಂಟಾಗುವ ಉಪಯೋಗಗಳು ನಮ್ಮ ಊಹೆಗೂ ಮೀರಿದ್ದಾಗಿರುತ್ತವೆ. ಕಳೆದ ಡಿಸೆಂಬರ್ ೨೪ರಂದು ಜರುಗಿದ ಇಂಡಿಯನ್ ಏರ್‌ಲೈನ್ಸ್ ವಿಮಾನ ಅಪಹರಣದ ಘಟನೆಯೇ ಇದಕ್ಕೆ ಸಾಕ್ಷಿ.

ಸರಕಾರಗಳು, ಅನೇಕ ಸಂಸ್ಥೆಗಳು ಮತ್ತು ವ್ಯವಸ್ಥಿತ ಸಂಘಟನೆಗಳು ತಬ್ಬಿಬ್ಬಾಗಿ ಅಸಹಾಯಕರಾಗಿದ್ದಾಗ ಅಪಹೃತ ವಿಮಾನದಲ್ಲಿನ ಪ್ರಯಾಣಿಕನೊಬ್ಬ ತನ್ನ ಇಂಟರ್‌ನೆಟ್ ನೆರವಿನಿಂದ ಚೈನಾದ ಅಂತಹದೇ ಮತ್ತೊಂದು ಜಾಲಕ್ಕೆ ಕ್ಷಣಮಾತ್ರದಲ್ಲಿ ಅಪಹರಣಕಾರರ ಕಣ್ಣು ತಪ್ಪಿಸಿ ಸುದ್ದಿ ಮುಟ್ಟಿಸಿದ. ಅಲ್ಲಿಂದ ಬೀಜಿಂಗ್‌ನಲ್ಲಿರುವ ಭಾರತದ ರಾಯಭಾರಿ ಕಛೇರಿಗೆ ಸುದ್ದಿ ತಲುಪಿ ನವದೆಹಲಿಗೆ ಮುಟ್ಟಿದ್ದು ಮತ್ತೊಂದು ಕ್ಷಣದಲ್ಲಿ ಅಷ್ಟೆ. ಇಂಟರ್‌ನೆಟ್ ಚಮತ್ಕಾರವೆಂದರೆ ಹಾಗೆ. ಸಮಯ, ವೇಳೆಗೆ ಹೊಸ ಅರ್ಥಗಳನ್ನು ಕಲ್ಪಿಸಬೇಕಾಗಿದೆ. ಇದಕ್ಕೆ ಸೀಮೆ ಸರಹದ್ದುಗಳಿಲ್ಲ.

*- ಇದು 'ಟೆಲ್ಕೊಮ್ಯೆನ್' ಎಂಬ ಇನ್ಫೊರ್ಘುಕ್‌ನ ಕಂಪ್ಯೂಟರ್ ಜಾಲದಲ್ಲಿ ಪ್ರಕಟವಾಗಿದೆ. ಇದು ನಿಜವೇ ಎಂಬುದಕ್ಕೆ ಸರ್ಕಾರದಿಂದ ಸಮರ್ಥನೆ ದೊರೆತಿಲ್ಲ. ಇಂಟರ್‌ನೆಟ್ ಜಾಲದಲ್ಲಿ ಬರುವುದೆಲ್ಲಾ ನಿಜವೆಂದು ಭಾವಿಸುವಂತಿಲ್ಲ; ಏಕೆಂದರೆ ಯಾವುದೇ ಮಾಹಿತಿಯನ್ನು ಯಾರು ಬೇಕಾದರೂ ಆ ಜಾಲದಲ್ಲಿ ಹರಿಯಬಿಡಲು ಸಾಧ್ಯ. ಅದು ಎಷ್ಟರಮಟ್ಟಿಗೆ ನಂಬಿಕೆಗೆ ಅರ್ಹವೆಂದು ತಿಳಿಯಲು ಬೇರೆಯೇ ಮೂಲಗಳಿಗೆ ಹೋಗಬೇಕಾಗುತ್ತದೆ.*

## ಬ್ರಿಟನ್‌ನಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸುವ ಪರಿ

ಗ್ರೇಟ್ ಬ್ರಿಟನ್‌ನಲ್ಲಿ ಸೂರ್ಯಾಸ್ತ ಮುಳುಗುವ ಪ್ರಶ್ನೆಯೇ ಇಲ್ಲ; ಏಕೆಂದರೆ ಅದು ಇಡೀ ಭೂಗೋಳದ ಮೂಲೆಮೂಲೆಗಳಲ್ಲಿ ಸ್ಥಾಪಿಸಲಾಗಿರುವ ಚಕ್ರಾಧಿಪತ್ಯ ! ಹೀಗೆಂದು ರಡ್‌ಯಾರ್ಡ್ ಕಿಪ್ಲಿಂಗ್ ಕೊಚ್ಚಿಕೊಂಡಿದ್ದ. ಆದರೆ ಈಗ ಅದರ ಅಧೀನದಲ್ಲಿದ್ದ ವಸಾಹತುಗಳು ಸ್ವತಂತ್ರ ರಾಷ್ಟ್ರಗಳಾಗಿವೆ. ಇಂದಿನ ಬ್ರಿಟನ್ನಿನ ಮುಖವೇ ಬೇರೆ. ಬಂಡವಾಳಶಾಹಿ ವ್ಯವಸ್ಥೆಯ ತಾಣವಾಗಿರುವ ಆ ರಾಷ್ಟ್ರ ತನ್ನ ಲಕ್ಷಾಂತರ ಜನರ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗುತ್ತಿಲ್ಲ. ಅದರಲ್ಲೂ ನಿರುದ್ಯೋಗಿ ಯುವಕರ ಸಂಖ್ಯೆ ದಿನೇ ದಿನೇ ಏರುತ್ತಿದೆ. ಈ ಸಮಸ್ಯೆಯನ್ನು ಸ್ವಲ್ಪಮಟ್ಟಿಗಾದರೂ ಸುಧಾರಿಸಲು ಅಲ್ಲಿನ ಆಡಳಿತ ವ್ಯವಸ್ಥೆ ೬೦೦೦ ನಿರುದ್ಯೋಗಿಗಳನ್ನು ಗುರುತಿಸಿ ಅವರಿಗೆ ಪೇಜರ್‌ಗಳನ್ನು ಕೊಡಲಿದ್ದಾರಂತೆ. ಅವರ ವಯಸ್ಸು, ವಿದ್ಯಾರ್ಹತೆ ಮುಂತಾದ ವಿವರಗಳ ಮಾಹಿತಿ ಪಡೆದುಕೊಳ್ಳಲಿರುವ ರೀಡಿ ಉದ್ಯೋಗ ಸಂಸ್ಥೆ ಮೊದಲಿಗೆ ಲಿವರ್‌ಪೂಲ್ ಮತ್ತು ಮೆರ್ಸಿಸೈಡ್‌ನ ಸೆಫ್ಟನ್ ಉಪನಗರಗಳಲ್ಲಿರುವ ನಿರುದ್ಯೋಗಿ ಯುವಕರನ್ನು ಮಾತ್ರ ಸಂಪರ್ಕಿಸಲಿದೆ. ನೌಕರಿ ಖಾಲಿ ಇರುವ ಸಂದರ್ಭದಲ್ಲಿ ಎರಡು ವರುಷಗಳ ಮಟ್ಟಿಗೆ ಪ್ರಾಯೋಗಿಕವಾಗಿ ಕೈಗೊಂಡಿರುವ ಈ ಪ್ರಯತ್ನ ಯಶಸ್ವಿಯಾದಲ್ಲಿ ಆಮೇಲೆ ಲಂಡನ್‌ನ ಹ್ಯಾರಿಂಗೇ ಮತ್ತು ನ್ಯೂಹ್ಯಾಮ್ ಪ್ರದೇಶಗಳಿಗೂ ವಿಸ್ತರಿಸಲಾಗುವುದೆಂದು ಸುದ್ದಿ.

*- ಇದರ ಉದ್ದೇಶ ನಿರುದ್ಯೋಗ ಸಮಸ್ಯೆಯ ಪರಿಹಾರವಲ್ಲ. ಅದರ ಒಳ ಅರ್ಥವಿಷ್ಟೆ : ಲಾಭದ ದೃಷ್ಟಿಯಿಂದ ಮಾತ್ರ ಕೆಲವು ನಿರುದ್ಯೋಗಿಗಳ ದುಡಿಮೆಯನ್ನು ಉಪಯೋಗಿಸಿಕೊಳ್ಳುವುದು. ಇದು ಅಲ್ಲಿನ ಅರ್ಥ ವ್ಯವಸ್ಥೆಗೆ ಕನ್ನಡಿ ಹಿಡಿದಂತಿದೆ.*

## ಬಾಲ ಪ್ರತಿಭೆ

ಅಮೆರಿಕದ ಶಿಕಾಗೊದಲ್ಲಿರುವ ಭಾರತೀಯ ಮೂಲದ ೧೫ ವರುಷದ ಬಾಲಕ ರಿಶಿ ಭಟ್ ಖಾಸಗಿಯಾಗಿ ಅಂತರ್ಜಾಲದ (ಇಂಟರ್‌ನೆಟ್) ಸಾಫ್ಟ್‌ವೇರ್ ಒಂದನ್ನು ಸೃಷ್ಟಿಸಿ ಇತಿಹಾಸವನ್ನೇ ನಿರ್ಮಿಸಿದ್ದಾನೆ. ವಾಂಕೂವರ್‌ನ ಬ್ಯಾಂಕೊಂದು ಮೂರು ಮಿಲಿಯನ್ ಡಾಲರುಗಳ ಬಂಡವಾಳ (ಅಂದರೆ ೧೩ ಕೋಟಿ ರೂಪಾಯಿ) ಹೂಡಿ ಇದನ್ನು ಪ್ರಾಯೋಜಿಸಲಿದೆ.

ಇಂಟರ್‌ನೆಟ್ ಖಾಸಗಿ ಜಾಲದಲ್ಲಿ ಕ್ರಾಂತಿಕಾರಿ ಬದಲಾವಣೆಗಳಿಗೆ ನಾಂದಿಯಾಗಲಿರುವ ರಿಶಿಯ ಈ ಕಂಪ್ಯೂಟರ್ ಸೃಷ್ಟಿಯ ಹಕ್ಕುಗಳನ್ನು ವಾಂಕೂವರ್‌ನ ದಿ ರೋಕ ರಿಸೋರ್ಸಸ್ ಕಂಪೆನಿ ಈಗಾಗಲೇ ಪಡೆದಿದೆ. ಇದರಿಂದ ಪುಟ್ಟ ಕಂಪ್ಯೂಟರ್ ವಿಜ್ಞಾನಿ ರಿಶಿಗೆ ಸಿಗುವ ಹಣದ ಮೊತ್ತ ೭,೫೫,೦೦೦/- (ಏಳು ಲಕ್ಷ ಐವತ್ತೈದು ಸಾವಿರ) ಡಾಲರುಗಳಷ್ಟಾಗಬಹುದೆಂದು ಅಂದಾಜು ಮಾಡಲಾಗಿದೆ. (ಅಂದರೆ ಮೂರು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳು.)

*(ಹಿಂದಿನ ಪುಟದಿಂದ)*

ಬಂದಿತು ಎನ್ನುವಂತಾದೀತೇನೋ ಈ ಅಮೆರಿಕ ಅಧ್ಯಕ್ಷರ ಭೇಟಿ. ಈ ಭೇಟಿಯಿಂದ ದೇಶಕ್ಕಂತೂ ಏನೂ ಪ್ರಯೋಜನವಾಗದು. ಅಮೆರಿಕದೊಂದಿಗೆ ಮೈತ್ರಿ ಧೃತರಾಷ್ಟ್ರಾಲಿಂಗನ ಎಂಬುದನ್ನು ಮರೆಯಲಾಗದು.

\+ \+ \+

ಇನ್ನು ಈ ಸಂದರ್ಭದಲ್ಲಿನ ಒಂದೆರಡು ಸ್ವಾರಸ್ಯಕರ ವಿಷಯಗಳನ್ನು ಗಮನಿಸೋಣ. ನಮ್ಮ ರಾಜ್ಯದ ಮುಖ್ಯಮಂತ್ರಿಗಳು ಕ್ಲಿಂಟನ್‌ರನ್ನು ರಾಜಧಾನಿ ಬೆಂಗಳೂರಿಗೆ ಕರೆಸಿಕೊಳ್ಳಲು ತೀವ್ರ ಪ್ರಯತ್ನ ನಡೆಸುತ್ತಿದ್ದಾರೆ. ಅಷ್ಟೇ ತೀವ್ರತೆಯಿಂದ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರಮಿಸುತ್ತಿದ್ದಾರೆ. ಇದು ಇಬ್ಬರಿಗೂ ಪ್ರತಿಷ್ಠೆಯ ಪ್ರಶ್ನೆ. ಜನರ ಮಟ್ಟಿಗೆ ಕ್ಲಿಂಟನ್ ಬಂದರೂ ಒಂದೇ ಬಾರದಿದ್ದರೂ ಒಂದೇ.

ಈಚೆಗೆ ಬೆಂಗಳೂರಿಗೆ ಅಮೆರಿಕದ ಖಜಾನೆ ಕಾರ್ಯದರ್ಶಿ ಅರ್ಥಾತ್ ಅರ್ಥಮಂತ್ರಿ ಲಾರೆನ್ಸ್ ಸಮ್ಮರ್ಸ್ ಎಂಬಾತ ಬಂದು ಮುಖ್ಯಮಂತ್ರಿಗಳನ್ನು ವಿಧಾನಸೌಧದಲ್ಲಿ ಭೇಟಿಯಾದ. ಅಂದು ಅವನ ರಕ್ಷಣಾ ಪರಿವಾರ ವಿಧಾನಸೌಧದ ಮೂರನೇ ಅಂತಸ್ತನ್ನು ಆಕ್ರಮಿಸಿಕೊಂಡಿತ್ತು. ಚಿಲ್ಲರೆ ಮಂತ್ರಿಗಳಾರಿಗೂ ಅಂದು ವಿಧಾನಸೌಧದಲ್ಲಿ ಪ್ರವೇಶ ಇರಲಿಲ್ಲ. ಅವರೆಲ್ಲ ಮನೆಯಲ್ಲೇ. ಇನ್ನು ದೇಸೀ ಪತ್ರಕರ್ತರಿಗೂ ಪ್ರವೇಶ ಇರಲಿಲ್ಲ. ಮುಖ್ಯಮಂತ್ರಿಗಳು ತಮ್ಮ ನಿಸ್ಸಹಾಯಕತೆಯನ್ನು ತೋರಿ ಮುಖ ಚಿಕ್ಕದು ಮಾಡಿಕೊಂಡರು ಅಷ್ಟೇ. ಪತ್ರಕರ್ತರು ಪ್ರತಿಭಟನೆ ತೋರಿ ತೆಪ್ಪಗಾದರು. ಇನ್ನು ಕ್ಲಿಂಟನ್ ಸಾಹೇಬರು ಬಂದರೆ ಏನಾಗುತ್ತೋ ? ಅವರನ್ನು ಪ್ರಾಣಾಪಾಯಕ್ಕೀಡು ಮಾಡದಿರಲು ಭಾರತ ಸರ್ಕಾರಕ್ಕೆ ಸಾಮರ್ಥ್ಯವಿಲ್ಲ ಎಂಬಂತೆ ನಡೆದುಕೊಳ್ಳುವ ಅಮೆರಿಕ ಸರ್ಕಾರಕ್ಕೆ ಧಿಕ್ಕಾರವಿರಬೇಕು. ಕಳೆದ ಐವತ್ತು ವರ್ಷಗಳಲ್ಲಿ ಯಾವ ವಿದೇಶಿ ನಾಯಕನ ಹತ್ಯೆಯೂ ನಮ್ಮ ದೇಶದಲ್ಲಿ ಆಗಿಲ್ಲವೆಂಬುದು ಕ್ಲಿಂಟನ್‌ಗೆ ತಿಳಿಯದೇ ?

ಕ್ಲಿಂಟನ್ ಆಡಳಿತೆಯ ಮೇಲೆ ಪ್ರಭಾವ ಬೀರಲು ಭಾರತ ಸರ್ಕಾರ ಈಚೆಗೆ ತಿಂಗಳಿಗೆ ೫೦,೦೦೦ ಡಾಲರುಗಳು ಖರ್ಚು ಮಾಡುತ್ತಿದೆ. ಅಂದರೆ ತಿಂಗಳಿಗೆ ಸುಮಾರು ೨೧ ಲಕ್ಷ ರೂ.ಗಳನ್ನು ವಿನಿಯೋಗಿಸುತ್ತಿದೆ. ಇದುವರೆಗೆ ಭಾರತೀಯ ಮುತ್ಸದ್ದಿಗಳು ಅಮೆರಿಕದ ವಿದೇಶಾಂಗ ಇಲಾಖೆಯ ಅಧಿಕಾರಿಗಳೊಂದಿಗೆ ವ್ಯವಹರಿಸುತ್ತಿದ್ದರು. ಈಗ ಸರಕಾರ ವಿಶೇಷ ಲಾಬಿಯಿಸ್ಟರನ್ನು ಅರ್ಥಾತ್ ದಳ್ಳಾಳಿಗಳನ್ನು ನೇಮಿಸಿದೆ. ಇದಲ್ಲದೆ ಭಾರತ ಸರಕಾರ ಮಾಜಿ ಡೆಮಾಕ್ರಟಿಕ್ ಕಾಂಗ್ರೆಸ್ ಸದಸ್ಯ ನ್ಯೂಯಾರ್ಕಿನ ಸ್ಟೀಫನ್ ಜೆ. ಸೋರೆಜ್‌ಗೆ ಪ್ರತಿ ತಿಂಗಳೂ ೨೫,೦೦೦ ಡಾಲರುಗಳನ್ನು ಕೊಡುತ್ತಿದೆ. ಇದು ಅಧಿಕೃತವಾಗಿ ಕೊಡುತ್ತಿರುವ ಲಂಚವಲ್ಲದೆ ಬೇರೇನು ? ನಾಚಿಕೆಗೇಡು !

*- ಪೀಯಾರ್ಕೆ*

# ಫೆಬ್ರವರಿ ತಿಂಗಳಿನ ಪ್ರಶ್ನೆಗೆ ಉತ್ತರ

ಫೆಬ್ರವರಿ ತಿಂಗಳಲ್ಲಿ ತೋರಿಸಿರುವ ನಕ್ಷೆಯಲ್ಲಿ ಎರಡು ದಡ ಮತ್ತು ಎರಡು ದ್ವೀಪಗಳನ್ನೊಳಗೊಂಡಂತೆ ನಾಲ್ಕು ಭೂಭಾಗಗಳಿವೆ. ದಡಗಳನ್ನು 'ಅ' 'ಗ' ಎಂದೂ ದ್ವೀಪಗಳನ್ನು 'ವ' 'ದ' ಎಂದೂ ಕರೆಯೋಣ. ಮುಂದಿನ ಚಿತ್ರದಲ್ಲಿ, ಮೇಲಿನ ಹೆಸರಿನ ನಾಲ್ಕು ಭೂಭಾಗಗಳನ್ನು ಅದೇ ಹೆಸರಿನ ನಾಲ್ಕು ಬಿಂದುಗಳು ಪ್ರತಿನಿಧಿಸುತ್ತವೆ. ಅಲ್ಲಿ ಎರಡು ಬಿಂದುಗಳನ್ನು ಸೇರಿಸುವ ಒಂದೊಂದು ರೇಖೆಯೂ ಆಯಾ ಭೂಭಾಗಗಳನ್ನು ಸಂಪರ್ಕಿಸುವ ಒಂದೊಂದು ಸೇತುವೆಯನ್ನು ಪ್ರತಿನಿಧಿಸುತ್ತದೆ. ಉದಾ : 'ವ' ದ್ವೀಪದಿಂದ 'ಅ' ಮತ್ತು 'ಗ' ಗೆ ಎರಡೆರಡು ಸೇತುವೆಗಳೂ, 'ದ' ದ್ವೀಪಕ್ಕೆ ಒಂದು ಸೇತುವೆಯೂ ಇದೆ.




ಸೌಗಂಧಿಕಾರಾಯನು ಯಾವುದಾದರೊಂದು ಬಿಂದುವಿನಿಂದ ಆರಂಭಿಸಿ, ಬಿಂದುವಿನಿಂದ ಬಿಂದುವಿಗೆ ಅವುಗಳನ್ನು ಸೇರಿಸುವ ರೇಖೆಯೊಂದನ್ನು ಪಥವನ್ನಾಗಿ ಅನುಸರಿಸಿ ಚಲಿಸಬೇಕು. ಹೀಗೆ ಯಾವ ರೇಖೆಯನ್ನೂ ಬಿಡದೆ ಎಲ್ಲ ರೇಖೆಗಳನ್ನೂ ಒಮ್ಮೆ ಮಾತ್ರ (ಒಂದು ಸೇತುವೆಯನ್ನು ದಾಟಿದೊಡನೆಯೇ ಆ ಸೇತುವೆ ಭಗ್ನವಾಗಿ ಅದು ಮತ್ತೊಮ್ಮೆ ಉಪಯೋಗಕ್ಕೆ ಬರುವುದಿಲ್ಲವೆಂಬುದನ್ನು ನೆನಪಿಸಿಕೊಳ್ಳಿ) ಪಥವನ್ನಾಗಿ ಉಪಯೋಗಿಸಿ ಚಲನೆಯನ್ನು ಮುಗಿಸಿದರೆ ರಾಕ್ಷಸನ ಸಂಹಾರವಾಗುವುದು. ಆದರೆ ಇದೊಂದು ಅಸಾಧ್ಯ ಕಾರ್ಯ! ಉಗ್ರಬಾಹು ಮೇಧಾವಿಯಾಗಿದ್ದು, ನಿದ್ದೆ ಹೋಗಿದ್ದಾಗ ತನ್ನನ್ನು ಯಾರೂ ಸಂಹರಿಸದಂತೆ ತಂತ್ರ ಹೂಡಿಯೇ ಮಲಗಿದ್ದನು. ಇದನ್ನು ಅರಿತ ಸೌಗಂಧಿಕಾರಾಯನು 'ಚಿಂತಾಮಣಿ'ಯ ಸಂಪಾದನೆಯ ಚಿಂತೆ ಬಿಟ್ಟು ಕರ್ನಾಟಕಕ್ಕೆ ಹಿಂದಿರುಗಿದನು.

ಇದು ಏಕೆ ಅಸಾಧ್ಯ ಎಂಬುದನ್ನು ಸರಳವಾದ ಆದರೂ ಜಾಣ್ಮೆಯಿಂದೊಡಗೂಡಿದ ಕೆಳಗಿನ ವಿಶ್ಲೇಷಣೆಯಿಂದ ತಿಳಿಯಬಹುದು.

ವಿಶ್ಲೇಷಣೆಗೆ ಮೊದಲು ಒಂದು ಸ್ಪಷ್ಟೀಕರಣ. ನಮ್ಮ ಪ್ರಶ್ನೆಯಲ್ಲಿ ಬರುವ ಹೆಸರು ಇತ್ಯಾದಿಗಳನ್ನು ಮಾತ್ರ (ಪ್ರಶ್ನೆಯನ್ನಲ್ಲ) 'ಶ್ರೀಮಾನ್ ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರಿಂದ ಕರ್ನಾಟಕ ಭಾಷೆಯಲ್ಲಿ ರಚಿಸಲ್ಪಟ್ಟ ಸೌಗಂಧಿಕಾ ಪರಿಣಯವೆಂಬ ನವೀನ ಕಥೆ'ಯಿಂದ ಆರಿಸಿಕೊಳ್ಳಲಾಗಿದೆ. ಆ ಕಥೆಯಲ್ಲಿ ವೀರನಾದ ಸೌಗಂಧಿಕಾರಾಯನು ಚಿಂತಾಮಣಿಯ ಜೊತೆಗೆ ಇನ್ನೂ ಅನೇಕ ಪಣಂಗಳಂ ಸಾಧಿಸಿ ರಾಜಕುಮಾರಿಯನ್ನು ವರಿಸಿ ಕರ್ನಾಟಕಕ್ಕೆ ಹಿಂದಿರುಗುತ್ತಾನೆ. ನಮ್ಮ ಪ್ರಶ್ನೆಯು ಕ್ನೊನಿಗ್ಸ್‌ಬರ್ಗ್ ಎಂಬ ಈಗ ಪೋಲೆಂಡಿನಲ್ಲಿರುವ ನಗರದಿಂದ ಆರಂಭವಾಗುತ್ತದೆ. ಅಲ್ಲಿರುವ ಪ್ರೆಗಲ್ ನದಿಯ ದ್ವೀಪಗಳಿಗೂ ದಡಗಳಿಗೂ ನಮ್ಮ ಪ್ರಶ್ನೆಯಲ್ಲಿರುವಂತೆ ಸೇತುವೆಗಳಿದ್ದು ಅಲ್ಲಿಯ ನಾಗರಿಕರಿಗೆ ನಾವು ಕೇಳಿದಂತೆ ಪ್ರಶ್ನೆ ಉದ್ಭವಿಸಿತೆಂದು ಪ್ರತೀತಿ. ಲಿಯೋನಾರ್ಡ್ ಆಯ್ಲರ್ (೧೭೦೭-೧೭೮೩) ಎಂಬ ಗಣಿತ ಶಾಸ್ತ್ರಜ್ಞನು ಇದು ಅಸಾಧ್ಯ ಎಂದು ತೋರಿಸಿಕೊಟ್ಟನು. ಕಳೆದ ಸಹಸ್ರಮಾನದ ಮೇಧಾವಿ ಗಣಿತ ಶಾಸ್ತ್ರಜ್ಞರಲ್ಲೊಬ್ಬನಾಗಿದ್ದ ಆಯ್ಲರ್‌ನ ಪ್ರಶ್ನೆಯ ವಿಶ್ಲೇಷಣೆಯೊಡನೆ ಆಧುನಿಕ ಗಣಿತಶಾಸ್ತ್ರದ ಟೋಪಾಲಜಿ ಎಂಬ ಶಾಸ್ತ್ರಭಾಗವು ಹುಟ್ಟಿತೆಂದು ಗಣಿತ ಚರಿತ್ರಕಾರರ ಅಭಿಪ್ರಾಯ.

ಪ್ರಶ್ನೆಯಲ್ಲಿ ವಿಧಿಸಿರುವ ನಿಯಮಗಳಿಗನುಸಾರವಾಗಿ ಚಲಿಸಲು ಸಾಧ್ಯವಿದ್ದಲ್ಲಿ ಆ ಚಲನೆಯು ಕೆಳಗೆ ಕಂಡ ಎರಡರಲ್ಲೊಂದು ಬಗೆಯದಾಗಿರಬೇಕು:

(ಇ) ಆರಂಭಿಸಿದ ಬಿಂದುವಿನಲ್ಲೇ ಚಲನೆಯು ಮುಕ್ತಾಯವಾಗುವುದು. (ಈ) ಒಂದು ಬಿಂದುವಿನಿಂದ ಚಲನೆ ಆರಂಭಿಸಿ ಇನ್ನೊಂದು ಬಿಂದುವಿನಲ್ಲಿ ಮುಕ್ತಾಯಗೊಳಿಸುವುದು. ಪ್ರಶ್ನೆಯ ಸಂದರ್ಭದಲ್ಲಿ ಮೇಲಿನ ಎರಡು ಬಗೆಯ ಚಲನೆಯೂ ಅಸಾಧ್ಯ ಎನ್ನುವುದನ್ನು ಕೆಳಗಿನ ವಿಶ್ಲೇಷಣೆಗಳಿಂದ ತಿಳಿಯಬಹುದು.

(ಚ) ಚಲನೆಯನ್ನು ಒಂದು ಬಿಂದುವಿನಲ್ಲಿ ಆರಂಭಿಸಿ ಅದೇ ಬಿಂದುವಿನಲ್ಲಿ ಮುಕ್ತಾಯಗೊಳಿಸಲು ಸಾಧ್ಯವಾದರೆ, ಆರಂಭಿಸಿದ ಬಿಂದುವಿನಲ್ಲಿ ಸಂಗಮವಾಗುವ ಪಥಗಳ ಸಂಖ್ಯೆ ಒಂದು ಸಮಸಂಖ್ಯೆಯಾಗಿರಬೇಕು.

ಏಕೆಂದರೆ, ಆರಂಭಿಸಿದ ಬಿಂದುವಿನಿಂದ ಅಲ್ಲಿ ಸಂಗಮವಾಗುವ ಯಾವುದಾದರೊಂದು ಪಥವನ್ನು ಕ್ರಮಿಸಿ ಬಿಂದುವಿನಿಂದ ಮೊದಲಬಾರಿಗೆ ನಿರ್ಗಮಿಸಬೇಕಾಗುತ್ತದೆ. ಇದಾದನಂತರ ಅದೇ ಬಿಂದುವಿಗೆ ಹಿಂದಿರುಗುವ ಇನ್ನೊಂದು ಘಟ್ಟದಲ್ಲಿ ನಿರ್ಗಮಿಸಿದ ಪಥಕ್ಕಿಂತ ಭಿನ್ನವಾದ ಇನ್ನೊಂದು ಪಥವನ್ನು ಕ್ರಮಿಸಬೇಕಾಗುತ್ತದೆ. ಹೀಗಾಗಿ ಸಂಚಾರ ಮುಕ್ತಾಯವಾಗುವವರೆಗೆ ಹೊರಹೋಗಲು ಒಂದು ಪಥ ಮತ್ತು ಒಳಗೆ ಬರಲು ಇನ್ನೊಂದು ಪಥದಂತೆ ಎರಡೆರಡಾಗಿ ಎಣಿಸಿ ಆ ಬಿಂದುವಿನಲ್ಲಿ ಸಂಗಮವಾಗುವ ಎಲ್ಲ ಪಥಗಳ (ಯಾವ ಪಥವನ್ನೂ ಚಲಿಸದೇ ಬಿಡುವಂತಿಲ್ಲ ಎಂಬುದನ್ನು ನೆನಪಿಸಿಕೊಳ್ಳಿ) ಎಣಿಕೆಯನ್ನು ಪೂರ್ಣಗೊಳಿಸಬಹುದು. ಅಂದರೆ ಆ ಬಿಂದುವಿನಲ್ಲಿ ಸಂಗಮವಾಗುವ ಪಥಗಳ ಸಂಖ್ಯೆ ಒಂದು ಸಮಸಂಖ್ಯೆ.

ಚ ನಲ್ಲಿ ಮಾಡಿರುವ ವಿಶ್ಲೇಷಣೆಯನ್ನು ಅನುಕರಿಸಿ ಕೆಳಗಿನ ಹೇಳಿಕೆಗಳನ್ನೂ ಸಮರ್ಥಿಸಿಕೊಳ್ಳಬಹುದು:

(ಛ) ಒಂದು ಬಿಂದುವಿನಲ್ಲಿ ಆರಂಭಗೊಂಡ ಚಲನೆಯು ಅಲ್ಲೇ ಅಂತ್ಯಗೊಳ್ಳದಿದ್ದರೆ ಅಲ್ಲಿ ಸಂಗಮವಾಗುವ ಪಥಗಳ ಸಂಖ್ಯೆ ಒಂದು ವಿಷಮ ಸಂಖ್ಯೆಯಾಗಿರಬೇಕು.

(ಜ) ಒಂದು ಬಿಂದುವಿನಲ್ಲಿ ಆರಂಭವಾದ ಚಲನೆಯು ಅದಕ್ಕಿಂತ ಭಿನ್ನವಾದ ಇನ್ನೊಂದು ಬಿಂದುವಿನಲ್ಲಿ ಕೊನೆಗೊಳ್ಳಬಹುದಾದರೆ ಈ ಎರಡನೆಯ ಬಿಂದುವಿನಲ್ಲಿ ಸಂಗಮವಾಗುವ ಪಥಗಳ ಸಂಖ್ಯೆ ಒಂದು ವಿಷಮ ಸಂಖ್ಯೆ.

(ಟ) ಒಂದು ಬಿಂದುವಿನಲ್ಲಿ ಚಲನೆಯು ಆರಂಭವಾಗಲೂ ಇಲ್ಲ ಅಂತ್ಯವಾಗಲೂ ಇಲ್ಲ, ಆದರೆ ಒಮ್ಮೆಯಾದರೂ ಆ ಬಿಂದುವಿನ ಮೂಲಕ ಚಲನೆಯು ಹಾದುಹೋಗಬೇಕೆಂದಿದ್ದರೆ ಆ ಬಿಂದುವಿನಲ್ಲಿ ಸಂಗಮವಾಗುವ ಪಥಗಳ ಸಂಖ್ಯೆ ಒಂದು ಸಮಸಂಖ್ಯೆಯಾಗಿರಬೇಕು.

ಈ ಕುರಿತಂತೆ ನಮ್ಮ ಚಿತ್ರದಲ್ಲಿ ಪ್ರತಿಬಿಂದುವಿನಲ್ಲಿಯೂ ಸಂಗಮವಾಗುವ ಪಥಗಳ ಸಂಖ್ಯೆ ಒಂದು ವಿಷಮ ಸಂಖ್ಯೆ.

ಹಾಗಾಗಿ ವಿಶ್ಲೇಷಣೆ 'ಚ'ನಿಂದ ಸ್ಪಷ್ಟವಾಗುವುದೇನೆಂದರೆ 'ಇ'ನಲ್ಲಿ ಸಮೂದಿಸಿರುವ ಚಲನೆಯು ಅಸಾಧ್ಯ.

ಇನ್ನು 'ಈ'ನಲ್ಲಿರುವಂತೆ ಚಲನೆ ಸಾಧ್ಯವೇ ?

ಹಾಗೆ ಸಾಧ್ಯವಾದರೆ ಅಲ್ಲಿರುವ ನಾಲ್ಕು ಬಿಂದುಗಳಲ್ಲಿ, ಚಲನೆಯ ಆರಂಭಕ್ಕೊಂದು ಅದರ ಅಂತ್ಯಕ್ಕೊಂದರಂತೆ ಎರಡು ಬಿಂದುಗಳನ್ನು ಕಾದಿರಿಸಬೇಕು. (ಈ ಉದ್ದೇಶಕ್ಕಾಗಿ ಯಾವುದಾದರೂ ಎರಡು ಬಿಂದುಗಳನ್ನು ಬಳಸಬಹುದು. ಏಕೆಂದರೆ ಅದು ವಿಶ್ಲೇಷಣೆ 'ಛ', 'ಜ'ಗಳ ಪ್ರಕಾರ ನಿಷಿದ್ಧವೇನಲ್ಲ). ಉಳಿದ ಇನ್ನು ಎರಡು ಬಿಂದುಗಳಲ್ಲಿ ಚಲನೆಯು ಹಾದು ಮತ್ತೆ ನಿಲ್ಲದೆ ಮುಂದುವರಿಯಬೇಕೆಂದು ವಿದಿತ. ಆದರೆ ವಿಶ್ಲೇಷಣೆ 'ಟ'ನ ಪ್ರಕಾರ ಇದು ಅಸಾಧ್ಯ ! ಅಂತೂ ನಿಬಂಧನೆಗಳಿಗನುಸಾರವಾಗಿ ಚಲನೆ ಅಸಾಧ್ಯ.

### ಈ ತಿಂಗಳ ಹೊಸ ಪ್ರಶ್ನೆ

ಮುಂದಿನ ಎರಡು ಲೆಕ್ಕಗಳನ್ನು ಗಮನಿಸಿ :

೧. 158 x 23 = 3634

2. 79 x 46 = 3634

ಈ ಜೋಡಿಯಲ್ಲಿ, (ಅ) ಮೊದಲಿನ ಲೆಕ್ಕದಲ್ಲಿ **ಮೂರಂಕಿಯ** ಒಂದು ಸಂಖ್ಯೆಯನ್ನು **ಎರಡಂಕಿಯ** ಇನ್ನೊಂದು ಸಂಖ್ಯೆಯಿಂದ ಗುಣಿಸಲಾಗಿದೆ;

(ಆ) ಎರಡನೆಯ ಲೆಕ್ಕದಲ್ಲಿ **ಎರಡಂಕಿಯ** ಒಂದು ಸಂಖ್ಯೆಯನ್ನು **ಎರಡಂಕಿಯ** ಇನ್ನೊಂದು ಸಂಖ್ಯೆಯಿಂದ ಗುಣಿಸಲಾಗಿದೆ.

(ಇ) ಈ ಎರಡು ಲೆಕ್ಕಗಳಲ್ಲಿ ಗುಣಿಸಲು ಬಳಸಲಾಗಿರುವ ನಾಲ್ಕು ಸಂಖ್ಯೆಗಳ ರಚನೆಯನ್ನು, **ಒಂದರಿಂದ ಒಂಭತ್ತರವರೆಗಿನ ಎಲ್ಲ ಅಂಕೆಗಳನ್ನು** ಒಮ್ಮೆ ಮಾತ್ರ ಬಳಸಿ ರಚಿಸಲಾಗಿದೆ.

(ಈ) ಎರಡೂ ಲೆಕ್ಕದ **ಗುಣಲಬ್ಧ ಒಂದೇ ಸಂಖ್ಯೆ.**

(ಅ), (ಆ), (ಇ), (ಈ) ನಲ್ಲಿರುವ ವಿಶೇಷ ಲಕ್ಷಣಗಳನ್ನು ಹೊಂದಿರುವ ಇನ್ನೂ ಮೂರು ಜೋಡಿ ಲೆಕ್ಕಗಳಿವೆ ! ಅವುಗಳನ್ನು ಕಂಡುಹಿಡಿಯಿರಿ. OO

## ಮಣಿಪುರಿಯ ಒಂದು ಜನಪದ ಕಥೆ

# ಬುದ್ಧಿವಂತ ಸನ್ಯಾಸಿ

ದಟ್ಟವಾದ ಅಡವಿಯಲ್ಲಿ ಓರ್ವ ಸನ್ಯಾಸಿ ಬರುತ್ತಲಿದ್ದ. ಒಮ್ಮೆಲೆ ಅವನ ಎದುರು ಹುಲಿಯೊಂದು ಬಂದಿತು. ಈ ಹುಲಿ ತನ್ನನ್ನು ಕೊಲ್ಲದೆ ಬಿಡುವುದಿಲ್ಲ ಎಂದುಕೊಂಡು ಭಯದಿಂದ ಕಂಪಿಸತೊಡಗಿದ. ಅವನ ವಿವೇಕ ಅವನನ್ನು ಎಚ್ಚರಿಸಿತು. ''ಬದುಕಲು ಏನಾದರೂ ಉಪಾಯ ಯೋಚಿಸು.'' ಏನೋ ಒಂದು ಉಪಾಯ ಹೊಳೆಯಿತು.

ಸನ್ಯಾಸಿ ಹುಲಿಯ ಎದುರು ಒಮ್ಮೆಲೆ ಸಂತೋಷದಿಂದ ಕುಣಿಯತೊಡಗಿದ. ಸನ್ಯಾಸಿಯ ವರ್ತನೆ ನೋಡಿ ಹುಲಿಗೆ ಆಶ್ಚರ್ಯವಾಯಿತು. ''ಏಯ್ ಮೂರ್ಖ, ನಾನೀಗ ನಿನ್ನನ್ನು ತಿನ್ನುತ್ತೇನೆ ಎಂದು ಗೊತ್ತಿದ್ದೂ ಗೊತ್ತಿದ್ದೂ





ಕುಣೀತಾ ಇದ್ದೀಯಲ್ಲ, ಜೀವದ ಭಯ ಇಲ್ಲವೆ ?'' ಹುಲಿರಾಯ ಕೇಳಿದ.

''ನಂಗ್ಯಾಕೆ ಜೀವದ ಭಯ ? ನಾನು ಇತರ ಸನ್ಯಾಸಿಗಳಂತೆ ಅಲ್ಲ. ಪ್ರತಿನಿತ್ಯ ನಂಗೆ ತಿನ್ನೋಕೆ ಒಂದೊಂದು ಹುಲಿ ಬೇಕೇಬೇಕು. ಈಗಾಗ್ಲೆ ಒಂದು ಹುಲಿ ಹಿಡಿದು ನನ್ನ ಜೋಳಿಗೆಯಲ್ಲಿ ಇಟ್ಟುಕೊಂಡಿದೀನಿ. ನಾಳೆ ಬಗ್ಗೆ ನಂಗೆ ತುಂಬಾ ಚಿಂತೆಯಾಗಿತ್ತು. ಈಗ ನೀನು ಸಿಕ್ಕೆಯಲ್ಲ. ಹಾಗಾಗಿ ಸಂತೋಷದಿಂದ ಕುಣೀತಾ ಇದೀನಿ ಅಷ್ಟೆ,'' ಸನ್ಯಾಸಿ ಉತ್ತರಿಸಿದ.

ಹುಲಿರಾಯನಿಗೆ ಒಂದು ಸಲ ಮೈ ಭಯದಿಂದ ಕಂಪಿಸಿತಾದರೂ ಸನ್ಯಾಸಿಯ ಮಾತಿನಲ್ಲಿ ವಿಶ್ವಾಸ ಉಂಟಾಗಲಿಲ್ಲ. ''ಬೊಗಳೆ ಬಿಟ್ಟು ನನ್ನನ್ನು ಹೆದರಿಸೋಕೆ ನೋಡಬೇಡ. ನಿನ್ನ ಜೋಳಿಗೆಯಲ್ಲಿ ಹುಲಿ ಇದ್ರೆ ತೋರ್ಸು.''

ಸನ್ಯಾಸಿ ತನ್ನ ಜೋಳಿಗೆಯಲ್ಲಿದ್ದ ಕನ್ನಡಿಯನ್ನು ಮುಕ್ಕಾಲು ಭಾಗದಷ್ಟು ಹೊರತೆಗೆದು ''ನೋಡು'' ಎಂದ. ಹುಲಿರಾಯನಿಗೆ ಕನ್ನಡಿಯಲ್ಲಿ ಅದರದೇ ಪ್ರತಿಬಿಂಬ ಕಾಣಿಸಿತು. ಅದು ತನ್ನ ನಾಲಿಗೆ ಹೊರತೆಗೆದಾಗ ಕನ್ನಡಿಯಲ್ಲಿಯ ಹುಲಿಯೂ ನಾಲಿಗೆ ಹೊರಗೆ ತಂದಿತು. ಈ ಸನ್ಯಾಸಿ ತುಂಬ ಅಪಾಯಕಾರಿ ಎಂದು ಭಾವಿಸಿದ ಹುಲಿರಾಯ ಅಲ್ಲಿಂದ ಓಡಿಬಂದು ತನ್ನ ರಾಜನಿಗೆ ನಡೆದ ಘಟನೆ ಹೇಳಿತು.

''ಥೂ ನಿನ್ನ! ಯಾರಾದ್ರೂ ಹುಲಿಯನ್ನ ಜೋಳಿಗೆಯಲ್ಲಿ ಇಟ್ಕೊಳ್ತಾರಾ ? ಸನ್ಯಾಸಿ ಹುಲಿಯನ್ನ ತಿನ್ನೋದು ಅಂದ್ರೆ ಏನು ? ನಿಂಗೆಲ್ಲೋ ಬುದ್ಧಿ ಭ್ರಮಣೆ ಆಗಿದೆ. ನಾವೆಲ್ಲ ಕೂಡಿ ಹೋಗೋಣ. ಸನ್ಯಾಸಿಗೆ ನಾನು ಬುದ್ಧಿ ಕಲಿಸ್ತೀನಿ,'' ಹುಲಿಗಳ ರಾಜ ಹೇಳಿದ. ಎಲ್ಲ ಹುಲಿಗಳೂ ಸೇರಿ ಸನ್ಯಾಸಿಯನ್ನು ಹುಡುಕುತ್ತ ಹೊರಟವು.

ಹುಲಿಯಿಂದ ಬಚಾವಾದ ಸನ್ಯಾಸಿಗೆ ಮಾರ್ಗದಲ್ಲಿ ಕಟ್ಟಿಗೆ ಕಡಿಯುತ್ತಿದ್ದ ವ್ಯಕ್ತಿ ಭೆಟ್ಟಿಯಾದ. ಸನ್ಯಾಸಿ ಹುಲಿಯ ಬಗ್ಗೆ ಅವನ ಹತ್ತಿರ ಹೇಳುತ್ತಿರುವಾಗಲೇ ಹುಲಿಯ ದಂಡು ಬರುತ್ತಿರುವುದನ್ನೂ ಕಂಡ. ಕಟ್ಟಿಗೆ ಕಡಿಯುವ ವ್ಯಕ್ತಿ ಕೊಡಲಿಯನ್ನು ಹಿಡಿದುಕೊಂಡೇ ತಕ್ಷಣ ಮರವನ್ನೇರಿದ. ಸನ್ಯಾಸಿಗೆ ಮರ ಏರಲು ಬರುತ್ತಿರಲಿಲ್ಲ. ಮರದ ಹಿಂದೆ ಅಡಗಿ ಕುಳಿತ.

ಸನ್ಯಾಸಿಗೆ ಹೆದರಿ ಓಡಿಬಂದ ಹುಲಿರಾಯ ಹೇಳಿದ : ''ರಾಜಾ, ನೋಡಿ ಆಗ ಒಬ್ಬನೇ ಸನ್ಯಾಸಿ ಇದ್ದ, ಈಗ ಇನ್ನೊಬ್ಬನೂ ಬಂದಿದ್ದಾನೆ. ಒಬ್ಬ ಗಿಡದ ಹಿಂದೆ ಕುಳಿತಿದ್ದರೆ ಇನ್ನೊಬ್ಬ ಮರದ ಮೇಲೆ ಅಡಗಿದ್ದಾನೆ. ನಾವು ಸುಮ್ಮನೆ ಹೋಗಿಬಿಡೋಣ.''

''ಈ ಮನುಷ್ಯರಿಗೆ ಹೆದರಿ ಓಡಬೇಕಾ? ನೀವೆಲ್ಲರೂ ಮರದ ಸುತ್ತಲೂ ನಿಂತುಕೊಳ್ಳಿ. ಅವರು ತಪ್ಪಿಸಿಕೊಂಡು ಓಡಿಹೋಗಬಾರದು.'' ಹಾಗೆಂದು ಹುಲಿಗಳ ರಾಜ ಹೇಳಿದವನೇ ಮರದ ಸಮೀಪ ನಡೆದ. ಸನ್ಯಾಸಿ ಹಾಗೂ ಕಟ್ಟಿಗೆ ಕಡಿಯುವಾತ ಇಬ್ಬರೂ ಭೀತಿಯಿಂದ ನಡುಗತೊಡಗಿದರು. ಮರದ ಮೇಲೆ ಇರುವೆಗಳ ಸಾಲು. ಇರುವೆಗಳು ಕಟ್ಟಿಗೆ ಕಡಿಯುವವನ ಕಾಲು ಕಚ್ಚಿದಾಗ ಇರುವೆ ಜಾಡಿಸಿಕೊಳ್ಳಲು ಕೈಯಲ್ಲಿದ್ದ ಕೊಡಲಿಯನ್ನು ಕೆಳಗೆ ಬಿಟ್ಟ. ಕೊಡಲಿ ಕೆಳಗೆ ಬೀಳುತ್ತಿರುವಾಗಲೇ ಸನ್ಯಾಸಿ ಕೂಗಿಕೊಂಡ : ''ಹುಲಿರಾಜನನ್ನ ಗಟ್ಟಿಯಾಗಿ ಹಿಡಿದುಕೊಳ್ಳಿ. ಇಲ್ಲಾಂದ್ರೆ ಓಡಿಹೋಗಬಹುದು.''

ಕೊಡಲಿ ಹುಲಿರಾಜನ ಮೈಮೇಲೆ ಬೀಳುವುದಕ್ಕೂ ಸನ್ಯಾಸಿ ಕೂಗಿಕೊಳ್ಳುವುದಕ್ಕೂ ಸರಿಹೋಯ್ತು. ಹುಲಿರಾಜ ಹೆದರಿ ಕಂಗಾಲಾಗಿ ಓಡತೊಡಗಿದ. ಉಳಿದ ಹುಲಿಗಳೂ ತಕ್ಷಣ ಅಲ್ಲಿಂದ ಪಲಾಯನಗೈದವು.

ಜಿ. ಜಿ. ಹೆಗಡೆ, ಕಡೇಕೋಡಿ
ಚೌಕೀಮಠ ರಸ್ತೆ ಶಿರಸಿ-೫೮೧ ೪೦೧

## ರಾತ್ರಿಯ ನೆಮ್ಮದಿ

ನೀಲಿಯ ಬಾನಿನ ಮಲ್ಲಿಗೆ ಹರಳನು
ಗುಣಿಸುತಲೆಣಿಸಿರಿ ಇರುಳೆಲ್ಲ ।
ಮಿನ ಮಿನ ಮಿರುಗುವ ಬೆಳಕಿನ ಕುಡಿಯಲಿ
ಕುಣಿಯುತಲಾಡುವ ನಾವೆಲ್ಲ ॥

ಮೋಡದ ಮರೆಯಲಿ ಕಿಲಕಿಲ ನಗುತಿಹ
ಚಂದ್ರನು ಇಣುಕಿದ ನಗೆ ಚೆಲ್ಲಿ ।
ಪುಟು ಪುಟು ಹೆಜ್ಜೆಯ ಹಾಕುತ ನಡೆದಿಹ
ತಂಪಿನ ಬೆಳಕನು ಹೊರಚೆಲ್ಲಿ ॥

ಮೆಲ್ಲನೆ ಸುಳಿಯುತ ತಣ್ಣನೆ ಗಾಳಿಯು
ಚುಂಬಿಸಿ ರಮಿಸಿದೆ ಎದೆಯಲ್ಲಿ ।
ಆಹಾ ! ಓಹೋ !! ಎನ್ನುತ ಕುಣಿಯುವ
ಮನಸಿಗೆ ಎಂತಹ ಮುದವಿಲ್ಲಿ ?॥

ದಿನವಿಡಿ ದುಡಿಯುವ ಬದುಕಿಗೆ ಸಿಗಲಿ
ಇರುಳಿನ ನೆಮ್ಮದಿ ಸುಖಶಾಂತಿ ।
ಹಗಲಿಡಿ ಕಲಿಯುವ ಮಕ್ಕಳಿಗಿರಲಿ
ರಾತ್ರಿಯ ಸೊಬಗಿನ ಮನಶಾಂತಿ ॥

ಏನೇ ದುಗುಡ ಸಂಕಟವಿರಲಿ
ಕಳೆವುದು ಒಂದೇ ಕ್ಷಣದಲ್ಲಿ ।
ಹಗಲಿನ ಘಟನೆಗಳೆಷ್ಟೇ ಇರಲಿ
ರಾತ್ರಿಯು ಮರೆಸುವುದಿದೆ ಇಲ್ಲಿ ॥

ಜೀನಹಳ್ಳಿ ಸಿದ್ದಲಿಂಗಪ್ಪ
೧೮, ಒನೇ ಮುಖ್ಯ ರಸ್ತೆ, ಸರಸ್ವತಿಪುರಂ,
ಮೈಸೂರು ೫೭೦ ೦೦೯

## ಫೆಬ್ರವರಿ ಸಂಚಿಕೆಯ ಹೊಸತು ಪದಹೊಸೆತ ಸರಿ ಉತ್ತರ

| | | | | | | | | |
|---|---|---|---|---|---|---|---|---|
| ಗ | ಣಿ | ತ | ವಿ | ಜ್ಞಾ | ನ | ಪ್ರ | ವೇ | ಶ |
| | | | ವಾ | | | ಹ | | ವ |
| ಬ | ಬ್ರು | ವಾ | ಹ | ನ | | ಸ | ಲ್ಲಾ | ಪ |
| ಟ್ರ್ಯಾಂ | | | ಮ | | | ನ | | ರೀ |
| ಡ್ | | ಮ | ತ್ತು | | ಅ | | ಸ | ಕ್ಷೆ |
| ರ | | | ನೀ | ರು | ಮ | ಜ್ಜಿ | ಗೆ | |
| ಸ | ರ | ಸ್ವ | ತಿ | | ರ್ತ್ಯ | | ಟ | ದ |
| ಲ್ | | ಗೃ | | | ಸೇ | ಜ್ಞ | ರ | |
| | | ಹ | ನಿ | ಮೂ | ನ್ | | ಹ | ಸ್ತ್ರ |

# ಸಂವಿಧಾನದ ಪರಿಶೀಲನೆ ಯಾವ ಪುರುಷಾರ್ಥಕ್ಕೆ?

**ಮುರಳಿಧರ್**

೧೯೮೦ರ ಚುನಾವಣೆಯಲ್ಲಿ ಜಯಗಳಿಸಿ ಎರಡನೆಯ ಬಾರಿ ಕೇಂದ್ರದಲ್ಲಿ ಶ್ರೀಮತಿ ಇಂದಿರಾ ಗಾಂಧಿ ಗದ್ದುಗೆ ಏರಿದ ನಂತರ ಕಾಂಗ್ರೆಸ್ ಪಕ್ಷದ ಅನೇಕ ಧುರೀಣರು ಈಗಿರುವ ಪಾರ್ಲಿಮೆಂಟರಿ ಪ್ರಜಾತಂತ್ರದ ಬದಲು ಅಧ್ಯಕ್ಷೀಯ ಮಾದರಿ ಸರಕಾರ ನಮ್ಮ ಸಮಾಜಕ್ಕೆ ಹೆಚ್ಚು ಸೂಕ್ತವೆಂದು ಅನೇಕ ಬಾರಿ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಅಂದರೆ ಭಾರತದ ಸಂವಿಧಾನವನ್ನು ಈ ದಿಕ್ಕಿನಲ್ಲಿ ಬದಲಾವಣೆ ಮಾಡಬೇಕೆಂಬ ಬೇಡಿಕೆ ಅವರ ಅಭಿಪ್ರಾಯದಲ್ಲಿ ಅಡಗಿತ್ತು. ಆದರೆ ಅವರ ಪ್ರಯತ್ನ ಬೀಜಾವಸ್ಥೆಯನ್ನು ದಾಟಲಾಗಲಿಲ್ಲ. ಇತಿಹಾಸದ ಮರುಕಳಿಕೆಯೋ ಎಂಬಂತೆ ಈಗ ಕೇಂದ್ರದಲ್ಲಿ ಅಧಿಕಾರಾರೂಢ ಭಾರತೀಯ ಜನತಾ ಪಕ್ಷ ನಮ್ಮ ಸಂವಿಧಾನವನ್ನು ಪುನರ್ ಪರಿಶೀಲನೆಗೊಳಪಡಿಸಬೇಕು. ಕಳೆದ ಐವತ್ತು ವರ್ಷಗಳಲ್ಲಿ ಸಂವಿಧಾನ ಯಾವ ರೀತಿ ಕೆಲಸ ನಿರ್ವಹಿಸಿದೆ, ತನ್ನ ಗುರಿ ಸಾಧಿಸಿದೆಯೇ, ಹಾಗಿಲ್ಲದಿದ್ದಲ್ಲಿ ಸಂವಿಧಾನಕ್ಕೆ ಯಾವ ಬದಲಾವಣೆಗಳನ್ನು ತರಬೇಕು ಎಂಬುದನ್ನು ಪರಿಶೀಲಿಸಲು ಒಂದು ತಜ್ಞರ ಸಮಿತಿಯನ್ನು ರಚಿಸುವುದಾಗಿ ಹೇಳಿದೆ. ಸರಕಾರದ ಈ ನಿರ್ಧಾರದ ಬಗ್ಗೆ ಹತ್ತು ಹಲವಾರು ಕಡೆಗಳಿಂದ ವಿರೋಧ ವ್ಯಕ್ತವಾಗುತ್ತಿದೆ. ನ್ಯಾಯಮೂರ್ತಿ ಶ್ರೀ ಎಂ.ಎನ್. ವೆಂಕಟಾಚಲಯ್ಯನವರು ಸಮಿತಿಯ ಅಧ್ಯಕ್ಷರಾಗಲು ಸಮ್ಮತಿ ಸೂಚಿಸಿದ್ದಾರೆನ್ನಲಾಗಿದೆ. ಆಜ್ಞೆ ಹೊರಬರಲಿದೆ.

ಜನವರಿ ೨೭, ೨೦೦೦ದಂದು ನಡೆದ ಪಾರ್ಲಿಮೆಂಟಿನ ವಿಶೇಷ ಅಧಿವೇಶನದಲ್ಲಿ ಪ್ರಧಾನಿ ವಾಜಪೇಯಿಯವರು ಮಾತನಾಡುತ್ತಾ ಇಂದಿನ ಹೊಸ ಸವಾಲುಗಳನ್ನು ಎದುರಿಸಲು ಸಂವಿಧಾನದ ಪುನರಾವಲೋಕನ ಅಗತ್ಯವಿದೆ, ಅದಕ್ಕಾಗಿ ಸರಕಾರ ಒಂದು ತಜ್ಞರ ಸಮಿತಿಯನ್ನು ರಚಿಸಿರುವುದಾಗಿ ಹೇಳಿದರು. ಆದರೆ ಈ ಹೊಸ ಸವಾಲುಗಳೇನು ಎಂದು ವಿವರಿಸಲಿಲ್ಲ. ಅದೇ ಅಧಿವೇಶನದಲ್ಲಿ ಮಾತನಾಡಿದ ರಾಷ್ಟ್ರಾಧ್ಯಕ್ಷ ಶ್ರೀ ಕೆ. ಆರ್. ನಾರಾಯಣನ್ ಸಂವಿಧಾನದ ಪುನರ್ವಿ ಮರ್ಶೆಯ ಅಗತ್ಯದ ಬಗ್ಗೆ ತಮ್ಮ ಆತಂಕ ಮತ್ತು ಸಂಶಯವನ್ನು ವ್ಯಕ್ತಪಡಿಸಿದರು. ಸಂವಿಧಾನ ತನ್ನ ಗುರಿ ಸಾಧಿಸುವಲ್ಲಿ ಸೋತಿದೆಯೋ ಅಥವಾ ನಾವು ಸಂವಿಧಾನವನ್ನು ವಿಫಲಗೊಳಿಸಿದ್ದೇವೆಯೋ ಎಂಬ ಪ್ರಶ್ನೆಯನ್ನು ಎತ್ತಿ ಯಾವ ಕಾರಣಕ್ಕೂ ಸಂವಿಧಾನದ ಮೂಲ ಸಿದ್ಧಾಂತವನ್ನು ಉಳಿಸಿಕೊಳ್ಳಬೇಕೆಂದು ಮನವಿ ಮಾಡಿಕೊಂಡರು. ಕಳೆದ ಡಿಸೆಂಬರ್‌ನಲ್ಲಿ ಬಾರ್ ಅಸೋಸಿಯೇಷನ್ ಆಫ್ ಇಂಡಿಯಾ ನವದೆಹಲಿಯಲ್ಲಿ ಆಯೋಜಿಸಿದ್ದ ಸಂವಿಧಾನ ಸಮ್ಮೇಳನದಲ್ಲಿ ಭಾಗವಹಿಸಿದ್ದ ವಿವಿಧ ರಾಜಕೀಯ ಪಕ್ಷಗಳ ಮುಖಂಡರು, ಅಲ್ಪ ಸಂಖ್ಯಾತ ವರ್ಗ ಹಾಗೂ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಪ್ರತಿನಿಧಿಗಳು, ಮಹಿಳಾ ಸಂಘಟನೆಗಳ ಪ್ರತಿನಿಧಿಗಳು, ನ್ಯಾಯಾಧೀಶರು, ನ್ಯಾಯವಾದಿಗಳು, ಸಂವಿಧಾನದ ಪುನರ್ವಿಮರ್ಶೆಯ ಅಗತ್ಯದ ಬಗ್ಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿ, ಸಂವಿಧಾನ ನಮ್ಮನ್ನು ವಿಫಲಗೊಳಿಸಿಲ್ಲ, ಆದರೆ ನಾವು ಅದನ್ನು ವಿಫಲಗೊಳಿಸಿದ್ದೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಪ್ರಧಾನಮಂತ್ರಿ ಮತ್ತು ರಾಷ್ಟ್ರಪತಿಯವರ ಅಭಿಪ್ರಾಯ ಭೇದಗಳು ನಿಚ್ಚಳವಾಗಿ ವ್ಯಕ್ತವಾಗಿದ್ದರೂ ಸಹ, ಕಾನೂನು ಮಂತ್ರಿ ಶ್ರೀ ರಾಂ ಜೇತಮಲಾನಿಯವರು ತಿಪ್ಪೆಸಾರಿಸುವ ಕೆಲಸ ಮಾಡುತ್ತಿದ್ದಾರೆ. ಸಂವಿಧಾನದ ಮೂಲ ಲಕ್ಷಣಗಳನ್ನು ನಾವು ಬದಲಾಯಿಸುವುದಿಲ್ಲ ಎಂಬ ಹೇಳಿಕೆಯಿತ್ತು ಜನತೆಯ ಸಂಶಯವನ್ನು ಹೆಚ್ಚು ಕೆದಕಿದ್ದಾರೆ.

**ಸಂವಿಧಾನ ಸೋತಿದೆಯೇ ?**

ಸಂವಿಧಾನದ ಪುನರ್ವಿಮರ್ಶೆಯಾಗಬೇಕು ಎಂದು ಬಲವಾಗಿ ಪ್ರತಿಪಾದಿಸಿದರೆ ಈಗಿರುವ ಸಂವಿಧಾನ ತನ್ನ ಗುರಿ ಸಾಧನೆಯಲ್ಲಿ ಸೋತಿದೆ ಅಥವಾ ಸಮಾಜದ ಪ್ರಗತಿಗೆ ತೊಡಕಾಗಿದೆ ಎಂದು ಅರ್ಥೈಸುವುದು ಅನಿವಾರ್ಯವಾಗುತ್ತದೆ. ಸಂವಿಧಾನ ಎಲ್ಲಿ ಸೋತಿದೆ ಅಥವಾ ಎಲ್ಲಿ ತೊಡಕಾಗಿದೆ ಎಂದು ಹೇಳಬೇಕಾದ ಜವಾಬ್ದಾರಿ ಸರಕಾರಕ್ಕಿದೆ. ಈ ಜವಾಬ್ದಾರಿಯನ್ನು ನಿರ್ವಹಿಸದೆ, ತಜ್ಞರ ಸಮಿತಿಗೆ ಈ ಕೆಲಸ ನಿರ್ವಹಿಸುವುದು ಗಾಡಿಯನ್ನು ಕುದುರೆಯ ಮುಂದೆ ಕಟ್ಟಿದಂತಾಗುತ್ತದೆ. ಒಟ್ಟಾರೆ ಈ ವಿಷಯದಲ್ಲಿ ಹೇಳುವುದಕ್ಕಿಂತ ಹೆಚ್ಚು ಮುಚ್ಚಿಡುವ ಪ್ರಯತ್ನವನ್ನು ಸರಕಾರ ಮಾಡುತ್ತಿದೆಯೆಂಬ ತೀರ್ಮಾನ ಅನಿವಾರ್ಯವಾಗುತ್ತದೆ. ಸಂವಿಧಾನ ನಮ್ಮ ದೇಶದ ಆಳ್ವಿಕೆಯ ಮೂಲಭೂತ ಕಾಯಿದೆ. ಆದ್ದರಿಂದ ಸಂವಿಧಾನದ ತಿದ್ದುಪಡಿ ಅಥವಾ ಪುನರ್ವಿಮರ್ಶೆಯ ಬಗ್ಗೆ ಸರಕಾರ ಅತ್ಯಂತ ಪಾರದರ್ಶಕವಾಗಿ ತನ್ನ ನಿಲುವನ್ನು ವ್ಯಕ್ತಪಡಿಸಬೇಕು.

**ಈ ಸ್ತ್ರೀ**

ಈ ಸ್ತ್ರೀಯಿಂದ ಏನಾಗುವುದು?<br>
ಎಂದು ಹಳಿದವನ<br>
ಇಸ್ತ್ರಿ ಮಾಡಿದಳು<br>
ನನ್ನ ಸ್ತ್ರೀ !

**ಕೊಪ್ಪರಂ ಅನ್ನಪೂರ್ಣ**<br>
ನಂ.೩೮, ೫ನೇ ಟೆಂಪಲ್ ರಸ್ತೆ, ೧೫ನೇ ಅಡ್ಡರಸ್ತೆ<br>
ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

ನಮ್ಮ ಸಂವಿಧಾನದ ಮೊದಲ ನುಡಿ ನಮ್ಮ ದೇಶ ಸರ್ವತಂತ್ರ, ಸ್ವತಂತ್ರ, ಸಮಾಜವಾದಿ, ಜಾತ್ಯಾತೀತ, ಪ್ರಜಾಸತ್ತಾತ್ಮಕ ಗಣರಾಜ್ಯವೆಂದು ಘೋಷಿಸಿದೆ. ಶಾಸಕಾಂಗ, ರಾಜ್ಯಾಂಗ ಮತ್ತು ನ್ಯಾಯಾಲಯಗಳ ಅಧಿಕಾರವ್ಯಾಪ್ತಿಯನ್ನು ನಿಗದಿಪಡಿಸಿದೆ. ಇತರೆ ರಾಷ್ಟ್ರಗಳ ಸಂವಿಧಾನಗಳಿಗೆ ಹೋಲಿಸಿದಲ್ಲಿ ಭಾರತದ ಸಂವಿಧಾನ ಒಂದು ಅಗಾಧ ದಾಖಲೆ. ಅಂದಿನ ನಮ್ಮ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯಲ್ಲಿ ಇಷ್ಟು ವಿಶಾಲವಾದ ಸಂವಿಧಾನ ಅನಿವಾರ್ಯವಾಗಿತ್ತೇನೋ. ಅನೇಕ ರಾಷ್ಟ್ರಗಳ ಸಂವಿಧಾನಗಳ ವಿಶಿಷ್ಟ ಅಂಶಗಳನ್ನು ನಮ್ಮ ಸಂವಿಧಾನದಲ್ಲಿ ಅಳವಡಿಸಲಾಗಿದೆ. ನಮ್ಮ ಸಂವಿಧಾನದ ಭಾಗ-೩ರಲ್ಲಿರುವ ಮೂಲಭೂತ ಹಕ್ಕುಗಳು ಅಮೇರಿಕಾ ಸಂವಿಧಾನದ ಹಕ್ಕುಗಳ ಮಸೂದೆಯಿಂದ ಪ್ರೇರಿತವಾಗಿದ್ದರೆ, ಭಾಗ-೪ರಲ್ಲಿರುವ ರಾಜ್ಯನೀತಿಯ ನಿರ್ದೇಶಕ ನಿಯಮಗಳನ್ನು ಐರಿಷ್ ಸಂವಿಧಾನದಿಂದ, ಕೇಂದ್ರ-ರಾಜ್ಯಗಳ ಸಂಬಂಧ ಕೆನಡಾ ಸಂವಿಧಾನದಿಂದ ಮತ್ತು ಮಂತ್ರಿ ಮಂಡಳದ ಆಡಳಿತ ಹಾಗೂ ಶಾಸಕಾಂಗ-ರಾಜ್ಯಾಂಗಗಳ ಸಂಬಂಧ ಬ್ರಿಟಿಷ್ ಅನುಭವದಿಂದ ಪ್ರೇರೇಪಿತವಾಗಿದೆ. ಸಂವಿಧಾನದ ಅನೇಕ ಕಾಯಿದೆಗಳು ಬ್ರಿಟಿಷ್ ಸರಕಾರ ಆಳ್ವಿಕೆಯಲ್ಲಿದ್ದ ಭಾರತ ಸರಕಾರದ ಕಾಯಿದೆ ೧೯೩೫ರ ಅನುಕರಣೆಯಾಗಿದೆ. ಹೀಗಿದ್ದು ಕೂಡ ಹಲವಾರು ವಿಷಯಗಳು ಸ್ಪಷ್ಟವಾಗಿ ಮೂಡಿಬಂದಿಲ್ಲವೆಂಬ ಅಭಿಪ್ರಾಯವಿದೆ.

**ಪುನರ್ವಿಮರ್ಶೆಗೆ ಅವಕಾಶವಿದೆಯೇ?**

ನಾವು ಸಂವಿಧಾನದ ಮೂಲ ಸ್ವರೂಪವನ್ನಾಗಲೀ ಅಥವಾ ಲಕ್ಷಣಗಳನ್ನಾಗಲೀ ಬದಲಾಯಿಸುವ ಪ್ರಯತ್ನ ಮಾಡುತ್ತಿಲ್ಲ ಎಂದು ಸರಕಾರದ ಸಚಿವರಲ್ಲಿ ಕೆಲವು ಪ್ರಮುಖರು ತಿಳಿಸಿದ್ದಾರೆ. ಈಗಾಗಲೇ ಸರ್ವೋಚ್ಚ ನ್ಯಾಯಾಲಯ ಕೇಶವಾನಂದ ಭಾರತಿ ನಂತರ ಮಿನರ್ವ ಮಿಲ್ಸ್ ಇತ್ಯಾದಿ ಪ್ರಕರಣಗಳಲ್ಲಿ ಪಾರ್ಲಿಮೆಂಟಿಗೆ ಸಂವಿಧಾನದ ಮೂಲಭೂತ ಸ್ವರೂಪವನ್ನು ಬದಲಾಯಿಸುವ ಅಧಿಕಾರ ಸಂವಿಧಾನದತ್ತವಾಗಿಲ್ಲ ಎಂದು ತೀರ್ಪು ನೀಡಿ ಈ ವಿಷಯಕ್ಕೆ ಇತಿಶ್ರೀ ಹೇಳಿದೆ. ಪ್ರಧಾನ ಮಂತ್ರಿ ಮತ್ತು ಇತರೆ ಮಂತ್ರಿಗಳಿಗೆ ನ್ಯಾಯಾಲಯದ ತೀರ್ಪಿನ ಅರಿವಿದೆ. ಹೀಗಿದ್ದಾಗ ಸಂವಿಧಾನದ ಪರಾಮರ್ಶೆಯ ವ್ಯಾಪ್ತಿ ಸೀಮಿತವಾಗುತ್ತದೆ. ಮೂಲ ಲಕ್ಷಣಗಳನ್ನು ಬಿಟ್ಟು ಇತರೆ ಅನುಚ್ಛೇದಗಳಿಗೆ ತಿದ್ದುಪಡಿ ತರುವ ಅಧಿಕಾರ ಪಾರ್ಲಿಮೆಂಟಿಗೆ ಸಂವಿಧಾನದತ್ತವಾಗಿದೆ

ಮತ್ತು ಅದರನ್ವಯ ಕಳೆದ ಐವತ್ತು ವರ್ಷಗಳಲ್ಲಿ ಎಂಬತ್ತು ತಿದ್ದುಪಡಿಗಳನ್ನು ಸಂವಿಧಾನಕ್ಕೆ ತರಲಾಗಿದೆ. ಈ ರೀತಿ ಅಧಿಕಾರ ಪಾರ್ಲಿಮೆಂಟಿಗಿದ್ದು ಅದನ್ನು ಪ್ರಯೋಗಿಸಿ ಈವರೆಗೂ ತಿದ್ದುಪಡಿ ಮಾಡಿರುವ ಚರಿತ್ರೆ ಇದ್ದರೂ, ಸಂವಿಧಾನದ ಮೂಲಭೂತ ಲಕ್ಷಣಗಳನ್ನು ಬದಲಾವಣೆ ಮಾಡಲು ಪಾರ್ಲಿಮೆಂಟಿಗೆ ಅಧಿಕಾರವಿಲ್ಲವೆಂದು ಗೊತ್ತಿದ್ದರೂ ಮತ್ತು ತಾವು ಆ ರೀತಿ ಆಲೋಚನೆಗಳನ್ನು ಹೊಂದಿಲ್ಲವೆಂದು ಕೇಂದ್ರ ಸರಕಾರದ ಮಂತ್ರಿಗಳು ಹೇಳುತ್ತಿದ್ದರೂ ಯಾಕೆ ಪುನರ್ವಿಮರ್ಶೆಯ ಬಗ್ಗೆ ಇಷ್ಟೊಂದು ವಾದ ವಿವಾದಗಳು ಎದ್ದಿವೆ ಎಂಬುದು ಸೂಕ್ಷ್ಮವಾಗಿ ಪರಿಶೀಲಿಸಬೇಕಾದ ಅಂಶ.

ಭಾರತದ ಸಂವಿಧಾನದ ಮುನ್ನುಡಿಯ ಪ್ರಕಾರ ನಮ್ಮ ಸಂವಿಧಾನವು ಜನತೆಯಿಂದ ರಚಿಸಲ್ಪಟ್ಟಿದೆ. ಮತ್ತು ಸಂವಿಧಾನದ ಮೂಲ ಅಧಿಕಾರವು ಜನತೆಯಿಂದ ಲಭಿಸಿದೆ. ಅಂದರೆ ಸಂವಿಧಾನದ ಪುನರ್ವಿಮರ್ಶೆಯಾಗಬೇಕೆಂಬುದು ಜನತೆಯ ಆದೇಶವಾಗಬೇಕು. ಅವರ ನೇರ ಪ್ರತಿನಿಧಿಗಳಿಂದ ವಿಮರ್ಶೆ ನಡೆಯಬೇಕು. ಇಂತಹ ವಿಮರ್ಶೆಗೆ ಜನತೆ ಹಾತೊರೆಯುತ್ತಿದೆಯೇ, ಈಗಿನ ಕೇಂದ್ರಸರಕಾರವನ್ನು ನಡೆಸುತ್ತಿರುವ ಪಕ್ಷಗಳು ಈ ರೀತಿ ಜನಾದೇಶವನ್ನು ಕೇಳಿ ಪಡೆದಿದ್ದಾರೆಯೆ ಎಂಬ ಪ್ರಶ್ನೆಗಳು ನಮ್ಮ ಮುಂದೆ ನಿಲ್ಲುತ್ತವೆ. ನಮ್ಮ ಸಂವಿಧಾನ ಈವರೆಗೂ ಯಶಸ್ವಿಯಾಗಿ ತನ್ನ ಗುರಿ ಸಾಧಿಸಿದೆ ಎಂದರೆ ಅದು ವಸ್ತುನಿಷ್ಠ ಅಭಿಪ್ರಾಯವಾಗುವುದಿಲ್ಲ.

ಐವತ್ತು ವರ್ಷಗಳ ನಂತರವೂ ಬಡತನ, ಅನಕ್ಷರತೆ, ಅನಾರೋಗ್ಯ ಮುಂತಾದ ಸಾಮಾಜಿಕ ಪಿಡುಗುಗಳು ನಿರ್ಮೂಲನವಾಗಿರುವುದಿಲ್ಲ. ಅದಕ್ಕೆ ಸಂವಿಧಾನವೊಂದೇ ಕಾರಣವೇ? ಕೇಂದ್ರದ ಮತ್ತು ರಾಜ್ಯಗಳ ನಡುವಿನ ಬಿರುಕು, ನ್ಯಾಯಾಂಗ ಮತ್ತು ಶಾಸಕಾಂಗಗಳ ನಡುವಿನ ತಿಕ್ಕಾಟ, ರಾಜ್ಯಪಾಲರ ನೇಮಕಾತಿಯಲ್ಲಿರುವ ರಾಜಕೀಯ ಮತ್ತು ಸ್ವತಃ ರಾಜ್ಯಪಾಲರ ರಾಜಕೀಯ, ಚುನಾವಣಾ ಪ್ರಕ್ರಿಯೆಯಲ್ಲಿರುವ ದೋಷಗಳು ಇತ್ಯಾದಿ ಅನೇಕ ನ್ಯೂನತೆಗಳನ್ನು ಸಂವಿಧಾನದಲ್ಲಿ ಸರಿಪಡಿಸುವ ಅಗತ್ಯವಿದೆ. ಬಂಡವಾಳಶಾಹಿ ವ್ಯವಸ್ಥೆಯ ಗರ್ಭದಿಂದ ಹುಟ್ಟಿ ಬರುತ್ತಿರುವ ಶೋಷಣೆಗೆ ಕೇವಲ ಸಂವಿಧಾನಾತ್ಮಕ ಪರಿಹಾರ ಸಿಗಲು ಸಾಧ್ಯವಿಲ್ಲ ಎಂಬ ಕೂಗು ಕೇಳಿಬರುತ್ತಲೇ ಇದೆ. ಆದರೆ ಸಂವಿಧಾನವನ್ನು ಧಿಕ್ಕರಿಸಿ ಹೊಸ ರಾಜ್ಯವ್ಯವಸ್ಥೆಯನ್ನು ಸೃಷ್ಟಿಸುವ ರಾಜಕೀಯ ಆಕಾಂಕ್ಷೆಗೆ ಗರಿ ಕೆದರಿದರೂ ಹಾರಲಾಗಲಿಲ್ಲ.

ಹಾಗಾದರೆ ಭಾರತೀಯ ಜನತಾ ಪಕ್ಷ ಮತ್ತು ಅದರ ಮಿತ್ರ ಪಕ್ಷಗಳು ಸಂವಿಧಾನದ ಪುನರ್ವಿಮರ್ಶೆಯ ಬಗ್ಗೆ ಮುಂದಿಟ್ಟಿರುವ ಪ್ರಸ್ತಾವನೆ ಏಕೆ ಇಷ್ಟೊಂದು ಆತಂಕವನ್ನು ಹುಟ್ಟಿಸಿದೆ ಎಂಬ ಪ್ರಶ್ನೆ ಕಾಡುತ್ತದೆ. ಶ್ರೀ. ರಾಂ ಜೇತಮಲಾನಿಯವರ ಪ್ರಕಾರ ಕೇಂದ್ರ-ರಾಜ್ಯಗಳ ಸಂಬಂಧ, ಪರಿಶಿಷ್ಟ ಜಾತಿ ಮತ್ತು ವರ್ಗಗಳ ತೀವ್ರ ಸಮಸ್ಯೆಗಳ ಪರಿಹಾರ, ಅಧ್ಯಕ್ಷೀಯ ಮಾದರಿ ಸರಕಾರ, ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯ ಹಾಗೂ ಅಧಿಕಾರ, ರಾಜ್ಯ ಸರಕಾರಗಳನ್ನು ವಜಾ ಮಾಡುವ ಕೇಂದ್ರದ ಅಧಿಕಾರ, ಇತ್ಯಾದಿಗಳ ಬಗ್ಗೆ ತಜ್ಞರ ಸಮಿತಿ ಸಂವಿಧಾನವನ್ನು ಪರಿಶೀಲಿಸಿ ತನ್ನ ವರದಿಯನ್ನು ನೀಡುತ್ತದೆ. ಇಷ್ಟೇ ಆಗಿದ್ದರೆ ಅದನ್ನು ಸಂವಿಧಾನದ ಪುನರ್ವಿಮರ್ಶೆ ಎಂದು ಕರೆಯಬೇಕಾಗಿರಲಿಲ್ಲ ಮತ್ತು ತಜ್ಞರ ಸಮಿತಿಯ ಆವಶ್ಯಕತೆ ಇರಲಿಲ್ಲ. ಸಂವಿಧಾನಕ್ಕೆ ಕೆಲವು ತಿದ್ದುಪಡಿಗಳನ್ನು ತರುವ ಮೂಲಕ ಬದಲಾವಣೆ ತರಬಹುದಾಗಿತ್ತು.

ನಮ್ಮ ಸಂವಿಧಾನ ಒಂದು ಬಲವಾದ ಕೇಂದ್ರವನ್ನು ಸೃಷ್ಟಿಸಿದೆ. ಕೇಂದ್ರಕ್ಕೆ ರಾಜ್ಯಗಳಿಗಿಂತ ಹೆಚ್ಚಿನ ಸಂಪನ್ಮೂಲಗಳನ್ನು ಒದಗಿಸಿದೆ. ಅಧಿಕಾರ ಕೇಂದ್ರೀಕೃತವಾಗಿದೆ. ಈ ಬಗ್ಗೆ ಅನೇಕ ರಾಜ್ಯಗಳು ಅತೃಪ್ತಿ ವ್ಯಕ್ತಪಡಿಸುತ್ತಲೇ ಬಂದಿವೆ. ಈ ವಿಷಯವಾಗಿ ಸರ್ಕಾರಿಯ ಆಯೋಗದ ಶಿಫಾರಸ್ಸುಗಳು ಸರಕಾರದ ಮುಂದಿದೆ. ಈ ಶಿಫಾರಸ್ಸುಗಳನ್ವಯ ರಾಜ್ಯಗಳಿಗೆ ಹೆಚ್ಚು ಅಧಿಕಾರ ಮತ್ತು ಹೆಚ್ಚು ಸಂಪನ್ಮೂಲಗಳನ್ನು ಕೊಡುವುದಾದಲ್ಲಿ ಅದಕ್ಕೆ ಸಂವಿಧಾನದ ಪುನರ್ವಿಮರ್ಶೆ ಅಗತ್ಯವೇನಿಲ್ಲ. ಕೆಲವು ತಿದ್ದುಪಡಿಗಳ ಮೂಲಕ ಅದನ್ನು ಜಾರಿಗೆ ತರಬಹುದು. ಅದೇ ರೀತಿ ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯ ಮತ್ತು ಅಧಿಕಾರ ಹಾಗೂ ಪರಿಶಿಷ್ಟ ವರ್ಗಗಳ ಸಮಸ್ಯೆಯ ಬಗ್ಗೆ ಹೆಚ್ಚಿನ ಕಾಳಜಿಯನ್ನು ಸಂವಿಧಾನದಲ್ಲಿ ತರಬೇಕೆಂದು ಬಯಸಿದಲ್ಲಿ ಅದಕ್ಕೆ ಪುನರ್ವಿಮರ್ಶೆಯ ಅಗತ್ಯವಿಲ್ಲ. ರಾಜ್ಯಗಳನ್ನು ವಜಾ ಮಾಡುವ ಕೇಂದ್ರದ ಅಧಿಕಾರ ಮತ್ತು ಅನುಚ್ಛೇದ ೩೫೬ರ ಬಳಕೆಯ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಎಸ್. ಆರ್. ಬೊಮ್ಮಾಯಿ ಪ್ರಕರಣದಲ್ಲಿ ತನ್ನ ತೀರ್ಪು ನೀಡಿದೆ. ಇದೆಲ್ಲ ಪ್ರಧಾನ ಮಂತ್ರಿಗಳಿಗೆ ಮತ್ತು ಅವರ ಸಹೋದ್ಯೋಗಿಗಳಿಗೆ ಗೊತ್ತಿಲ್ಲವೆಂದಲ್ಲ. ಹಾಗಿದ್ದೂ ಪುನರ್ವಿಮರ್ಶೆಯ ಅಗತ್ಯವೇನು ?

## ಸರ್ವಾಧಿಕಾರಿ ಮನೋಭಾವ

ಭಾರತೀಯ ಜನತಾ ಪಕ್ಷವು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ರಾಜಕೀಯ ಮುಖ ಎಂಬುದು ಗುಟ್ಟೇನಲ್ಲ. ಸರ್ವಾಧಿಕಾರ ವ್ಯವಸ್ಥೆಯನ್ನು ಮೆಚ್ಚುವ ಆರ್.ಎಸ್.ಎಸ್.ಗೆ ಪಾರ್ಲಿಮೆಂಟರಿ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿಲ್ಲ. ಆರ್.ಎಸ್.ಎಸ್.ನ ಶಾಖೆಗಳಲ್ಲಿ ಬೆಳೆದ ಬಿ.ಜೆ.ಪಿ.ಯ ಹಲವಾರು ಮುಖಂಡರು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಟೀಕಿಸುತ್ತಲೇ ಬಂದಿದ್ದಾರೆ. ಇವರಿಗೆ ಕೇಂದ್ರೀಕೃತ ಅಧಿಕಾರ ಹೆಚ್ಚು ಪ್ರಿಯ. ಆದ್ದರಿಂದ ಅಧ್ಯಕ್ಷೀಯ ಮಾದರಿ ಆಡಳಿತ ವ್ಯವಸ್ಥೆ ಇವರ ಹಂಬಲ. ಸಂವಿಧಾನದ ಪುನರ್ವಿಮರ್ಶೆಯ ಹೆಸರಿನಲ್ಲಿ ತಮ್ಮ ಪ್ರಮುಖ ಗುರಿಗಳನ್ನು ಸಂವಿಧಾನದಲ್ಲಿ ಅಳವಡಿಸುವ ಪ್ರಯತ್ನ ಇಲ್ಲಿ ನಡೆಯುತ್ತಿದೆ. ಅದಕ್ಕಾಗಿ, ಅನುಚ್ಛೇದ ೭೩,೭೪,೧೬೩ ರಿಂದ ೧೬೭ ಗಳನ್ನು ಬದಲಾಯಿಸುವ ಸನ್ನಾಹ ನಡೆದಿದೆ. ಈಗಿರುವ ಅನುಚ್ಛೇದ ೧೦೨ ಮತ್ತು ೧೯೧ರಲ್ಲಿ (ಸಂಸತ್ತಿನ ಸದಸ್ಯತ್ವದ ಅನರ್ಹತೆಯ ಪಟ್ಟಿ) ವಿದೇಶಿ ಮೂಲದ ವ್ಯಕ್ತಿಯನ್ನು ಸೇರಿಸುವ ಪ್ರಯತ್ನವಿದೆ. ಇದು ಅವರ ಹಿಂದೂ ರಾಷ್ಟ್ರದ ಪರಿಕಲ್ಪನೆಗನುಗುಣವಾಗಿದೆ. ಅದೇ ರೀತಿ ಸಂವಿಧಾನದ ಮುನ್ನುಡಿಯಲ್ಲಿರುವ ಸಮಾಜವಾದ ಮತ್ತು ಧರ್ಮ ನಿರಪೇಕ್ಷತೆಯ ಬಗ್ಗೆ ಇರುವ ಪದಗಳನ್ನು ಅಳಿಸಿಹಾಕುವ ಪ್ರಯತ್ನವೂ ಇದೆ. ಜಾಗತೀಕರಣ, ಉದಾರೀಕರಣ ಮತ್ತು ಮುಕ್ತ ಮಾರುಕಟ್ಟೆಯನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಸಂವಿಧಾನ ಸಮಾಜವಾದವನ್ನು ಉಚ್ಚರಿಸಲು ಸಾಧ್ಯವೆ ಎಂಬುದು ಇವರ ವಾದ. ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ನಂತರ ಸಮಾಜವಾದ ಅಪ್ರಸುತ್ತವೆಂದು ವಾದಿಸಲಾಗುತ್ತಿದೆ. ಗ್ಯಾಟ್‌ನ ಪ್ರಕಾರ ಯಾವುದೇ ಸದಸ್ಯ ರಾಷ್ಟ್ರದ ಸಾರ್ವಭೌಮತ್ವ ಕಾನೂನು ಇತರೆ ಸದಸ್ಯ ರಾಷ್ಟ್ರಗಳಿರುವ ಮುಕ್ತ ಮಾರುಕಟ್ಟೆಯ ಹಕ್ಕುಗಳಲ್ಲಿ ಮಧ್ಯೆ ಪ್ರವೇಶಿಸುವಂತಿಲ್ಲ. ಗ್ಯಾಟ್ ಕಾನೂನು ಅಮೆರಿಕ ಸಂವಿಧಾನಕ್ಕಿಂತ ಶ್ರೇಷ್ಠವೇ ಎಂಬ ವಿವಾದ ಅಮೆರಿಕದ ಸರ್ವೋಚ್ಚ ನ್ಯಾಯಾಲಯದ ಮುಂದೆ ಇದೆ. ದಿನನಿತ್ಯ ಖಾಸಗೀಕರಣ, ಮುಕ್ತ ಮಾರುಕಟ್ಟೆ, ವಿದೇಶಿ ಬಂಡವಾಳ, ಇತ್ಯಾದಿಗಳ ಬಗ್ಗೆ ಪ್ರವಚನ ನೀಡುವ ಬಿ.ಜೆ.ಪಿ. ರಾಜಕಾರಣಿಗಳಿಗೆ ಸಂವಿಧಾನದಲ್ಲಿ ಸಮಾಜವಾದದ ಉಲ್ಲೇಖ ಅಸಂಬದ್ಧವಾಗಿ ಕಾಣುತ್ತದೆ. ಸರ್ವೋಚ್ಚ ನ್ಯಾಯಾಲಯ ಸಂವಿಧಾನದ ಮುನ್ನುಡಿಯನ್ನು ಅದರ ಒಂದು ಭಾಗವೆಂದು ಪರಿಗಣಿಸಬೇಕೆಂದು ತೀರ್ಮಾನಿಸಿದೆ. ಅನೇಕ ಪ್ರಕರಣಗಳಲ್ಲಿ ಸಮಾಜವಾದದ ಉಲ್ಲೇಖವನ್ನು ಆಧರಿಸಿ ತೀರ್ಪನ್ನು ನೀಡಿದೆ. ಭಾರತವನ್ನು ಒಂದು ಧರ್ಮಾಧಾರಿತ ರಾಷ್ಟ್ರವನ್ನಾಗಿ ಮಾಡುವ ಹೊಂಚು ಕೂಡ ಬಿ.ಜೆ.ಪಿ. ಮತ್ತು ಸಂಘ ಪರಿವಾರದಲ್ಲಿದೆ. ಮತ್ತೊಂದು ಪ್ರಮುಖ ಬದಲಾವಣೆಗಾಗಿ ಬಿ.ಜೆ.ಪಿ. ಪರಿತಪಿಸುತ್ತಿರುವುದು ಐದು ವರ್ಷಗಳ ಲೋಕಸಭೆಯ ಸ್ಥಿರ ಅವಧಿಗಾಗಿ. ಸರ್ಕಾರದ ಸ್ಥಿರತೆಗಾಗಿ ಈ ಬದಲಾವಣೆ ಅತಿ ಆವಶ್ಯಕ ಎಂದು ಇವರ ವಾದ. ಆದರೆ ಇಂದು ಜನ ಬಯಸುತ್ತಿರುವುದು ಸಮಾಜದ ಸ್ಥಿರತೆ. ೧೯೭೧ರಲ್ಲಿ ಭಾರಿ ಬಹುಮತ ಗಳಿಸಿಯೂ ೧೯೭೫ರಲ್ಲಿ ತುರ್ತು ಪರಿಸ್ಥಿತಿಯನ್ನು ಕಾಂಗ್ರೆಸ್ ಪಕ್ಷ ತಂದೊಡ್ಡಿತು. ನಂತರ ರಾಜೀವ ಗಾಂಧಿ ಪ್ರಚಂಡ ಬಹುಮತ ಗಳಿಸಿಯೂ ಪೂರ್ಣಾವಧಿ ಸರಕಾರ ನಡೆಸಲಾಗಲಿಲ್ಲ. ಬಿ.ಜೆ.ಪಿ.ಯ ಈ ಬಯಕೆ ಕೂಡ ಸಂವಿಧಾನಾತ್ಮಕವಾಗಿಲ್ಲ. ಈ ಕಾರಣಕ್ಕಾಗಿ ಸಂವಿಧಾನದ ಪುನರ್ ಪರಿಶೀಲನೆಯ ಇವರ ಪ್ರಯತ್ನವನ್ನು ಅತಿ ಅನುಮಾನದಿಂದ ನೋಡಬೇಕಾಗುತ್ತದೆ ಮತ್ತು ವಿರೋಧಿಸಬೇಕಾಗುತ್ತದೆ.

ಬೃಹದಾಕಾರವಾಗಿ ಬೆಳೆದು ನಿಂತಿರುವ ಭ್ರಷ್ಟಾಚಾರವನ್ನು ತೊಡೆದು ಹಾಕಲು, ಮಹಿಳೆಯರನ್ನು ಸಶಕ್ತಗೊಳಿಸಲು, ಜನತೆಯ ಹಕ್ಕುಗಳನ್ನು ಸಂರಕ್ಷಿಸಲು, ಕೇಂದ್ರ-ರಾಜ್ಯಗಳ ನಡುವೆ ಸಮಾನ ಸಂಪನ್ಮೂಲಗಳ ಹಂಚಿಕೆಗಾಗಿ, ಅಲ್ಪಸಂಖ್ಯಾತರ ಹಾಗೂ ದಲಿತರ ಹಕ್ಕುಗಳ ಸಂರಕ್ಷಣೆಗಾಗಿ, ಇತರ ಜನಪರ ವಿಷಯಗಳ ಪೂರಕವಾಗಿ ಸಂವಿಧಾನ ಪುನರ್ ವಿಮರ್ಶೆಯಾದಲ್ಲಿ ಜನತೆ ಒಕ್ಕೊರಲಿನಿಂದ ಬೆಂಬಲ ಸೂಚಿಸುವುದರಲ್ಲಿ ಸಂಶಯವಿಲ್ಲ.

ಹೀಗಾಗಿ ಸಂವಿಧಾನವನ್ನು ಹೊಸದಾಗಿ ಬರೆದಿಡುವುದರಿಂದ ಅದ್ಭುತವಾದ್ದೇನೂ ಸಿದ್ಧಿಸುವುದಿಲ್ಲ.

**ಮುರಳಿಧರ್**
ವಕೀಲರು, ಎ.ಐ.ಟಿ.ಯು.ಸಿ. ಕಾನೂನು ಘಟಕ, ಬೆಂಗಳೂರು.

# ಗರ್ಭನಿರೋಧಕ ಲಸಿಕೆ

ಹೊಸದೆಹಲಿಯ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಇಮ್ಯುನಾಲಜಿಯಲ್ಲಿ ಹಲವಾರು ದೇಶಗಳ ವಿಜ್ಞಾನಿಗಳು ಹಾಗೂ ವೈದ್ಯರು ಒಟ್ಟು ಸೇರಿ 'ರಿಪ್ರೊಡಕ್ಟಿವ್ ಇಮ್ಯುನಾಲಜಿ'ಯಲ್ಲಿ ನಡೆಯುತ್ತಿರುವ ಸಂಶೋಧನೆಯ ಬಗ್ಗೆ ಕೆಲ ತಿಂಗಳ ಹಿಂದೆ ಚರ್ಚಿಸಿದರು. ಜನಸಂಖ್ಯೆ ನಿಯಂತ್ರಣಕ್ಕಾಗಿ ತಯಾರಿಸಲಾದ ಗರ್ಭನಿರೋಧಕ ಲಸಿಕೆಗಳ ಇತ್ತೀಚಿನ ಸಂಶೋಧನೆ ಹಾಗೂ ಬೆಳವಣಿಗೆಯ ಬಗ್ಗೆ ವ್ಯಾಪಕ ಚರ್ಚೆ ಅಲ್ಲಿ ನಡೆಯಿತು. ಲಸಿಕೆಯು ಪರಿಣಾಮಕಾರಿಯಾದುದಲ್ಲ, ಸುರಕ್ಷಿತವಾದುದಲ್ಲ ಹಾಗೂ ಅದನ್ನು ಉಪಯೋಗಿಸಿ ನಿಲ್ಲಿಸಿದ ನಂತರ ಹುಟ್ಟುವ ಮಕ್ಕಳ ದೈಹಿಕ ಹಾಗೂ ಮಾನಸಿಕ ಆರೋಗ್ಯದ ಬಗ್ಗೆ ಖಾತರಿ ಕೊಡುವಂತಹುದಲ್ಲ. ಈ ನಿಟ್ಟಿನಲ್ಲಿ ಮೂರು ದಶಕಗಳಿಂದ ಸಂಶೋಧನೆ ನಡೆಯುತ್ತಿದ್ದರೂ ಕೆಲವು ನ್ಯೂನತೆಗಳು ಕಂಡುಬಂದಿವೆ. ಅವು ಯಾವುವೆಂದರೆ,

ಅ. ಅಲ್ಪ ಪರಿಣಾಮಕಾರಿ;

ಆ. ದೇಹದ ರಕ್ಷಣಾ ವ್ಯವಸ್ಥೆಯಲ್ಲಿ ಏರುಪೇರು;

ಇ. ಲಸಿಕೆಯು ಸಂಪೂರ್ಣ ಪರಿಣಾಮಕಾರಿ ವಿಧಾನವೆಂದು ಸಾಬೀತಾಗುವ ಮುಂಚೆಯೇ ಪ್ರಯೋಗಿಸುವುದು;

ಈ. ಸ್ತ್ರೀ ಇಷ್ಟಪಡದಿದ್ದಲ್ಲಿ ಹಾಗೂ ಅದನ್ನು ತೆಗೆದುಕೊಳ್ಳುವಾಗ ದುಷ್ಪರಿಣಾಮಗಳ ಅನುಭವವಾದರೆ ನಿಲ್ಲಿಸುವ ಸ್ವಾತಂತ್ರ್ಯವಿಲ್ಲ.

ಮಹಿಳೆಯರನ್ನು ದುಷ್ಪರಿಣಾಮಗಳಿಗೆ ಒಡ್ಡುವುದು ನ್ಯಾಯಯುತವೆ ? ಈ ಲಸಿಕೆಯ ಪ್ರಯೋಗದಿಂದ ಅಲರ್ಜಿಯಂತಹ ತೊಂದರೆಗಳು (ಜೀವಕ್ಕೆ ಅಪಾಯ ತರುವಂತಹವುಗಳು) ಉಂಟಾಗಬಹುದು. ರೋಗ ನಿರೋಧಕ ಶಕ್ತಿ ಕುಗ್ಗಿ ಹಲವಾರು ಸೋಂಕುಗಳಿಗೀಡಾಗ ಬಹುದು ಹಾಗೂ ಶಾಶ್ವತ ಬಂಜೆತನ ಉಂಟಾಗಬಹುದು.

ಗರ್ಭನಿರೋಧಕ ಲಸಿಕೆಗಳು ಯೋಗ್ಯವೋ ಅಲ್ಲವೋ ಎಂಬುದರ ಬಗ್ಗೆ ಚಿಂತಿಸಬೇಕಿದೆ. ಇದನ್ನು ಸ್ತ್ರೀಯ ಒಪ್ಪಿಗೆ ಇರಲಿ, ಇಲ್ಲದಿರಲಿ ಸುಲಭವಾಗಿ ನೀಡಬಹುದಾಗಿದೆ. ಸಂಶೋಧನೆಯ ಗುರಿಯೇನೆಂದರೆ ಒಂದು ಬಾರಿ ಲಸಿಕೆ ಪ್ರಯೋಗ ಮಾಡಿದರೆ ಕನಿಷ್ಠ ಒಂದರಿಂದ ಎರಡು ವರ್ಷಗಳಾದರೂ ಪರಿಣಾಮ ಬೀರುವಂತಿರಬೇಕು. ಮಧ್ಯದಲ್ಲಿ ಅದರಿಂದ ದುಷ್ಪರಿಣಾಮಗಳುಂಟಾದರೆ ನಿಲ್ಲಿಸುವುದು ಅಸಾಧ್ಯ. ಅಲ್ಲದೆ, ಲಸಿಕೆಯ ದುರುಪಯೋಗವಾಗದಂತೆ ನೋಡಿಕೊಳ್ಳುವುದೂ ಆವಶ್ಯಕ.

ಗರ್ಭನಿರೋಧಕ ಲಸಿಕೆಯ ಸಂಶೋಧನೆಯು ಸಾಮಾಜಿಕವಾಗಿ ಹಾಗೂ ನೈತಿಕವಾಗಿ ಕೆಟ್ಟ ಪರಿಣಾಮ ಬೀರುವುದು ಚರ್ಚೆಯಲ್ಲಿ ಯಾರ ಗಮನಕ್ಕೂ ಬರಲಿಲ್ಲ. ಜನಸಂಖ್ಯೆ ನಿಯಂತ್ರಣದ ಉದ್ದೇಶಕ್ಕಾಗಿ ಮಹಿಳೆಯರು ಅಪಾಯಕರ ಗರ್ಭನಿರೋಧಕ ವಿಧಾನಗಳಿಗೆ ಬಲಿಪಶುವಾಗುತ್ತಿದ್ದಾರೆ ಎಂಬುದು ಈ ಸಂಶೋಧಕರಿಗೆ ತೀರಾ ಗೌಣವಾಗಿ ಕಂಡಿರಬೇಕು. ಸಂಶೋಧನೆಯು ಜನರ ಆರೋಗ್ಯ ರಕ್ಷಣೆ ಮಾಡುವುದರ ಬಗ್ಗೆ ಹಾಗೂ ಗರ್ಭಧಾರಣೆ ಬಗ್ಗೆ ಸ್ವಯಂ ನಿರ್ಧಾರ ತೆಗೆದುಕೊಳ್ಳುವಂತಹವರ ಬಗ್ಗೆ ಇರಬೇಕಾದುದು ಆವಶ್ಯಕವೆಂಬ ಕನಿಷ್ಠಮಟ್ಟದ ತಿಳಿವಳಿಕೆಯೂ ಸಂಶೋಧಕರಿಗೆ ಬೇಡವೆ ?

**ಗರ್ಭನಿರೋಧಕ ಲಸಿಕೆಯ ನಿರ್ಬಂಧ**

ಅನೇಕ ಮಹಿಳಾ ಸಂಘಟನೆಗಳ ಸದಸ್ಯರು ದೆಹಲಿಯಲ್ಲಿ ಅಂತರರಾಷ್ಟ್ರೀಯ ಪ್ರತಿರಕ್ಷಣಾ ವಿಜ್ಞಾನ ಸಮ್ಮೇಳನದ ಉದ್ಘಾಟನೆ ನಡೆಯುವ ಸ್ಥಳದ ಹೊರಗೆ ಗರ್ಭನಿರೋಧಕ ಲಸಿಕೆಯ ಅನೈತಿಕ ಸಂಶೋಧನೆ ಮತ್ತು ಅದರ ಬೆಳವಣಿಗೆಯ ಮೇಲೆ ಶೀಘ್ರವೇ ನಿರ್ಬಂಧ ವಿಧಿಸಬೇಕೆಂದು ಒತ್ತಾಯಿಸಿದರು.

ಏಕೆಂದರೆ ಇದು ಮಹಿಳೆಯರ ಸ್ವಾಸ್ಥ್ಯಕ್ಕೆ ಹಾನಿಕರವಾಗಿದೆ ಮತ್ತು ಅದರಿಂದಾಗುವ ದುಷ್ಪರಿಣಾಮಗಳು ಅಧಿಕ. ಈ ಮೂಲಕ ಜನಸಂಖ್ಯೆ ನಿಯಂತ್ರಣ ಮಾಡಲು ಹೊರಟಿರುವುದು ಜನ ವಿರೋಧಿ ಮತ್ತು ಮಹಿಳಾ ವಿರೋಧಿ ನೀತಿಯೆಂದು ಅವರು ಪ್ರತಿಪಾದಿಸಿದ್ದಾರೆ. ಸಮ್ಮೇಳನದಲ್ಲಿ ಭಾಗವಹಿಸುತ್ತಿದ್ದ ವಿಜ್ಞಾನಿಗಳು ಈ ಗರ್ಭನಿರೋಧಕ ಲಸಿಕೆ ಸಾಮಾಜಿಕವಾಗಿ ಹಾಗೂ ನೈತಿಕವಾಗಿ ನ್ಯಾಯಯುತವಾಗಿದೆ ಎಂದು ಮಹಿಳಾ ಸಂಘಟನೆಗಳಿಗೆ ದೃಢಪಡಿಸಲು ಅಸಮರ್ಥರಾದರು.




ಸಿ.ಪಿ.ಕೆ.
೨೨೬೫/೧೯, 'ಭಾರತಿ', ೬ನೇ ಕ್ರಾಸ್, ವಿನಾಯಕ ನಗರ
ಮೈಸೂರು-೫೭೦ ೦೧೨

ಮಹಿಳಾ ಸಂಘಟನೆಗಳು ಹೇಳುವುದೇನೆಂದರೆ ಗರ್ಭನಿರೋಧಕ ಲಸಿಕೆಯ ವಿರುದ್ಧ ಹೋರಾಡುತ್ತಿರುವ ಉದ್ದೇಶವು ಮಹಿಳೆ "ಗರ್ಭ ಧರಿಸುವುದೇ ಒಂದು ರೋಗ" ಎಂದು ಪರಿಗಣಿಸುತ್ತಿರುವುದರಿಂದ ಹಾಗೂ ಈ ಲಸಿಕೆಯ ಪ್ರಯೋಗದಿಂದ ಸ್ತ್ರೀಯರ ರೋಗನಿರೋಧಕ ಶಕ್ತಿ ಕುಗ್ಗಿ ಅನೇಕ ರೋಗಗಳಿಗೆ ಬಲಿಯಾಗುವುದಲ್ಲದೆ ಶಾಶ್ವತವಾಗಿ ಬಂಜೆತನವೂ ಉಂಟಾಗಬಹುದಾದ್ದರಿಂದ ಲಸಿಕೆಯ ಸಂಶೋಧನೆಯನ್ನು ನಿಲ್ಲಿಸಲೇಬೇಕೆಂಬುದಾಗಿದೆ.

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿರ್ಬಂಧಿಸಿದ ಲಸಿಕೆಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ತ್ರೀಯರ ಮೇಲೆ ಪರೀಕ್ಷಿಸಲು ಉಪಯೋಗಿಸಲಾಗುತ್ತದೆ. ಇವುಗಳನ್ನು ಹೆಚ್ಚಾಗಿ ಅನಕ್ಷರಸ್ಥ ಮಹಿಳೆಯರ ಮೇಲೆ ಪ್ರಯೋಗಿಸಲಾಗುತ್ತಿದೆ. ಅವರಿಗೆ ಅದರಿಂದುಂಟಾಗುವ ದುಷ್ಪರಿಣಾಮಗಳ ಬಗ್ಗೆ ಅರಿವೇ ಇರುವುದಿಲ್ಲ. ಗರ್ಭನಿರೋಧಕಗಳು ಸುರಕ್ಷಿತವಾಗಿರಬೇಕಲ್ಲವೆ? ಅದರ ಬಗ್ಗೆ ಮಹಿಳೆಯರಿಗೆ ಸಂಪೂರ್ಣ ಜ್ಞಾನವಿರಬೇಕಾದುದು ಬಹು ಮುಖ್ಯ. ಎಚ್.ಸಿ.ಜಿ. ವಿರೋಧಿ ಲಸಿಕೆಯನ್ನು ದೆಹಲಿ, ಮುಂಬಯಿ ಹಾಗೂ ಚಂಡೀಗಢದಲ್ಲಿ ಮಹಿಳೆಯರ ಮೇಲೆ ಪ್ರಯೋಗಾತ್ಮಕವಾಗಿ ನೀಡಲಾಗುತ್ತಿದೆ. ಈ ಲಸಿಕೆಯ ಸುರಕ್ಷತೆಯ ಬಗ್ಗೆ ಯಾವುದೇ ಪ್ರಾಯೋಗಿಕ ಆಧಾರಗಳಿಲ್ಲ.

ದೆಹಲಿಯಲ್ಲಿನ ಮಹಿಳಾ ಸಂಘಟನೆಗಳಲ್ಲೊಂದಾದ ಸಹೇಲಿಯು ಹೇಳುತ್ತಿರುವುದೇನೆಂದರೆ "ಪ್ರಪಂಚದೆಲ್ಲೆಡೆ ಕ್ರೂರವಾದ ಸಂಶೋಧನೆ ನಡೆಯುತ್ತಿದೆ. ಗರ್ಭನಿರೋಧಕ ಲಸಿಕೆಯ ಪ್ರಯೋಗಕ್ಕೆ ಸ್ತ್ರೀ ದೇಹ ಉಚಿತವಾಗಿ ಗುರಿಯಾಗುವ ಸ್ಥಳವಾಗಿದೆ." ಪ್ರಾಣಿಗಳ ಮೇಲೆ ಹೆಚ್ಚಿನ ಅಥವಾ ನಿರ್ಣಾಯಕ ಪ್ರಯೋಗಗಳನ್ನು ನಡೆಸದೆ ಮನುಷ್ಯರ ಮೇಲೆ ನೇರವಾಗಿ ಪ್ರಯೋಗ ನಡೆಸುವುದು ಸರಿಯಲ್ಲವೆಂಬುದು ಪ್ರಯೋಗ ವಿಜ್ಞಾನದ ಇತಿಹಾಸ ಬಲ್ಲವರಿಗೆಲ್ಲಾ ತಿಳಿದಿದೆ.

ನಮ್ಮ ದೇಶದಲ್ಲಿ ಶೇಕಡಾ ೬೦ ಭಾಗ ಮಹಿಳೆಯರು ರಕ್ತಹೀನತೆ ಹಾಗೂ ನ್ಯೂನ ಪೋಷಣೆಯಿಂದ ಬಳಲುತ್ತಿದ್ದಾರೆ. ಅವರಿಗೆ ಸಾಕಷ್ಟು ಉತ್ತಮ ಆಹಾರ, ಶುದ್ಧವಾದ ನೀರು ಹಾಗೂ ಪ್ರಾಥಮಿಕ ಆರೋಗ್ಯ ರಕ್ಷಣೆಯ ಬಗ್ಗೆ ತಿಳುವಳಿಕೆಯಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರ ಆರೋಗ್ಯವನ್ನು ಇನ್ನಷ್ಟು ಹದಗೆಡಿಸುವ ಹಾಗೂ ಜೀವನಪೂರ್ತಿ ಕಾಯಿಲೆಯಿಂದ ನರಳಬೇಕಾದ ಪರಿಸ್ಥಿತಿ ತಂದೊಡ್ಡುವಂತಹ ಗರ್ಭನಿರೋಧಕ ಲಸಿಕೆಯ ಅವಶ್ಯಕತೆ ನಮಗಿದೆಯೆ?

ಡಾ|| ವಸುಂಧರಾ ಭೂಪತಿ
ಹೆಚ್.ಐ.ಜಿ. ೩೭, ಎರಡನೆ ಹಂತ, ಕೆ.ಹೆಚ್.ಬಿ. ಕಾಲೋನಿ
ಬಸವೇಶ್ವರನಗರ, ಬೆಂಗಳೂರು-೭೯

# ಅಂಡಮಾನಿನ ಕಾಡು, ಬೆಟ್ಟ, ಹೊಳೆ

ಡಾ॥ ರಹಮತ್ ತರೀಕೆರೆ

ಅಂಡಮಾನ್ ನಿಕೋಬಾರ್ ಎಂಬುದು ಮುನ್ನೂರಕ್ಕೂ ಹೆಚ್ಚು ನಡುಗಡ್ಡೆಗಳ ಒಂದು ಗುಚ್ಛ. ಅವುಗಳಲ್ಲಿ ಜನವಸತಿ ಇರುವುದು ಕೆಲವೇ ದ್ವೀಪಗಳಲ್ಲಿ. ಉಳಿದಂತೆ ಎಲ್ಲ ದ್ವೀಪಗಳಲ್ಲೂ ದಟ್ಟವಾದ ಕಾಡುಗಳಿವೆ. ಅಂಡಮಾನಿನ ಈ ಪ್ರಾಚೀನ ಕಾಡುಗಳಲ್ಲಿ ಸುತ್ತಾಡಬೇಕೆಂಬುದು ನಮ್ಮ ಆಸೆಯಾಗಿತ್ತು. ಇದು ಅಷ್ಟು ಸುಲಭವಾಗಿರಲಿಲ್ಲ. ದಕ್ಷಿಣ ಮತ್ತು ಮಧ್ಯ ಅಂಡಮಾನಿನ ಕಾಡುಗಳನ್ನು ಜರವಾ ಬುಡಕಟ್ಟಿನವರಿಗೆ ಮೀಸಲಿಟ್ಟು ರಕ್ಷಿತ ಪ್ರದೇಶಗಳನ್ನಾಗಿ ಘೋಷಿಸಲಾಗಿತ್ತು. ನಿಕೋಬಾರ್ ದ್ವೀಪಗಳು ನೌಕಾನೆಲೆಗಳಾಗಿರುವುದರಿಂದ ಅಲ್ಲಿ ಕಾಲಿಡುವಂತಿಲ್ಲ. ಹೆಚ್ಚಿನ ದ್ವೀಪಗಳಿಗೆ ಹೋಗಲು ಹಡಗು ಸೌಲಭ್ಯವಿಲ್ಲ. ಹಡಗುಗಳಿದ್ದರೆ ಹವಾಮಾನದಲ್ಲಿ ಅನಿರೀಕ್ಷಿತ ಏರುಪೇರಾಗಿ ಹಡಗುಗಳು ದಿನಗಟ್ಟಲೆ ಬಾರದೆ ದ್ವೀಪಬಂಧಿಗಳಾಗಬೇಕು. ಅಂಡಮಾನಿನಲ್ಲಿ ಕಾಯುವಿಕೆ ನಿಮಿಷ ಗಂಟೆಗಳಲ್ಲಿ ಅಲ್ಲ, ದಿನ ವಾರಗಟ್ಟಲೆ ಲೆಕ್ಕದಲ್ಲಿ. ಕಡಲ ಸ್ವಭಾವಕ್ಕೆ ತಕ್ಕಂತೆ ವರ್ತಿಸುವ ಅಂಡಮಾನು ಸಮಯ ಪ್ರಜ್ಞೆಗೆ ತನ್ನದೇ ವ್ಯಾಖ್ಯಾನ ಬರೆದಿತ್ತು. ಹೀಗಾಗಿ ಪೋರ್ಟ್ ಬ್ಲೇರಿನ ಸುತ್ತಮುತ್ತ ಇರುವ ಕೆಲವು ದ್ವೀಪಗಳಲ್ಲಿರುವ ಕೆಲವು ಕಾಡುಗಳನ್ನಷ್ಟೆ ಸುತ್ತಾಡಲು ನಮಗೆ ಸಾಧ್ಯವಾಗಿತ್ತು.

**ಚಿಡಿಯಾ ಟಾಪು ಕಾಡು**

ನಾವು ನೋಡಿದ ಮೊದಲ ಕಾಡು 'ಚಿಡಿಯಾ ಟಾಪು'; ಇದು ಅಂಡಮಾನಿನ ಅಪರೂಪದ ಹಕ್ಕಿಗಳು, ಚಿಟ್ಟೆಗಳು ಇರುವ ಕಾಡು. ಪೋರ್ಟ್ ಬ್ಲೇರಿನಿಂದ ದಕ್ಷಿಣಕ್ಕೆ ಒಂದು ಗಂಟೆ ಪ್ರಯಾಣದಲ್ಲಿ ಈ ಕಾಡಿತ್ತು. ಒಳಗೆ ಸುತ್ತಾಡಲು ರಸ್ತೆಗಳನ್ನು ಮಾಡಿದ್ದರು. ಆದರೂ ಒಬ್ಬಿಬ್ಬರು ಹೋಗಲು ಭಯ ಹುಟ್ಟಿಸುವಷ್ಟು ಹಳು ದಟ್ಟವಾಗಿತ್ತು. ಹುಲಿ ಚಿರತೆಗಳಿಲ್ಲ ಎಂಬುದರಿಂದ ನಿಶ್ಚಿಂತವಾಗಿದ್ದೆವು. ಲಕ್ಷಾಂತರ ಜೀರುಂಡೆಗಳು ಏಕಕಾಲದಲ್ಲಿ 'ಜೀಂಯ್ಞ್' ಎಂದು ಚೀರುತ್ತ ಭಯ ಹೆಚ್ಚಿಸುತ್ತಿದ್ದವು. ಎಷ್ಟೋ ಕಾಲದಿಂದ ಬೆಳೆದ ದೈತ್ಯಾಕಾರದ ಮರಗಳು. ನಾಕಾರು ಜನ ಕೈ ಕೈ ಸೇರಿಸಿ ಸರಪಣಿ ಮಾಡಿ ತಬ್ಬಬೇಕು. ಅಂಥ ಕಾಂಡಗಳು. ಒಂದೊಂದು ಮರವನ್ನು ಬುಡದಿಂದ ತುದಿಯವರೆಗೆ ನೋಡಬೇಕಾದರೆ ಕುತ್ತಿಗೆ ನೋಯುತ್ತಿತ್ತು. ಕಂಬದಂತೆ ನೆಟ್ಟು ನಿಂತಾಗ ನಿಜವಾಗಿ ಅವುಗಳ ಗಾತ್ರ ಗೊತ್ತಾಗುವುದಿಲ್ಲ. ನೆಲಕ್ಕೆ ಬಿದ್ದಾಗಲೇ ಗೊತ್ತಾಗುವುದು. ಒಂದು ಮರ ಕಡಲ ಕೊರೆತದಿಂದ ಬೇರಿನ ಮಣ್ಣು ಜರಿದು, ಉರುಳಿಬಿದ್ದು, ಆನೆಯ ಶವದಂತೆ ಎಷ್ಟೋ ಕಾಲದಿಂದ ಕೊಳೆಯುತ್ತಿತ್ತು. ಆದರೂ ಕರಗಿರಲಿಲ್ಲ. ಮರದಿಂದ ಮರಕ್ಕೆ ಹಬ್ಬಿರುವ ಬಳ್ಳಿಗಳನ್ನು 'ಬಳ್ಳಿ' ಎಂದು ನಂಬಲು ಸಾಧ್ಯವೇ ಇರಲಿಲ್ಲ. ಸಾಟಾ ಗಾತ್ರದಲ್ಲಿದ್ದ ಅವು ಕೇಬಲ್ ವೈರುಗಳಂತೆ ಮರದಿಂದ ಮರಕ್ಕೆ ಇಳಿಬಿದ್ದು ಎತ್ತಲೋ ತೂರಿಹೋಗಿದ್ದವು. ಈ ಮರಗಳ ಜಾತಿ, ವಯಸ್ಸು, ಉಪಯೋಗಗಳ ಬಗ್ಗೆ ನಮಗೇನೋ ಕುತೂಹಲವಿತ್ತು. ಆದರೆ ಸಸ್ಯಶಾಸ್ತ್ರೀಯ ವಿವರಣೆ ಕೊಡುವವರು ಯಾರೂ ಇರಲಿಲ್ಲ. ಈ ಕೊರತೆ ಒಂದರ್ಥದಲ್ಲಿ ವರವೂ ಆಗಿ ನಾವು ಕಲ್ಪನಾ ಸ್ವಾತಂತ್ರ್ಯ ಚಲಾಯಿಸಬಹುದಿತ್ತು.

ನಮ್ಮ ಸಸ್ಯಶಾಸ್ತ್ರೀಯ ಕುತೂಹಲ ಹಾಗೂ ಸೌಂದರ್ಯ ಪ್ರಜ್ಞೆಗಳ ನಡುವೆ, 'ಈ ಮರಕ್ಕೆ ಮಾರುಕಟ್ಟೆಯಲ್ಲಿ ಎಷ್ಟು ಬೆಲೆ ಇರಬಹುದು. ಈ ಮರ ಕಡಿದರೆ ಎಷ್ಟು ಮಂಚಗಳಾಗಬಹುದು; ಎಂಬ ಲೆಕ್ಕಾಚಾರವೂ ಸುಳಿಯುತ್ತಿತ್ತು. ಅದರಲ್ಲೂ ಅಂಡಮಾನಿನ ಚಿನ್ನ ಎಂದು ಕರೆಯಲಾಗುವ 'ಪೊಡಾಕ್' ಎಂಬ ಅಪರೂಪದ ಮರಗಳು ಇದ್ದ ಕಾಡದು. ಗಾಜಿನಂತೆ ಫಳಫಳ ಹೊಳೆಯುವ ನಸುಗೆಂಪು ಬಣ್ಣದ ಅದರ ವಸ್ತುಗಳನ್ನು ಕಂಡವರಿಗೆ; ಅವರ ಸೌಂದರ್ಯ ಮತ್ತು ಬಾಟನಿ ಕುತೂಹಲಗಳ ಗಂಟಲನ್ನು ಮೆಟ್ಟಿ ಇತರೆ ಆಸೆಗಳು ನುಗ್ಗುತ್ತಿದ್ದರೆ ಆಶ್ಚರ್ಯವೇನೂ ಇಲ್ಲ. 'ಛೇ, ನಾವೇನು ಸಾಟಾ ವ್ಯಾಪಾರಿಗಳಾಗಿ ಬಂದವರೇ ?' ಎಂದು ಛೀಮಾರಿ ನಮಗೆ ನಾವೇ ಹಾಕಿಕೊಂಡು, ಹಸಿರು ಕಕ್ಕುವ ಆ ಕಾಡಿನಲ್ಲಿ ಲೀನವಾಗಲು ಯತ್ನಿಸುತ್ತಿದ್ದೆವು. ಬಗೆಬಗೆಯ ಹಕ್ಕಿಗಳು ಆ ಕಾಡಿನ ಹಸಿರು ಬುರುಖಾದಲ್ಲಿ ಅಡಗಿ ನಾನಾ ತರದ ಶಬ್ದ ಮಾಡುತ್ತಿದ್ದವು. 'ಚಿಡಿಯಾ ಟಾಪು' ಎಂದರೆ ಹಕ್ಕಿಗಳು ಕಾಣಲೇಬೇಕು ಎಂದು ನಾವು ಬಲವಂತವಾಗಿಯೇ ಪಕ್ಷಿ ಪ್ರೇಮವನ್ನು ಆವಾಹಿಸಿಕೊಂಡು ಮರಗಳಲ್ಲಿ ಹುಡುಕುತ್ತಿದ್ದೆವು ಅನಿಸುತ್ತದೆ. ನಮ್ಮಲ್ಲಿ ಬೈನಾಕುಲರ್ ಇರಲಿಲ್ಲ. ಇದ್ದರೂ ಕತ್ತಲು ಆವರಿಸಿದ ಆ ಕಾಡಿನಲ್ಲಿ ಅದು ಉಪಯೋಗಕ್ಕೆ ಬರುತ್ತಿತ್ತು ಎಂದು ಹೇಳುವಂತಿಲ್ಲ. ಒಮ್ಮೆ ಮಾತ್ರ ಅರಿಶಿಣದಲ್ಲಿ ಅದ್ದಿ ತೆಗೆದಂಥ ಎರಡು ಹಕ್ಕಿಗಳು ನಮ್ಮ ಕಣ್ಮುಂದಿಂದ ಹಾರಿ, 'ಅಲ್ನೋಡಿ ನೋಡಿ' ಎನ್ನುವಷ್ಟರಲ್ಲಿ ಮರೆಯಾಗಿಹೋದವು. ಚಿಟ್ಟೆಗಳಂತೂ ಲಕ್ಷಾಂತರ ಸಂಖ್ಯೆಯಲ್ಲಿ ಮಿತಿಗುಡುತ್ತಿದ್ದವು. ಭಾರತದ ಜನಸಂಖ್ಯೆಯನ್ನು ನೆನಪಿಗೆ ತರುತ್ತಿದ್ದರಿಂದಲೋ ಏನೋ, ನಮಗೆ ಅವುಗಳ ಬಗ್ಗೆ ಬೇಗ ಆಸಕ್ತಿ ಕಳೆದುಹೋಯಿತು.



*ಕೊಲ್ಲಿಗಳಲ್ಲಿ ಮ್ಯಾಂಗ್ರೋವ್ ಕಾಡು*

ಚಿಡಿಯಾ ಟಾಪಿನ ಕಾಡು ನಮ್ಮ ಆಗುಂಬೆ ಕೊಡಚಾದ್ರಿ ಕಾಡುಗಳಂತೆಯೇ ಇತ್ತು. ಒಂದು ವೇಳೆ ನಮ್ಮ ಕಾಡುಗಳಲ್ಲಿ ಇಲ್ಲದ ಹೊಸ ಸಸ್ಯ ಕಣ್ಣಿಗೆ ಬಿದ್ದರೂ ಅದನ್ನು ಕಂಡುಹಿಡಿಯುವಷ್ಟು ಅನುಭವವಾಗಲೀ ತಜ್ಞತೆಯಾಗಲೀ ನಮ್ಮಲ್ಲಿ ಇರಲಿಲ್ಲ. ಸುಮ್ಮನೆ ನಮ್ಮನ್ನು ಕಳೆದುಕೊಳ್ಳುತ್ತ ಅಲೆದೆವು. ರಸ್ತೆ ಕೆಲವೊಮ್ಮೆ ಕಡಲ ಅಂಚಿಗೆ ಹೋಗಿ, ತಟ್ಟನೆ ವಿಶಾಲವಾದ ನೀಲ ಜಲಸಾಗರವನ್ನು ಕಾಣಿಸುತ್ತಿತ್ತು. ದಂಡೆಯುದ್ದಕ್ಕೂ ಬಿಳಿ ತೆಂಗಿನಕಾಯಿಗಳಂತಿರುವ ಶಂಖುಗಳನ್ನು ಹೊತ್ತುಕೊಂಡು ಶಂಖುಹುಳುಗಳು ನಿಧಾನವಾಗಿ ತೆವಳುತ್ತಿದ್ದವು. ನಮ್ಮ ಗುಂಪಿನಲ್ಲಿ ಕೊಂಚ ಸುಕುಮಾರಿ ಆಗಿದ್ದ ಅರುಣ ನಡೆಯಲಾಗದೆ ದಣಿದು 'ಇಲ್ಲೇ ಕೂರೋಣ' ಎಂದು ಅಳಲುತ್ತಿದ್ದರು. ನಾವು 'ಇನ್ನೂ ಮುಂದೆ ಏನೋ ಇರಬಹುದು' ಎಂದು ಹಟದಿಂದ ನಡೆದೆವು. ಎರಡು ಕಿಲೋಮೀಟರು ಸಾಗಿದ ಬಳಿಕ ರಸ್ತೆ ಮುಗಿಯಿತು. ಮುಂದೆ ಹತ್ತಲಾಗದ ಬೆಟ್ಟಗಳೂ ಅದರ ಮೇಲೆ ಹಸಿರು ಚಾದರ ಕವುಚಿ ಬಿದ್ದಂತೆ ಹಬ್ಬಿರುವ ಕಾಡೂ ಕಾಣುತ್ತಿದ್ದವು. ತಿರುವಿನಲ್ಲಿ ಕಡಲು ಇತ್ತು. ವಿಶಾಲವಾದ ಮರಳ ಬೀಚಿತ್ತು. ಅದೇನು ಖುಶಿಪಡುವ ಬೀಚಲ್ಲ. ಬೀಚಿಗೆ ಹೊಂದಿಕೊಂಡಂತೆ ಇರುವ ಮೂಲೆಯಲ್ಲಿ ಒಂದು ಎಕರೆಯಷ್ಟು ಜಮೀನಿನಲ್ಲಿ ತರಕಾರಿ ಬೆಳೆಯಲಾಗಿತ್ತು. ನಡುವೆ ಒಂದು ಗುಡಿಸಲಿತ್ತು. ತುಸು ಹೊತ್ತಿನಲ್ಲಿ ಒಬ್ಬ ಮುದುಕಿ ಮತ್ತು ಮುದುಕ ಕಾಣಿಸಿಕೊಂಡರು. 'ಘನಘೋರ ಅರಣ್ಯದಲ್ಲಿ ಮನುಷ್ಯರೇ ?' ಸೋಜಿಗವಾಯಿತು. 'ಅಂಡಮಾನಿನ ಈ ಮಳೆಕಾಡನ್ನು ಕಡಿದು ಪರಿಸರ ನಾಶ ಮಾಡಿದ್ದಾರೆ' ಎಂದು ಕೋಪವೇನೂ ಬರಲಿಲ್ಲ. ಬದಲಿಗೆ ಬೋರು ಹುಟ್ಟಿಸುವ ಮರಹಸಿರುಗಳ ಏಕತಾನದಲ್ಲಿ ಮನುಷ್ಯರನ್ನು ಕಂಡು ಸಂತೋಷವೇ ಆಯಿತು. ಆಕ್ರಮಣ ಮಾಡುವಂತೆ ಕಡಲು ಆಕ್ರಮಿಸಿಕೊಂಡಾಗ ನೆಲದ ತುಣುಕು ಆನಂದ ಕೊಡುವಂತೆ. ಮುತ್ತಿಗೆ ಹಾಕುವ ಕಾಡಿನಲ್ಲಿದ್ದಾಗ ಮನುಷ್ಯರ ಸುಳಿವು ಆನಂದ ಬಿಡುಗಡೆಯ ಭಾವನೆ ತರುತ್ತದೆ. ಪರಿಸರ ಪ್ರಜ್ಞೆ ಉಲ್ಟಾ ಹೊಡೆಯುತ್ತದೆ. ದೆವ್ವ ಮಳೆ ಸುರಿಸುವ, ಉಸಿರು ಕಟ್ಟಿಸುವಂತೆ ಸೈಕ್ಲೋನು ಗಾಳಿ ಬೀಸುವ, ರೌದ್ರಾವತಾರಿ ಅಲೆಗಳು ಅಪ್ಪಳಿಸುವ ಈ ತಾಣದಲ್ಲಿ, ಎರಡು ಮನುಷ್ಯ ಜೀವಿಗಳು ತಣ್ಣಗೆ ಧೀರವಾಗಿ, ಕಣಿವೆಯಿಂದ ಜಿನುಗಿ ಬರುವ ನೀರಿನಲ್ಲಿ ಸೌತೆಕಾಯಿ ಬೆಳೆಯುತ್ತ ಬದುಕಿರುವುದನ್ನು ಕಂಡು ಮೈ ಜುಂ ಎಂದಿತು. ನಾವು ಬೇಲಿಯ ಹೊರಗೆ ನಿಂತು ಕೂಗಿ ಮಾತಾಡಲು ಯತ್ನಿಸಿದೆವು. ಆದರೆ ಮುದುಕನ ಕ್ಷೀಣ ಸ್ವರದಿಂದ ಬಂದ ಮಾತು ಅರ್ಥವಾಗಲಿಲ್ಲ. ಮೇಲಾಗಿ ಆತ ನಮ್ಮ ಜತೆ ಮಾತಾಡುವುದಕ್ಕೆ ಆಸಕ್ತಿಯನ್ನೂ ತೋರಲಿಲ್ಲ.

**ಮೌಂಟ್ ಹ್ಯಾರಿಯಟ್**

ಇನ್ನೊಂದು ದಿನ ನಾವು ಪೋರ್ಟ್ ಬ್ಲೇರಿನ ಬಂದರು ಕಟ್ಟೆಯ ಎದುರಾ ಎದುರು ಕೇವಲ ೨ ಕಿ.ಮೀ. ದೂರದಲ್ಲಿ

ಕಾಣುವ ಒಂದು ಪರ್ವತವನ್ನು ಹತ್ತಬೇಕೆಂದು ಹೊರಟೆವು. ಅದರ ಹೆಸರು 'ಮೌಂಟ್ ಹ್ಯಾರಿಯಟ್' (ಹ್ಯಾರಿಯಟ್ - ಯಾರೋ ಒಬ್ಬ ಬ್ರಿಟಿಷ್ ಅಧಿಕಾರಿಯ ಪ್ರೇಯಸಿಯ ಹೆಸರಿರಬೇಕು). ಇದು ಅಂಡಮಾನಿನಲ್ಲೇ ಅತ್ಯಂತ ಎತ್ತರದ 'ಪರ್ವತ'ವೆಂದು ಹೆಸರಾಗಿತ್ತು. ವಾಸ್ತವದಲ್ಲಿ ಇದೊಂದು ಬೆಟ್ಟ. ಕೊಡಚಾದ್ರಿ, ಮುಳ್ಳಯ್ಯನಗಿರಿಗಳ ಮುಂದೆ ಇದು ಬಚ್ಚ. ಆದರೆ 'ಅಂಡಮಾನು ಬಂತು' ಎಂದು ದೂರದಿಂದಲೆ ಸಾರುವ ದೀಪಸ್ತಂಭದಂತಿರುವ ಈ ಬೆಟ್ಟ, ನಾವಿಕರ ದೃಷ್ಟಿಯಿಂದ ಬಹಳ ಮುಖ್ಯವಾಗಿತ್ತು; ಮೇಲಾಗಿ ತೆರೆದ ಕಡಲಿನ ಹೆದ್ದೆರೆಗಳ ಸೊಕ್ಕನ್ನು ಮುರಿದು, ಕೊಲ್ಲಿಯನ್ನು ನಿರ್ಮಿಸಿ, ಪೋರ್ಟ್ ಬ್ಲೇರನ್ನು ಸುರಕ್ಷಿತ ಬಂದರನ್ನಾಗಿ ಮಾಡಿತ್ತು; ಇದರ ತುದಿಗೆ ಹತ್ತಿ ನಿಂತರೆ ಸುತ್ತಮುತ್ತಲಿನ ದ್ವೀಪಗಳು ಕಾಣುತ್ತಿದ್ದವು. 'ಇಷ್ಟು ದೂರ ಬಂದಿದ್ದೇವೆ, ಇರುವುದೊಂದೇ ಬೆಟ್ಟವನ್ನು ಹತ್ತಲೇಬೇಕು' ಎಂದು ನನಗೆ ಆಸೆ. ಸುತ್ತಾಡಿ ದಣಿದಿದ್ದ ಬಾನು ಮತ್ತು ಅರುಣ 'ನಾವು ಬರುವುದಿಲ್ಲ. ಇವತ್ತು ನಾವು ಶಾಪಿಂಗ್ ಮಾಡಿಕೊಂಡು ಇರುತ್ತೇವೆ' ಎಂದು ನಿರಾಕರಿಸಿದರು. ಜಯ, ಗಣ ಅವರ ಮನಸ್ಸೂ ಅಷ್ಟಕಷ್ಟೆ. ಆದರೆ ನನ್ನ ಕಿರಿಕಿರಿ ಕಂಡು 'ಇವನಿಗೆ ಬೇಸರವಾಗಬಾರದು' ಎಂದೋ ಏನೋ ಬೆಟ್ಟ ಹತ್ತಲು ಒಪ್ಪಿದರು.

ರಸ್ತೆ ಮಾರ್ಗವಾಗಿ ೪೫ ಕಿ.ಮೀ. ಸುತ್ತು ದಾರಿಯನ್ನು ಕ್ರಮಿಸಬೇಕಾಗುವ ಈ ಬೆಟ್ಟಕ್ಕೆ ನೀರಿನಲ್ಲಿ ಕೇವಲ ಹತ್ತು ನಿಮಿಷದ ದಾರಿ. ಹ್ಯಾರಿಯಟ್ ಬೆಟ್ಟವು ಬಹಳ ಸುಂದರವಾಗಿದ್ದು ಮೇಲೆ ಹಸಿರು ಹೆಪ್ಪಿಟ್ಟಂತೆ ಅರಣ್ಯ, ಸುತ್ತಲೂ ಮೊರೆವ ಕಡಲು. ಬುಡದ ಅಂಚಿನ ಸುತ್ತ ಮೀನುಗಾರರ ಬಿಡಾರಗಳು. ದಡಕ್ಕೆ ನಿಂತು ದಣಿವಾರಿಸಿಕೊಳ್ಳುತ್ತಿರುವ ದೋಣಿಗಳ ಸಾಲು. ಕಣ್ಣೆದುರಿಗೆ ಪೋರ್ಟ್ ಬ್ಲೇರ್ ಪಟ್ಟಣ. ರಸ್ತೆಯು ಬೆಟ್ಟದ ಹೊಟ್ಟೆಯ ಮೇಲೊಂದು ಸುತ್ತುಹಾಕಿ ಕಾಡೊಳಗೆ ಹೊಕ್ಕಿತು. ಹಳು ಹೆಣೆದುಕೊಂಡಿತ್ತು. ನಗರದ ಬಗಲಿಗೆ ಇರುವ ಬೆಟ್ಟದಲ್ಲಿ ಇಷ್ಟೊಂದು ದಟ್ಟಕಾಡು ಉಳಿದಿದೆ! ಅಲ್ಲಲ್ಲಿ ಕಾಡನ್ನು ಕಡಿದಿದ್ದರೂ ಅದು ಮುಕ್ಕಾಗಿರಲಿಲ್ಲ. ಇಲ್ಲಿ ಕೂಡ ಅಂಡಮಾನಿನ ಎಲ್ಲ ಕಾಡುಗಳಲ್ಲಿರುವಂತೆ ಹಕ್ಕಿಗಳು ಸಂತೆ ಸೇರಿದ್ದವು. ಬಗೆಬಗೆ ಕೂಜನಗಳು. ಬಗೆಬಗೆಯ ಸಸ್ಯರಾಶಿ. ಗುರುವನ್ನು ಹುಡುಕಿಕೊಂಡು ಅಲೆಯುವ ಸಾಧಕನಂತೆ ಮರಗಿಡಗಳನ್ನು ಅರಸಿಕೊಂಡು ತಿರುಗುತ್ತಿದ್ದ 'ಹಸಿರು ಹೊನ್ನಿನ' ಬಿ.ಜಿ.ಎಲ್. ಸ್ವಾಮಿ ಅಂಡಮಾನಿಗೆ ಬಂದಂತೆ ತೋರುವುದಿಲ್ಲ. ಅಂಡಮಾನಿಗೆ ಬರುವ ಪ್ರವಾಸಿಗಳು ಕೂಡ ಸಾಮಾನ್ಯವಾಗಿ ಈ ಬೆಟ್ಟಕ್ಕೆ ಬರುವುದಿಲ್ಲ. ಕಡಿದಾದ ರಸ್ತೆಯಲ್ಲಿ ೬ ಕಿ.ಮೀ. ನಡೆಯುವ ತ್ರಾಸು ತೆಗೆದುಕೊಳ್ಳಬೇಕು. ಒಬ್ಬಿಬ್ಬರು ಹೋಗಲು ಧೈರ್ಯ ಸಾಲದು ಎಂಬಂತಿರುವ ಕಾಡು. ಜಿಗಣೆಗಳ ಕಾಟ ಬೇರೆ. ಅವೋ ಹುಲ್ಲಿನ ಗರಿಗಳ ತುದಿಗೆ ಕೂತು, ಕೊಂಬನ್ನಾಡಿಸುತ್ತ ದಾರಿಹೋಕರು ಬರುವುದನ್ನೇ ಕಾಯುತ್ತ ಹೇಗೋ ಜಿಗಿದು ಚರ್ಮಕ್ಕೆ ಅಂಟಿಕೊಳ್ಳುತ್ತಿದ್ದವು. ಮೈಮರೆತು ನಡೆಯುವವರು ಬಂದರಂತೂ ಅವಕ್ಕೆ ಸುಗ್ಗಿ. ಗಣನಾಥ ಅವರ ಕಾಲಿಗೆ ಕೂದಲೆಳೆಯಂತಿದ್ದ ಒಂದು ಜಿಗಣೆ ಮರಿ ಹೇಗೋ ಹತ್ತಿತು. ನೋಡನೋಡುತ್ತಿದ್ದಂತೆ ರಕ್ತನಾಳ ಹುಡುಕುತ್ತ ತನ್ನ ಮೂತಿಯನ್ನು ತೂರಿಸಿಬಿಟ್ಟಿತು. ಎಳೆದರೂ ಬರಲಿಲ್ಲ. ಎಷ್ಟು ದಿನದಿಂದ ಹಸಿದಿತ್ತೋ, ಅಲ್ಲಿಗೆ ಬರುವ ಗಿರಾಕಿಗಳೂ ಕಡಿಮೆ, ಇದೇ ಹೊತ್ತು ಎಂದು ಕಿತ್ತುಹಾಕುವಷ್ಟರಲ್ಲೆ ಮಕ್ಕಳು ಹಾಲು ಕುಡಿಯುವಂತೆ ರಕ್ತ ಹೀರಲಾರಂಭಿಸಿತು.

ಹೆರಾತ್ ಬೆಟ್ಟದ ತುದಿಗೆ ಹೋಗಿ ನಿಂತರೆ ನೀರ ಹಾಳೆಯಂತೆ ಹಬ್ಬಿರುವ ಕಡಲು, ಕಪ್ಪು ಚುಕ್ಕೆಗಳಂತೆ ಚಲಿಸುವ ದೋಣಿಗಳು, ನಡುವೆ ಕೆರೆಯಲ್ಲಿ ಮಲಗಿದ ಎಮ್ಮೆಯಂತೆ ಕಾಣುವ ಹ್ಯಾವಲಾಕ್ ಮುಂತಾದ ದ್ವೀಪಗಳು ಮಬ್ಬಾಗಿ ಕಾಣುತ್ತಿದ್ದವು. ಇಲ್ಲಿಂದ ಬೇರೆ ಬೇರೆ ಕಡೆ ಟ್ರೆಕ್ಕಿಂಗ್ ಮಾಡಲು ಹಾದಿಗಳಿವೆ. ಬ್ರಿಟಿಷರು ಇಲ್ಲೊಂದು ಬಂಗಲೆಯನ್ನೂ ಕಾವಲು ಗೋಪುರವನ್ನೂ ಕಟ್ಟಿಸಿದ್ದಾರೆ. ದಶದಿಕ್ಕುಗಳಿಗೂ ಫಿರಂಗಿಗಳನ್ನು ಜೋಡಿಸಿಟ್ಟಿದ್ದಾರೆ. ರಕ್ಷಣೆಯ ದೃಷ್ಟಿಯಿಂದ ಈ ಬೆಟ್ಟ ಅವರಿಗೆ ಮುಖ್ಯವಾಗಿತ್ತು ಅನಿಸುತ್ತದೆ. ಇದರ ಶಿಖರದಿಂದ ಕಡಲು, ಬಂದರು, ಕಡಲೊಳಗೆ ಬಂದು ಹೋಗುವ ಹಡಗುಗಳು, ಅವರ ವಸತಿಗಳಿರುವ ರಾಸ್ ದ್ವೀಪ, ಸೆಲ್ಯುಲಾರ್ ಜೈಲು ಎಲ್ಲ ಕಾಣುತ್ತಿದ್ದವು. ಏನಾದರು ಗಡಿಬಿಡಿಯಾದರೆ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಗುಪ್ತದಾರಿಗಳೂ ಇದ್ದವು. ಅಂಡಮಾನಿನಲ್ಲಿ ಬ್ರಿಟಿಷರು ಎಸಗಿರುವ ಕೃತ್ಯಗಳಿಗೆ ಕನಿಕರ ಬರಬಾರದು. ಆದರೆ ಕೈದಿಗಳನ್ನು ಕಾಯುತ್ತ ಸ್ವತಃ ಬಂಧಿಗಳಾಗಿ, ಜೀವಗಳ್ಳತನದಿಂದ ಅಡಗುದಾಣಗಳನ್ನು ನಿರ್ಮಿಸಿಕೊಂಡು ಬದುಕಿದ ರೀತಿ ಕಂಡರೆ ಕನಿಕರ ಬರುತ್ತಿತ್ತು. ಕನಿಕರ ಮೂಡಿಸಿದ ಮತ್ತೊಂದು ಸಂಗತಿಯೆಂದರೆ. ಅಲ್ಲಿನ ಜಿಂಕೆವನದಲ್ಲಿ ಕೂಡಿಹಾಕಿದ್ದ, ಭಿಕ್ಷುಕರಂತೆ ಬಂದವರ ಕೈಬಾಯಿ ನೋಡುತ್ತಿದ್ದ ಜಿಂಕೆಗಳು. ಘನಾರಣ್ಯದ ನಡುವೆ ಅವು ರೊಪ್ಪದ ಕುರಿಗಳಂತೆ ಇದ್ದವು.



ಚಿಡಿಯಾ ಟಾಪಿನ ಕಾಡು

## ಮಾಯಾಬಂದರು

ಮಾಯಾಬಂದರಿಗೆ ಹೋಗುವುದು ನಮ್ಮ ಮುಖ್ಯ ಕಾರ್ಯಕ್ರಮಗಳಲ್ಲಿ ಒಂದು. ಮಾಯಾಬಂದರಿಗೆ ೨ ದಾರಿಗಳಿವೆ. ಒಂದು - ಕಡಲ ಮೂಲಕ ಹೋಗುವುದು; ಇನ್ನೊಂದು - ಅಂಡಮಾನಿನ ಕಾಡನ್ನು ಭೇದಿಸಿಕೊಂಡು ಹಾಯುವ ಬಸ್ಸಿನಲ್ಲಿ ಹೋಗುವುದು. ಅಂಡಮಾನಿನ ಪರಿಸರ ನೋಡಬಹುದೆಂಬ ಕಾರಣಕ್ಕೆ ನಾವು ಬಸ್ಸಿನ ದಾರಿಯನ್ನು ಆಯ್ದುಕೊಂಡಿದ್ದೆವು. ಟಿಸಿಬಿ ಕಂಪೆನಿಗೆ ಸೇರಿದ ವಿಮಾನದಂಥ ಬಸ್ಸು. ಅಂಡಮಾನ್ ಗ್ರ್ಯಾಂಡ್ ಟ್ರಂಕ್ ರೋಡ್ ಅಂಗೈನಂಥ ಹೆದ್ದಾರಿ. ಆದರೂ ಪೋರ್ಟ್ ಬ್ಲೇರಿನಿಂದ ಮಾಯಾಬಂದರಿಗೆ ಒಂದು ಹಗಲು ಪ್ರಯಾಣ. ಕಾರಣ ಬಸ್ಸು ದ್ವೀಪದಿಂದ ದ್ವೀಪಕ್ಕೆ ನಡುವಣ ಕಡಪಿನಲ್ಲಿ ಲಾಂಚುಗಳ ಮೂಲಕ ದಾಟಬೇಕಿತ್ತು. ಬೆಳಗಿನ ೬ ಗಂಟೆಗೆ ನಮ್ಮ ಪಯಣ ಶುರುವಾಯಿತು. ದಾರಿಯಲ್ಲಿ ಬಾರಾಟಾಂಗ್ ಜಿರ್ಕಾಟಾಂಗ್ ಮುಂತಾದ ಚೀನಿ ಹೆಸರಿನ ಪುಟ್ಟ ಪುಟ್ಟ ಊರುಗಳು. ಊರಿರುವ ಕಡೆ ಕಾಡು ಕಡಿದು ಬಯಲು ಮಾಡಿ ತೆಂಗು ಬಾಳೆ ಕಬ್ಬು ಬತ್ತ ಅಡಿಕೆ ಬೆಳೆದಿದ್ದರು. ಬಯಲು ಬಂದ ಕಡೆ ಅರಣ್ಯ ಇಲಾಖೆಯವರು ರಸ್ತೆ ಪಕ್ಕದಲ್ಲಿ ಸಾಲುಮರಗಳನ್ನು ನೆಟ್ಟಿದ್ದರು. ಹರಿವ ನದಿ ಪಕ್ಕ ಬೋರ್‌ವೆಲ್ ಕೊರೆಸಿದಂತೆ. ಅಂಡಮಾನಿನ ಕಾಡಿನಲ್ಲಿ ಪ್ಲಾಂಟೇಶನ್ ಗಿಡಗಳು !

ಬಾರಾಟಾಂಗ್ ಆದ ಬಳಿಕ ಬಸ್ಸು ದುರ್ಗಮವಾದ ಕಾಡೊಳಗೆ ಹೊಕ್ಕಿತು. ಅದು ಜರವಾ ರಿಸರ್ವ್ ಫಾರೆಸ್ಟಾಗಿತ್ತು. ಸಣ್ಣಗೆ ಮಳೆ ಜಿನುಗುತ್ತ, ಗಿಡಮರಗಳೆಲ್ಲ ತೊಟ್ಟಿಕ್ಕುತ್ತ, ಹಬೆಯಂಥ ಆವಿಯು ಹಳುವಿನೊಳಗಿಂದ ಹುಟ್ಟುತ್ತ, ದಾರಿ ಸಾಗಿತು. ಕಾಡಿನ ಹಚ್ಚಹಸುರು ಸಾಕಪ್ಪಾ ಅನಿಸುವಷ್ಟು ಕಣ್ಣಿಗೆ ತಿಕ್ಕುತ್ತಿತ್ತು. ಹಸಿರು ಸಮುದ್ರದೊಳಗೆ ಈಜಾಡುವ ಹಡಗಿನಂತೆ ನಮ್ಮ ಬಸ್ಸು ತಿರುವುಗಳಲ್ಲಿ ಬಾಗಿ ಬಳುಕಿ ಹಾಯುತ್ತಿತ್ತು. ಇದ್ದಕ್ಕಿದ್ದಂತೆ ಸಮುದ್ರದ ಅಂಚಿಗೆ ಬಂದರೆ, ನೀಲ ಬಾನು ನೀಲಜಲ ರಾಶಿಗಳ ದರ್ಶನ. 'ಕಾಡಸೆರೆಯಿಂದ ಬಿಡಿಸಿಕೊಂಡೆವು' ಎಂದು ಸಂತೋಷ ಪಡುತ್ತಿರುವಾಗಲೇ ಮತ್ತೆ ಕಾಡಿನ ಗರ್ಭವನ್ನು ಬಸ್ಸು ಹೊಕ್ಕಿಬಿಡುತ್ತಿತ್ತು. ಎಲ್ಲೂ ನಮ್ಮ ಮಲೆನಾಡಿನ ಕಾಡುಗಳಲ್ಲಿ ರಸ್ತೆಯ ತಿರುವಿನಲ್ಲಿ ಸಾಮಾನ್ಯವಾಗಿ ಸಿಗುವ ಝರಿ ಜಲಪಾತಗಳು ಇರಲಿಲ್ಲ. ಸಂಜೆ ಹೊತ್ತಿಗೆ ಮಾಯಾಬಂದರನ್ನು ಮುಟ್ಟಿದೆವು.

ಇದು ಅಂಡಮಾನಿನ ಎರಡನೇ ಮುಖ್ಯ ಪಟ್ಟಣ. ಹೆಸರಿನೊಳಗಿನ 'ಮಾಯೆ' ಊರಲ್ಲೂ ಇತ್ತು. ಮೂರೂ ಕಡೆ ನೀರು ನಿಂತುಕೊಂಡು, ನಡುವೆ ಒಂಟೆ ಡುಬ್ಬದಂಥ ಒಂದು ಬೆಟ್ಟದ ಮೇಲೆ ಮಾಯಾಬಂದರಿತ್ತು. ಬೆಟ್ಟದ ಶಿಖರದಲ್ಲಿ ಗೆಸ್ಟ್ ಹೌಸಿತ್ತು. ಈ ಅತಿಥಿಗೃಹ ತನ್ನ ಚೆಲುವಿಗಾಗಿ, ಏಕಾಂತಕ್ಕಾಗಿ ಮಾತ್ರವಲ್ಲ, ರುಚಿಕರವಾದ ಊಟಕ್ಕೂ ಪ್ರಸಿದ್ಧವಾಗಿತ್ತು. ಬಸ್ಸಿಳಿದು ಅಲ್ಲಿನ ಮುಖ್ಯ ಇಂಜಿನಿಯರ್ ಕಚೇರಿಗೆ ಹೋದೆವು. ಭಾರಿ ದೇಹದ ನಮ್ಮ ಎಚ್. ಎಲ್. ನಾಗೇಗೌಡರನ್ನು ನೆನಪಿಗೆ ತರುವಂಥ ಒಬ್ಬ ಅಧಿಕಾರಿ ಮರದಿಂದ ಕಟ್ಟಿದ ದೊಡ್ಡ ಕಚೇರಿಯ ಮಹಡಿಯಲ್ಲಿ ಕುಳಿತಿದ್ದನು. ಗೌರವ ಹುಟ್ಟಿಸುವಂಥ ಗಂಭೀರ ಮುಖಭಾವವುಳ್ಳ, ಆದರೆ ಪ್ರೀತಿ ತುಂಬಿದ ಆತ 'ಎಲ್ಲಿಂದ ಬಂದಿರಿ' ಎಂತೆಲ್ಲ ವಿಚಾರಿಸಿ, ನಾವು ಕೊಟ್ಟ ಅರ್ಜಿಯ ಮೇಲೆ ಟಿಪ್ಪಣಿ ಬರೆದು, ಅತಿಥಿಗೃಹದ ೨ ಕೋಣೆಗಳನ್ನು ಮಂಜೂರು ಮಾಡಿದನು. ಮಾಯಾಬಂದರಿನ ನಮ್ಮ ವಾಸ ಶುರುವಾಯಿತು.

ಇಲ್ಲಿ ನಮ್ಮದು ೩ ದಿನ ತಂಗುವಿಕೆ. ಇಲ್ಲಿಂದಲೇ ದಿಗ್ಲಿಪುರಕ್ಕೆ ಹೋಗಿಬರಬೇಕಿತ್ತು. [illegible] ಹೋಗಿದ್ದ ನಮಗೆ ಮಾಯಾಬಂದರಿನ [illegible] ಸವಿಯುವ ಮನಸ್ಸಾಗಲೀ ಊರಲ್ಲಿ ತಿರುಗುವ [illegible]

ವಾಗಲೀ ಬರಲಿಲ್ಲ. ಊಟ ಬಿದ್ದೊಡನೆ ಪ್ರಜ್ಞೆ ತಪ್ಪಿದಂತೆ ನಿದ್ದೆ ಬಂದಿತು.

ಬೆಳಗಿನ ಜಾವ ಎಚ್ಚರಾಯಿತು. ಹೊರಗೆ ಬಂದು ನೋಡಿದರೆ ಮಬ್ಬಿನಂಥ ವಾತಾವರಣದಲ್ಲಿ ಸುತ್ತಲಿನ ಕಡಲು, ದೂರದಲ್ಲಿ ಮೈತುಂಬ ಕಾಡು ತುಂಬಿದ ದ್ವೀಪಗಳು, ತೇಲುತ್ತಿರುವ ಮೀನುಗಾರರ ದೋಣಿಗಳು, ಮೆಲ್ಲಗೆ ಕೆಂಪೇರುತ್ತಿರುವ ಮೂಡಣದ ಬಾನು - ನಿಜಕ್ಕೂ ಮಾಯಾ ಬಂದರ್ ಸ್ವರ್ಗವಾಗಿತ್ತು. ನೀರೊಳಗೆ ನಿಂತಿರುವ ನಿರ್ಜನ ದ್ವೀಪಗಳನ್ನು ಕಂಡು, ಹಕ್ಕಿಯಂತೆ ಹಾರಿ ಹೋಗಬೇಕೆಂಬ ಆಸೆಯಾಗುತ್ತಿತ್ತು. ಕಲಾವಿದರಾದ ಜಯಕುಮಾರ್ ಸ್ಕೆಚ್ ಬುಕ್ಕನ್ನು ಇಟ್ಟುಕೊಂಡು ಗೆರೆಗಳ ಆಟದಲ್ಲಿ ತೊಡಗಿದ್ದರು. ಹಸಿವು ಆಯಾಸಗಳಲ್ಲಿ ಕಾಣಲಾಗದ್ದು ಈಗ ಕಣ್ಣೊಳಗೆ ಬಂದು ತುಂಬಿಕೊಳ್ಳತೊಡಗಿತು.

## ದಿಗ್ಲಿಪುರ

ಅಂಡಮಾನಿನ ಮೂರನೇ ಮುಖ್ಯ ಪಟ್ಟಣವಾದ ದಿಗ್ಲಿಪುರದಲ್ಲಿ ಈ ದ್ವೀಪಸಮೂಹಗಳಲ್ಲಿ ಹರಿಯುವ ಏಕೈಕ ನದಿಯಿತ್ತು. ಉತ್ತರ ಅಂಡಮಾನಿನ ಒಂದು ದೊಡ್ಡ ದ್ವೀಪದಲ್ಲಿದ್ದ ದಿಗ್ಲಿಪುರವು ಕಲ್ಕತ್ತದ ದಿಕ್ಕಿನಿಂದ ಬಂದರೆ ಮೊದಲು ಸಿಗುತ್ತದೆ. ಬಂಗಾಳಿಗಳಿಂದ ತುಂಬಿಹೋಗಿರುವ ಈ ದ್ವೀಪಕ್ಕೆ ಹೋದರೆ ಬಂಗಾಳಕ್ಕೇ ಹೋದಂತಾಗುತ್ತದೆ. ಅಂಡಮಾನ್ ಮಹಾರಸ್ತೆಯು ಮಾಯಾಬಂದರಿಗೇ ಕೊನೆಗೊಳ್ಳುತ್ತದೆಯಾದ್ದರಿಂದ ಮಾಯಾಬಂದರಿನಿಂದ ದಿಗ್ಲಿಪುರಕ್ಕೆ ಹೋಗಲು ಬಸ್ಸಿಲ್ಲ. ಸಮುದ್ರದಲ್ಲೇ ಹೋಗಬೇಕು. ನಾವು ತೆರೆದ ಸಮುದ್ರದಲ್ಲಿ ಹಡಗಿನ ಮೂಲಕ ಹೋಗುವುದನ್ನು ಬಿಟ್ಟು ದ್ವೀಪದ್ವೀಪಗಳ ನಡುವೆ ನಿರ್ಮಾಣವಾಗಿರುವ ಕೊಲ್ಲಿಗಳಲ್ಲಿ ಹೊರಟೆವು. ಯಾಕೆಂದರೆ ಅಂಡಮಾನಿನ ಸುಪ್ರಸಿದ್ಧ ಮ್ಯಾಂಗ್ರೋವ್ ಕಾಡುಗಳು ಈ ಕೊಲ್ಲಿಗಳಲ್ಲೇ ಇದ್ದವು. ಕೊಲ್ಲಿ ಎಂದರೆ ದ್ವೀಪದ್ವೀಪಗಳ ನಡುವಿನ ಕಿರುದರೆಗಳ ಪ್ರಶಾಂತ ಕಡಲು. ಮಾಯಾಬಂದರಿನಿಂದ ಕಾಲಿಘಾಟ್ ಎಂಬಲ್ಲಿವರೆಗೆ ದೋಣಿಯಲ್ಲಿ ಹೋಗಿ ಅನಂತರ ದಿಗ್ಲಿಪುರಕ್ಕೆ ಬಸ್ಸನ್ನು ಹಿಡಿಯಬೇಕಿತ್ತು. ಮಾಯಾಬಂದರಿನಿಂದ ಕಾಲಿಘಾಟಿಗೆ ೨೦ ಕಿ.ಮೀ. ದೂರವನ್ನು 'ಡೋಂಗಿ' ಎಂದು ಕರೆಯುವ ನಾಡ ದೋಣಿಯಲ್ಲಿ ಪಯಣಿಸಿದ್ದು ನಮ್ಮ ಅಂಡಮಾನಿನ ಅನುಭವಗಳಲ್ಲೇ ಅತ್ಯಂತ ರೋಚಕವಾದುದು.

ಬೆಳಿಗ್ಗೆಯೇ ಎದ್ದು (ಅಂಡಮಾನಿನಲ್ಲಿ ಬೆಳಗಿನ ೪ ಗಂಟೆಗೇ ಬೆಳಕು ಹರಿಯುತ್ತದೆ) ಡೋಂಗಿಯಲ್ಲಿ ಹೊರಟೆವು. ಇಬ್ಬರು ಕಟ್ಟುಮಸ್ತಾದ ತರುಣರು ದೋಣಿಯನ್ನು ನಡೆಸುತ್ತಿದ್ದರು. ಮೋಟಾರ್ ಸಿಕ್ಕಿಸಿದ ಈ ನಾಡ ದೋಣಿ ಉದ್ದಕ್ಕೆ ಸೀಳಾಗಿ ದನಗಳ ಮುಂದಿನ ಗೋದಲಿಯಂತೆ ಇತ್ತು. ಕೊಲ್ಲಿಯನ್ನು ಪ್ರವೇಶಿಸುವವರೆಗೆ ಹೆದ್ದರೆಗಳ ತೆರೆದ ಕಡಲನ್ನು ಹಾಯಬೇಕಿತ್ತು. ಶುರುವಾಯಿತು ನಮ್ಮ ಪೀಕಲಾಟ. ಹಡಗಿನಲ್ಲಿ ಅಲೆಗಳು ಎಷ್ಟೇ ಭಯಾನಕವಾದರೂ ಅವು ನಮ್ಮ ಕೆಳಗೆ. ಅವುಗಳ ಮೇಲೆ ಸುರಕ್ಷಿತ ದೂರದಲ್ಲಿ ಇದ್ದ ನಮಗೆ ಅವುಗಳ ಆರ್ಭಟವೂ ಒಂದು ಲೀಲೆಯಂತೆ ತೋರುತ್ತಿತ್ತು. ಇಲ್ಲೋ ಅಲೆಗಳು ನಮ್ಮ ಮುಖದ ನೇರಕ್ಕೆ ಹೆಡೆಯೆತ್ತಿಕೊಂಡು, ನುಂಗಲು ಬಾಯಿ ತೆರೆದುಕೊಂಡು ಬರುವ ಸರ್ಪನಂತೆ ಬರುತ್ತಿದ್ದವು. ಇನ್ನೇನು ಅಲೆ ದೋಣಿಯ ಮೇಲೆ ಅಪ್ಪಳಿಸಿ ಮುಳುಗಿಸಿತು ಮುಳುಗಿಸಿತು ಎನ್ನುವಷ್ಟರಲ್ಲಿ ದೋಣಿಯು, ಬಂದ ಅಲೆಯಷ್ಟೇ ಎತ್ತರಕ್ಕೆ ಜಿಗಿದು ಬಚಾವಾಗುತ್ತಿತ್ತು. ಈ ಆಟ ನೋಡಲು ಎದೆ ಝಲ್ಲೆನಿಸುತ್ತಿತ್ತು. 'ಈ ನೀರಿನಲ್ಲಿ ಡಾಲ್ಫಿನ್ನುಗಳಿವೆ. ನೋಡುತ್ತಿರಿ. ನಸೀಬಿದ್ದರೆ ಕಾಣಬಹುದು' ಎಂದು ದೋಣಿಕಾರರು ಹೇಳಿದರು. ನಮಗೆ ನಸೀಬಿರಲಿಲ್ಲ. ನೀರಿಗೆ ಮಗುಚಿಕೊಳ್ಳುವುದು ಖಂಡಿತ ಎಂಬಂತೆ ಹೊಯ್ದಾಡುತ್ತಿದ್ದ ದೋಣಿಯಲ್ಲಿ ಸಂಭಾಳಿಸಿ ಕೂರುವುದಕ್ಕೇ ಪಡಿಪಾಟಲು ಪಡುತ್ತಿದ್ದೆವು. ಅರುಣ ಭೀತಿಯಿಂದ ಮಗುವಿನಂತೆ ಜಯ್‌ನ ಮಡಿಲಿನಲ್ಲಿ ಮಲಗಿಬಿಟ್ಟರು. ನಮ್ಮ ಗಾಬರಿ ಕಂಡು ದೋಣಿಯಲ್ಲಿದ್ದ ಬಾಣಂತಿಯ ತುಟಿಗಳಲ್ಲಿ ಹುಸಿನಗು ಸುಳಿಯಿತು. ಅದರಲ್ಲಿ 'ಸೀಮ್ಯಾಗಿಲ್ಲದೋವು ಇವು' ಎಂದು ವ್ಯಂಗ್ಯವಿತ್ತೋ ಏನೋ. ಇದ್ಯಾವ ಪರಿಯೂ ಇಲ್ಲದೆ ಅವಳ ಕೂಸು ಮಾತ್ರ ಗಡದ್ದಾಗಿ ನಿದ್ದೆ ಹೊಡೆಯಿತು.

ನಮ್ಮ ಡೋಂಗಿ ಕೊಲ್ಲಿಯನ್ನು ಹೊಕ್ಕಿತು. ಸಣ್ಣಪುಟ್ಟ ದ್ವೀಪಗಳ ನಡುವೆ ಧುತ್ತನೆ ಎದುರಾಗುವ ಐದಾರು ಕೊಲ್ಲಿದಾರಿಗಳಲ್ಲಿ ದೋಣಿಯು ಮಹಾನಗರಗಳ ಆಟೋರಿಕ್ಷಾಗಳಂತೆ ನುಸುಳಿ ಜಾಗ ಮಾಡಿಕೊಂಡು ಹೋಗುತ್ತಿತ್ತು. ಮೊಸಳೆ ಮಲಗಿದಂತೆ, ಹೂ ಕುಂಡದಂತೆ, ಅನೇಕ ಆಕಾರದ ದ್ವೀಪಗಳು. ಅಂಡಮಾನಿನಲ್ಲಿ ದ್ವೀಪಗಳಿಗೆ 'ಟೇಕ್ರಿ' ಎನ್ನುತ್ತಾರೆ. ಪ್ರತಿ ಟೇಕ್ರಿಗೂ ಸ್ಥಳೀಯ ಜನ ತಮ್ಮದೇ ಆದ ಹೆಸರು ಕೊಟ್ಟಿದ್ದಾರೆ. ಒಂದು ಕಡೆ ಬರೀ ತೆಂಗಿನ ಮರಗಳಿದ್ದವು. ಅದನ್ನು ಅಂಬಿಗರು 'ನಾರಿಯಲ್ ಟೇಕ್ರಿ' ಎಂದು ಹೇಳಿದರು. ಒಂದು ನಡುಗಡ್ಡೆಯಲ್ಲಿ ಯಾವುದೋ ಕಾಲಕ್ಕೆ ಕಬ್ಬು ಬೆಳೆಯುತ್ತಿದ್ದರಂತೆ. ಅದರ ಹೆಸರು 'ಗನ್ನಾ ಟೇಕ್ರಿ'. ಇನ್ನೊಂದರ ಹೆಸರು ವಿಚಿತ್ರವಾಗಿತ್ತು - 'ಮುರ್ದಾ ಟೇಕ್ರಿ' (ಹೆಣದ ದ್ವೀಪ) ! ಪ್ರತಿ ದ್ವೀಪದ ಮೇಲೂ ದಟ್ಟವಾದ ಅರಣ್ಯವಿತ್ತು. ಮರಗಳಿಗೆ ಬಗೆಬಗೆಯ ಬಳ್ಳಿಗಳು ಸುತ್ತಿಕೊಂಡು ಅದು ಎಷ್ಟು ದಟ್ಟವಾಗಿತ್ತೆಂದರೆ, ಬಹುಶಃ ಹಕ್ಕಿಗಳೂ ನುಸುಳಿಕೊಂಡು ಪ್ರವೇಶ ಮಾಡಬೇಕಾಗಿತ್ತೇನೋ ?

ತೆರೆದ ಕಡಲು ಮುಗಿದು, ಮ್ಯಾಂಗ್ರೋವ್ ಕಾಡು ಶುರುವಾಯಿತು. ಮ್ಯಾಂಗ್ರೋವ್ ಗಿಡಗಳು, ಉಪ್ಪು ನೀರಿನಲ್ಲಿ ಜೇಡರ ಕಾಲುಗಳಂಥ ತಮ್ಮ ಬೇರುಗಳ ಜಾಲವನ್ನು ಊರಿಕೊಂಡು ಬೆಳೆಯುತ್ತವೆ. ಇವನ್ನು ನಮ್ಮ ಕರಾವಳಿ ಜಿಲ್ಲೆಗಳ ಹಿನ್ನೀರ ಕಾಲುವೆ ಅಥವಾ ಕಡಲ ನೀರನ್ನು ಒಳನುಗ್ಗಿಸಿಕೊಂಡಿರುವ ನದಿ ದಂಡೆಗಳಲ್ಲಿ ನೋಡಬಹುದು. ಅವು ಕಳೆಯ ಗಿಡಗಳಂತೆ ಕ್ಷುದ್ರ. ಆದರೆ ಅಂಡಮಾನಿನ ಮ್ಯಾಂಗ್ರೋವ್ ಗಿಡಗಳು ನೂರಾರು ವರುಷ ಬೆಳೆದು ಹೆಮ್ಮರಗಳಾಗಿ ಅಭೇದ್ಯವಾದ ಕಾಡನ್ನು ಸೃಷ್ಟಿಸಿದ್ದವು. ಕಡಲ ಕೊರೆತದಿಂದ ಅಮೂಲ್ಯವಾದ ಭೂಮಿಯನ್ನು ರಕ್ಷಿಸಲು ಸ್ವತಃ ನಿಸರ್ಗವೇ ನಿರ್ಮಿಸಿಕೊಂಡ ಈ ಹಸಿರುಕೋಟೆ ಅಭೇದ್ಯವಾಗಿತ್ತು. ಮ್ಯಾಂಗ್ರೋವ್ ಕೊಲ್ಲಿಗಳನ್ನು ಹೊಕ್ಕಾಗ ವಿಶಾಲ ಕಡಲು, ಭೂಮಿ ಎಲ್ಲ ಮಾಯವಾದವು. ಅಕ್ಕಪಕ್ಕದಲ್ಲಿ ಚೀನಾಗೋಡೆಯಂಥ ಮ್ಯಾಂಗ್ರೋವ್ ಸಾಲು ಕಾವಲಿಗೆ ನಿಂತು, ಕತ್ತಲು ಕವಿದಂತಾಗಿ 'ನಾವು ಎಲ್ಲಿಗೆ ಹೋಗುತ್ತಿದ್ದೇವೆ, ವಾಪಾಸ್ಸು ಬರುತ್ತೇವೆಯೇ' ಎಂಬ ಗುಮಾನಿ ಹುಟ್ಟಿಸಿದವು. ಈ ಕಾಡಿನಲ್ಲಿ ಇಳಿದು ತಿರುಗಾಡಬಹುದೇ ಎಂಬ ಹುಂಬ ಬಯಕೆ ಮೂಡಿತು. ಆದರೆ ಮ್ಯಾಂಗ್ರೋವ್ ಕಾಡಿನ ನೆಲವು ಜಿಗ್ಗು ಕೆಸರುಗಳಿಂದ ಕೂಡಿ ಇಳಿಯುವುದು ಸಾಧ್ಯವೇ ಇರಲಿಲ್ಲ. ಮ್ಯಾಂಗ್ರೋವ್ ಮರಗಳ ಬುಡದಲ್ಲಿ ಅಂಡಮಾನಿನ ಖತರನಾಕ್ ಮೊಸಳೆಗಳು ವಾಸಿಸುತ್ತವೆ ಎಂದು ದೋಣಿಕಾರರು ಹೇಳಿದರು.

ತಾತ್ಕಾಲಿಕವಾದ ಈ ಹುಸಿ ಭಯವನ್ನು ಬಿಟ್ಟು ನೋಡಿದರೆ, ಇಲ್ಲಿ ನಿಸರ್ಗದ ಅಪೂರ್ವ ಸಮ್ಮೇಳನವಿತ್ತು. ಕೆಳಗೆ ತನ್ನ ಕನ್ನಡಿಯಲ್ಲಿ ಮ್ಯಾಂಗ್ರೋವ್ ಕಾಡನ್ನು ಪ್ರತಿಬಿಂಬಿಸುತ್ತ ತಾನೂ ಕಪ್ಪು ಹಸಿರಾಗಿರುವ ಕಡಲ ನೀರು, ಉದ್ದಕ್ಕೆ ಹಾಸಿದ ರೇಷ್ಮೆ ಪತ್ತಲದಂತಿರುವ ಈ ನೀರಿಗೆ ಅಂಚುಕಟ್ಟಿದಂತಿರುವ ಮ್ಯಾಂಗ್ರೋವ್ ಮರಗಳು, ದ್ವೀಪಗಳ ನೆತ್ತಿ ಮೇಲೆ ಬಹುಶಃ ಮನುಷ್ಯರು ಹೊಕ್ಕಿರದ ಕಾಡು, ತಲೆಯೆತ್ತಿ ನೋಡಿದರೆ ಮಾತ್ರ ಕಾಣುವ ನೀಲಿ ಆಗಸ, ದೋಣಿ ಮೋಟಾರಿನ ಫಟ್ ಫಟ್ ಸದ್ದು ಮ್ಯಾಂಗ್ರೋವ್ ಕಾಡಿಗೆ ಬಡಿದು ನೂರ್ಮಡಿಯಾಗುವ ಪ್ರತಿಧ್ವನಿ, ನಡುವೆ ಇವುಗಳ ಹಿತವಾದ ಸೆರೆಯಲ್ಲಿರುವ ನರಮನುಷ್ಯರಾದ ನಾವು - ನನಗಂತೂ ಅಂಡಮಾನಿಗೆ ಮ್ಯಾಂಗ್ರೋವ್ ಕಾಡನ್ನು ನೋಡಲೆಂದೇ ಮತ್ತೊಮ್ಮೆ ಬರಬೇಕು ಅನಿಸಿತು. ನಮ್ಮ ಸಂತೋಷ - ತಲ್ಲಣ ಕೊನೆಗೊಳ್ಳುವ ಸೂಚನೆಯಂತೆ ದೂರದಲ್ಲಿ ಉತ್ತರ ಅಂಡಮಾನಿನ ದ್ವೀಪದ ಬೆಟ್ಟವೊಂದರ ಕೋಡುಗಲ್ಲು ಕಾಣಿಸಿತು. ಅದು ಕಾಳೀಘಾಟಿನ ಬೆಟ್ಟ. ಅದರ ಬುಡಕ್ಕೆ ಹೋಗಿ ಕೊಲ್ಲಿ ಕೊನೆಗೊಂಡಿತು. ಅಲ್ಲಿ ಹತ್ತಾರು ಮನೆಗಳ ಪುಟ್ಟ ಊರು. ಜೆಟ್ಟಿ ಬಂದೊಡನೆ ದೋಣಿಯಿಂದ ನೆಲಕ್ಕೆ ಜಿಗಿದೆವು. ನಿಜಕ್ಕೂ ಪ್ರಯಾಣ ದಣಿಸಿತ್ತು.

ಕಾಳಿಘಾಟಿನಿಂದ ಅರ್ಧತಾಸು ಪ್ರಯಾಣ ದಿಗ್ಲಿಪುರಕ್ಕೆ. ಬಸ್ಸು ತುಂಬಿ ತುಳುಕಾಡಿಕೊಂಡು ಬಂದಿತು. ಉತ್ತರ ಅಂಡಮಾನಿನ ಈ ದ್ವೀಪದಲ್ಲಿ ಗದ್ದೆ ತೋಟಗಳು ಇದ್ದವು. ನಮಗೆ ಇಲ್ಲಿನ ಬಂಗಾಳಲೋಕವನ್ನೂ ಈ ದ್ವೀಪರಾಶಿಗಳಲ್ಲಿ ಹರಿವ ಏಕೈಕ ನದಿಯನ್ನೂ ನೋಡಬೇಕಿತ್ತು. ಅದರ ಹೆಸರು ಕಾಲ್ಪಾಂಗ್. ಸುತ್ತ ಹಬ್ಬಿರುವ ಅಪಾರ ಉಪ್ಪುಗಡಲಿನ ನಡುವೆ ಜೀವಹಿಡಿದು ನಿಂತಿರುವ ದ್ವೀಪಗಳಲ್ಲಿ ಕಾಡು ಬೆಳೆದಿರುವುದು ಸೋಜಿಗವಲ್ಲ. ನದಿ ಹುಟ್ಟುವುದು ಸೋಜಿಗ. ಅಗಾಧ ಜಲರಾಶಿಯೊಳಗೆ ಇದ್ದೂ ನೀರು ಕುಡಿಯಲಾಗದ ಅಸಹಾಯಕತೆಯನ್ನು ನೆನೆದರೆ, ಸಿಹಿನೀರಿನ ಮಹತ್ವ ಗೊತ್ತಾಗುತ್ತದೆ. ಕಾಲ್ಪಾಂಗ್ ಅಲ್ಲೇ ಹತ್ತಿರದ ಬೆಟ್ಟವೊಂದರಲ್ಲಿ ಹುಟ್ಟಿ ಕೆಲವೇ ಮೈಲಿ ಹರಿದು ಕಡಲನ್ನು ಸೇರುತ್ತದೆ. ದಿಗ್ಲಿಪುರ ಇದರ ದಡದಲ್ಲಿದೆ. ಊರಹೊರಗಿರುವ ಕಾಲ್ಪಾಂಗ್ ನೋಡಲು ಧಾವಿಸಿದೆವು. ಭಾರತ ಮೇನ್ ಲ್ಯಾಂಡಿನ ನದಿಗಳನ್ನು ಕಂಡವರು ಇದನ್ನು ನದಿಯೆಂದು ಪ್ರಮಾಣ ಮಾಡಿದರೂ ಒಪ್ಪಲಾರರು. ನಮ್ಮ ಮಲೆನಾಡಿನ ಪ್ರತಿ ಬೆಟ್ಟದ ಕಿಬ್ಬದಿಯಲ್ಲಿ ಇದಕ್ಕಿಂತ ಎಷ್ಟೋ ದೊಡ್ಡದಾದ ತೊರೆಗಳಿವೆ. ಕೆಲವೊಮ್ಮೆ ಬತ್ತದ ಗದ್ದೆಗಳ ಬಸಿನೀರು ಇನ್ನೂ ರಭಸವಾಗಿ ಹರಿಯುತ್ತದೆ. ಆದರೇನಂತೆ, ಇದು ಜೀವಂತ ನದಿಯೇ. ಇಲ್ಲಿ ಇದು ಅಮೇಜಾನ್‌ಗಿಂತಲೂ ಹೆಚ್ಚು. ಆದರೂ ಇದನ್ನು ನೋಡಿ ನಮಗೆ ಒಳಗೊಳಗೇ ನಿರಾಶೆಯಾಯಿತು. ಜಯ್ ಗಣನಾಥ್ ನಾನು ನಿರಾಶೆ ತೋರಿಸಿಕೊಳ್ಳದೆ ನಾಟಕೀಯವಾದ ಸಂತೋಷ ಉದ್ಗಾರಗಳನ್ನು ತೆಗೆದೆವು. ''ಒಂದು ನದಿ ನೋಡಲು ಅಷ್ಟು ಕಷ್ಟ ಯಾಕೆ, ನಮ್ಮ ರಾಜ್ಯದಲ್ಲಿ ನದಿಗಳನ್ನು ಕಂಡಿಲ್ಲವೇ? ನಮ್ಮಲ್ಲಿ ಇಲ್ಲದ್ದನ್ನು ನೋಡೋಣ'' ಎಂದು ವಾದಿಸಿ ಅರುಣ ಬಾನು ಸೋತಿದ್ದರು. ಕಾಲ್ಪಾಂಗಿನ ಹಳ್ಳದ ರೂಪವನ್ನು ಕಂಡ

ಕೂಡಲೇ 'ಇದಕ್ಕಾಗಿ ಇಲ್ಲಿಯವರೆಗೆ ಬರಬೇಕಾಯಿತೇ? ನಮ್ಮ ಮಾತು ಎಲ್ಲಿ ಕೇಳುತ್ತೀರಿ' ಎಂದು ಕೊಂಕು ನುಡಿದರು. ನಾವು ನದಿಯನ್ನು ಹೊಗಳತೊಡಗಿದಾಗ ಅವರ ಮುನಿಸು ಮತ್ತಷ್ಟು ಹೆಚ್ಚಾಯಿತು. ಇರುವ ಒಂದೇ ಹೊಳೆಯಲ್ಲಿ ದಿಗ್ಲಿಪುರದ ಜನ ಲಾರಿ, ಬಟ್ಟೆ, ಪಾತ್ರೆ, ಮೈ ಎಲ್ಲವನ್ನೂ ಭೇದವಿಲ್ಲದೆ ತೊಳೆಯುತ್ತಿದ್ದರು. ದಂಡೆಪಕ್ಕದಲ್ಲಿ ಎರಡಕ್ಕೆ ಕುಳಿತವರೂ ಇದ್ದರು. (ಬಳ್ಳಾರಿ ಸೀಮೆಯ ನಮಗಿದು ಹೊಸತಲ್ಲ). ಊರ ಮಗ್ಗುಲಿಗೆ ಹರಿಯುವ ನದಿ ದಡದಲ್ಲಿ ಏನೆಲ್ಲ ದೃಶ್ಯಗಳು ಇರಬೇಕೋ ಅವೆಲ್ಲ ಇದ್ದವು. ಇದರಲ್ಲಿ ನದಿಯ ತಪ್ಪೇನೂ ಇರಲಿಲ್ಲ. ಆದರ ನನಗೆ, ಜಯ್, ಗಣ ಅವರಿಗೆ ಈ ನದಿಯಲ್ಲಿ ಮೀಯಲೇಬೇಕು ಎಂಬ ತೀರ್ಥಯಾತ್ರಿಗಳ ಛಲ. ಹೇಗೋ ಒಂದು ಕಡೆ ಕಡಿಮೆ ಗಲೀಜು ಇರುವ ಹೊಂಡವನ್ನು ಜಲಕ್ರೀಡೆಗೆ ಆಯ್ದುಕೊಂಡೆವು. ನಮ್ಮ ಸ್ನಾನಕ್ಕೆ ತೀವ್ರ ತಿರಸ್ಕಾರವನ್ನು ತೋರುತ್ತಾ ಅರುಣ ಬಾನು ದಡದಲ್ಲೇ ನಿಂತರು. ಅವರ ಮುಖದಲ್ಲಿ ನಮ್ಮ ಮೇಲಿನ ಕನಿಕರ ಕಾಣುತ್ತಿತ್ತು. ಅವರ ಕನಿಕರ ನಮ್ಮ ಮೀಯುವ ಛಲವನ್ನು ಹೆಚ್ಚಿಸಿತು. ನೀರಿಗಿಳಿದೆವು. ತೊಡೆಮಟವೂ ಮುಳುಗಲಿಲ್ಲ. ಕತ್ತನ್ನು ಹೊರಬಿಟ್ಟು ಮೈಯೆಲ್ಲಾ ನೀರಿನಲ್ಲಿ ಅಡಗಿಸಿಕೊಂಡು ಎಮ್ಮೆಗಳಂತೆ ಬಿದ್ದುಕೊಂಡೆವು. 'ಬಹಳ ಆನಂದವಾಗುತ್ತಿದೆ ' ಎಂಬಂತೆ ಕೇಕೆ ಹಾಕಿದೆವು. ಹರಿಯುವ ನೀರಿಗೆ ಕಲಂಕ ಎಣಿಸಬಾರದು ಎಂಬ ಹಿರಿಯರ ನಂಬಿಕೆಯನ್ನು ಪಾಲಿಸ ಬೇಕೆನಿಸಿದರೂ, ಬಾಯಿಯಲ್ಲಿ ನೀರು ತೆಗೆದುಕೊಳ್ಳಲು ಧೈರ್ಯ ಬರಲಿಲ್ಲ. ನಮ್ಮೂರ ಪಕ್ಕದಲ್ಲಿ ಹರಿಯುವ ಭದ್ರಾನದಿಯು ಭದ್ರಾವತಿಯ ಕಬ್ಬಿಣ, ಕಾಗದ ಕಾರಖಾನೆಗಳ ಮಹಾಕೊಳಕನ್ನು ತುಂಬಿಕೊಂಡು ಚರಂಡಿಯಂತೆ ಹರಿಯುವ ದೃಶ್ಯವನ್ನು ಬಾಲ್ಯದಿಂದಲೂ ಕಂಡಿರುವ ನನಗೆ ಕಾಲ್ಪಾಂಗ್‌ನ ಈ ರೂಪ ವಿರೂಪ ಅನಿಸಲಿಲ್ಲ. ನದಿಯಲ್ಲಿ ಈಜಾಡುತ್ತಿರುವ ಹೊಸಬರನ್ನೂ ದಡದ ಮೇಲೆ ನಿಂತಿರುವ ಇಬ್ಬರು ಸ್ತ್ರೀಯರನ್ನೂ ನದಿಗೆ ಬಂದುಹೋಗುತ್ತಿದ್ದ ಜನ ತಮಾಷೆಯಿಂದ ಮಿಕಿಮಿಕಿ ನೋಡುತ್ತಿದ್ದರು. ಕೂಡಲೇ ನೀರಿನಿಂದ ಹೊರಬರದಿದ್ದರೆ ವಿಚ್ಛೇದನ ನೀಡುವವರಂತೆ ಬಾನು, ಅರುಣ ಕೊನೆಯ ಬಾರಿ ಎಚ್ಚರಿಸಿದರು. ನಾವು ಹೊರಬರಲೇಬೇಕಾಯಿತು.

**ಚಂಚಲ ಹವಾಮಾನ**

ಅಂಡಮಾನಿನ ಹವಾಮಾನ ಬಹಳ ಚಂಚಲ. ರಮ್ಯಕತೆಗಳ ರಾಜಕುಮಾರಿಯನ್ನು ಬಂಧಿಸಿಟ್ಟುಕೊಂಡ ರಾಕ್ಷಸನಂತೆ ಅದು. ಯಾವಾಗ ಒಲಿಯುತ್ತದೆ ಯಾವಾಗ ಮುನಿಯುತ್ತದೆ ಖಚಿತವಿಲ್ಲ. ನಾವು ಹೋಗುವ ಒಂದು ವಾರ ಮುಂಚೆ ಅಂಡಮಾನಿನ ಮೇಲೆ ಭಾರಿ ಬಿರುಗಾಳಿಯೊಂದು ಬೀಸಿ, ದ್ವೀಪ ದ್ವೀಪಗಳ ನಡುವೆ ಸಂಪರ್ಕವೇ ತಪ್ಪಿಹೋಗಿತ್ತು. ಕಾಯಿ ಜಗ್ಗಿದ ಮಾವಿನಮರಗಳು, ಗೊನೆಹೊತ್ತ ಬಾಳೆಗಿಡಗಳು ಲಾಠಿ ಚಾರ್ಜಿಗೆ ಒಳಗಾದಂತೆ ಜರ್ಝರಿತವಾಗಿರುವುದನ್ನು ಎಲ್ಲೆಲ್ಲೂ ಕಾಣಬಹುದಿತ್ತು. ಮಳೆ ಬಿದ್ದು ಗಾಳಿ ಮುಗಿದು ಅಂಡಮಾನಿನಲ್ಲಿ ಈಗ ಹಿತವಾದ ಬಿಸಿಲು ಇತ್ತು. ಅಂಡಮಾನಿನ ಬೆಳಗುಗಳು ಯಾವೊತ್ತೂ ಸುಂದರ. ಏನೂ ಕಾಣದಂತೆ ಬೆಳ್ಳಗೆ ಮುಸುಕಿದ ಕಾವಳ ಕರಗಿ, ನೀಲಿಕಡಲು, ಹಾಗೂ ಹಚ್ಚನೆಯ ಕಾಡುಗಳು, ತಾಯ ಹೊಟ್ಟೆಯಲ್ಲಿ ಹುಟ್ಟಿ ಬಂದಂತೆ ನಿಧನಿಧಾನವಾಗಿ ಮೂಡುತ್ತಿದ್ದವು. ಟೀವಿಯ ಹವಾಮಾನ ವರದಿಯಲ್ಲಿ ಬೆಣ್ಣೆಯ ಮುದ್ದೆಗಳನ್ನು ಹೇರಿಕೊಂಡಂತೆ ಮಳೆಮೋಡಗಳಲ್ಲಿ ಸಿಲುಕಿದ ಅಂಡಮಾನ್ ದ್ವೀಪಗಳನ್ನು ಕಂಡಾಗ ಮಳೆಗೆ ಸಿಕ್ಕ ಶಾಲೆ [illegible] ಅಸಹಾಯಕವಾಗಿ ತೋರುತ್ತಿದ್ದವು. ಆಗ ಎಂಥ ಮಳೆ [illegible] ಸುರಿಯುತ್ತಿರಬಹುದು ಎಂದು ಊಹಿಸುತ್ತಾ ಅಂಡಮಾನಿನ ಈ ದೆವ್ವಮಳೆಯ ಆಕ್ರಮಣಕ್ಕೆ ಸಿಲುಕುವ ಸುಖದ ಹಂಬಲವಾಯಿತು. ಮಾಯಾಬಂದರಿಗೆ ಹೋಗುವ ಹಾದಿಯಲ್ಲಿ ಒಂದಿಷ್ಟು ಜಿನುಗು ಮಳೆ ಮುಖ ತೋರಿಸಿತು. ಅದು ನಿಜವಾದ ಅಂಡಮಾನಿನ ಮಳೆ ಅಲ್ಲ. ನಮ್ಮ ಆಗುಂಬೆ ಕಾಡುಗಳಲ್ಲಿ ಇಂಥ ನೋಟ ಸಾಮಾನ್ಯ. ಕೆಲವೊಮ್ಮೆ ಯಾವ ಮಾಯೆಯಲ್ಲೊ ರಾತ್ರಿಯೆಲ್ಲಾ ಮಳೆ ಹುಯ್ದು ಬೆಳಿಗ್ಗೆ ಏನೂ ಆಗಿಲ್ಲವೆಂಬಂತೆ ಪರಿಸರ ಮಗುಮುಗ್ಧವಾಗಿ ಇರುತ್ತಿತ್ತು.

ಹೀಗಿರುತ್ತಾ ಒಂದು ದಿನ ಅಂಡಮಾನಿನ ಭೀಕರ ಮಳೆಯ ಮುಖಾಬಿಲೆ ಒಮ್ಮೆ ಆಯಿತು. ನೋಡುನೋಡುತ್ತಿದ್ದಂತೆ ಕಪ್ಪು ಮೋಡಗಳು ಕೋಣಗಳಂತೆ ಬಾನನ್ನು ಆವರಿಸಿದವು. ಚಾಚಿದರೆ ಕೈಗೇ ಸಿಕ್ಕಿಬಿಡುವಂತೆ ನೆಲಕ್ಕೆ ಬಾಗಿ ಬಂದವು. ಕರೆಂಟು ಹೋದಾಗ ಚಕ್ಕನೆ ಕತ್ತಲಾವರಿಸುವಂತೆ ಆಯಿತು. ಮೋಡ ಕರಗಿ ನೀರು - ಮಳೆಯಲ್ಲ ನೀರೇ ಸುರಿಯಲಾರಂಭಿಸಿತು. ಹೊರಗೆ ೧೦ ಅಡಿ ದೂರದ ಮರಗಳೂ ಕಾಣದಂತೆ, ನೀರ ತೆರೆತೆರೆಗಳು ಮುಗಿಲಿಂದ ನೆಲಕ್ಕೆ ಕಳಚಿ ಬಿದ್ದವು. ಜೀವ ತಡೆಯದೆ ಹೊರಗೆ ಹೋಗಿ ಮಳೆಗೆ ಒಡ್ಡಿಕೊಂಡೆವು. ಕಣ್ಣು ಮುಖ ಮೂತಿ ನೋಡದೆ ಮಳೆ ಬಾರಿಸಲಾರಂಭಿಸಿತು. ವಿಚಿತ್ರವೆಂದರೆ ಊರಿನ ಒಂದು ಭಾಗದಲ್ಲಿ ಇಂಥ ಮಳೆ ಸುರಿಯುತ್ತಿದ್ದರೆ ಇನ್ನೊಂದು ಭಾಗದಲ್ಲಿ ಹಾಡ ಹಗಲಿನ ಸೂರ್ಯ ಬೆಳಕು ಚೆಲ್ಲಿಕೊಂಡು ಮಾಮೂಲಾಗಿ ಇರುತ್ತಿದ್ದ. ಮೋಡ ಹುಚ್ಚನಂತೆ ಅಲೆಯುತ್ತಾ ಎಲ್ಲಿ ನಿಲ್ಲುತ್ತದೆಯೋ ಅಲ್ಲಿ ಮಾತ್ರ ಮಳೆ. ಎರಡನೆಯದಾಗಿ ಮಳೆ ಬಿದ್ದರೆ ಅಲ್ಲಿ ಕಚಿಪಿಚಿ ಕೆಸರು ಹೊರಳಾಡುವುದಿಲ್ಲ. ದಿನ್ನೆ ದಿಬ್ಬಗಳಿಂದ ಇಳಿದು ಅಲ್ಲೇ ಕರೆವ ಕಡಲಿಗೆ ಇಳಿದು, ಅರ್ಧಗಂಟೆಯಲ್ಲಿ ಯಥಾಸ್ಥಿತಿ. ಇಂಥ ಐದಾರು ಮಾಯದಂಥ ಮಳೆಗಳನ್ನು ಅಂಡಮಾನಿನಲ್ಲಿ ಇರುವಾಗ ಕಂಡೆವು. ಆದರೆ ಒಮ್ಮೆ ಕಂಡ ಮಳೆ ನಿಜವಾದ ಅಂಡಮಾನಿನ ಮಳೆಯಿರಬೇಕು. ಗಾಳಿಯ ಪಾಲು ೯೦, ಮಳೆಯ ಪಾಲು ೧೦. ಎಲ್ಲೋ ಗುಹೆಯಲ್ಲಿ ಕೂಡಿಟ್ಟ ಗಾಳಿ, ಒಮ್ಮೆಲೇ ಹೊರಬಿಟ್ಟಂತೆ ಹಾಹಾಕಾರ ಮಾಡಿಕೊಂಡು ಎರಗತೊಡಗಿತು. ತೆಂಗಿನ ಮರಗಳು ನುಗ್ಗಾಗಿಹೋದವು. ಸಣ್ಣ ಪುಟ್ಟ ಗಿಡಗಳು ನಮಾಜು ಮಾಡುವವರಂತೆ ಬಾಗಿಬಾಗಿ ಏಳುತ್ತಿದ್ದವು. ರಸ್ತೆ ಬದಿ ನಿಲ್ಲಿಸಿದ್ದ ಸ್ಕೂಟರುಗಳು ರಪ್ಪನೆ ನೆಲಕ್ಕೆ ಬಿದ್ದವು. ಕ್ಷಣಾರ್ಧದಲ್ಲಿ ಕರ್ಫ್ಯೂಹೊಡೆದಂತೆ ಪೋರ್ಟ್ ಬ್ಲೇರ್ ರಸ್ತೆಗಳು ನಿರ್ಜನವಾದವು. ಉಸಿರು ಕಟ್ಟಿಸುವ ಈ ಗಾಳಿ ಮಳೆಗಳು ಅರ್ಧಗಂಟೆ ಯಕ್ಷಗಾನ ಕುಣಿದು, ತಟ್ಟನೆ ಮಾಯವಾದವು. 'ಇದೆಲ್ಲಾ ಮಾಮೂಲಿ' ಎಂಬಂತೆ ಜನ ತೊಳೆದ ರಸ್ತೆಗಿಳಿದು ಓಡಾಡತೊಡಗಿದರು. ಎಲ್ಲವೂ ಪೂರ್ವ ಯೋಜಿತ ನಾಟಕದಂತಿತ್ತು.

ಈಗಲೂ ಅಂಡಮಾನೆಂದರೆ ನೆನಪಾಗಿ ನುಗ್ಗಿ ಬರುವುದು, ಅಲ್ಲಿನ ಕಾಡು ಕಡಲು ಮಳೆಗಾಳಿಗಳು ಹಾಗೂ ಇವುಗಳ ಜತೆಗೆ ಸೆಣಸುತ್ತ ಬದುಕುತ್ತಿರುವ ಚಿಡಿಯಾಟಾಪಿನ ಮುದಿ ದಂಪತಿಗಳಂಥ ಮನುಷ್ಯರು.

ಡಾ॥ ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ . ಹಂಪಿ. ವಿದ್ಯಾರಣ್ಯ-೫೮೩ ೨೭೬

## ಹೊಸತು

ಮೂಡುವ ಸೂರ್ಯನ ಮುಂಬೆಳಗಲ್ಲಿದೆ
ಅಂಬರ ಬೆಳಕಿನ ಅಪೂರ್ವ ಹೊಸತು !
ಹಾಡುವ ಹಕ್ಕಿಯ ತನಿಗೊರಳಲ್ಲಿದೆ
ಚಿಲಿಪಿಲಿ ಗಾನದ ಅನನ್ಯ ಹೊಸತು !

ನಲಿಯುವ ಕಂದನ ಹಾಲ್ಗೆನ್ನೆಯಲ್ಲಿದೆ
ಎಲ್ಲೂ ಕಾಣದ ಸುಹಾಸದ ಹೊಸತು;
ಹರೆಯದ ಬೆಡಗಿಯ ಮೀನ ಕಣ್ಣಲಿದೆ
ಸೌಂದರ್ಯ ಸಿರಿಯ ಕುಡಿನೋಟದ ಹೊಸತು !

ಕೊಂಪೆಯ ತರುಣನ ಆಕ್ರೋಶದಲ್ಲಿದೆ
ಅಸಮಾನ ಸಮಾಜದ ಪ್ರತಿಭಟನಾ ಹೊಸತು;
ಪ್ರಯೋಗ-ವಿಜ್ಞಾನಿಯ ಅನ್ವೇಷಣೆಯಲ್ಲಿದೆ
ನೂತನ ತತ್ವದ ಶೋಧನಾ ಹೊಸತು !

ಕಾಣುವ ಕಟ್ಟುವ ಒಳಗಣ್ಣಲ್ಲಿದೆ
ನಿಜ ಕವಿ ಸೃಜನೆಯ ಕಾವ್ಯದ ಹೊಸತು;
ವಿಚಾರದ ಗೊಂಚಲ ಸಂಚಯದಲ್ಲಿದೆ
ಸಂಪಾದನ ಪ್ರತಿಭೆಯ ಸಂಚಿಕೆ ಹೊಸತು !

- ದೊಡ್ಡ ರಂಗೇಗೌಡ



# ಯುಗಾದಿಯ ಸಂಭ್ರಮ

ಡಾ|| ಬಿ. ಎಸ್. ಶೈಲಜಾ

ಮಾರ್ಚ್ ೨೧ ಎಂಬುದೊಂದು ವಿಶೇಷ ದಿನ. ಯುಗಾದಿ ಎಂಬ ಹೆಸರು ಇದಕ್ಕೆ ಒಪ್ಪವಾಗಿದೆ. ವರ್ಷದ ಗಣನೆಯನ್ನು ಆರಂಭಿಸಲು ಪಂಚಾಂಗ ಕರ್ತೃಗಳು ಆರಿಸಿಕೊಂಡಿದ್ದ ದಿನ ಇದು. ಭಾರತದಲ್ಲಿ ಮಾತ್ರವಲ್ಲ, ವಿಶ್ವದೆಲ್ಲೆಲ್ಲೂ ಇಷ್ಟೇ. ಕಾರಣ ಸರಳ. ಭೂಮಿಯ ಅಕ್ಷ ೨೩½ ಡಿಗ್ರಿಗಳಷ್ಟು ಓರೆಯಾಗಿದೆಯಲ್ಲವೇ ? ಭೂಮಿಯ ಸಮಭಾಜಕ ವೃತ್ತವನ್ನು ಖಗೋಳಕ್ಕೆ ವಿಸ್ತರಿಸಿದರೆ ಅದು ವಿಷುವದ್‌ವೃತ್ತ ಎನ್ನಿಸಿಕೊಳ್ಳುತ್ತದೆ. ಭೂಮಿ-ಸೂರ್ಯರ ಕೇಂದ್ರ ಬಿಂದುಗಳಿರುವ ತಲಕ್ಕೆ ಕ್ರಾಂತಿವೃತ್ತ ಎಂಬ ಹೆಸರಿದೆ. ಸೂರ್ಯ ಈ ವೃತ್ತದಲ್ಲಿ ಚಲಿಸಿದಂತೆ ಕಾಣುತ್ತದೆ. ಈ ಎರಡೂ ವೃತ್ತಗಳ ನಡುವಿನ ಕೋನ ೨೩½ ಡಿಗ್ರಿಗಳು. ಆದ್ದರಿಂದ ವರ್ಷದ ಎರಡು ದಿನಗಳಲ್ಲಿ ಮಾತ್ರ ಸೂರ್ಯ ಎರಡೂ ವೃತ್ತಗಳ ಮೇಲೆ ಒಟ್ಟಿಗೆ ಇರಲು ಸಾಧ್ಯ. ಈ ಎರಡು ಬಿಂದುಗಳಿಗೆ ವಿಷುವ ಎಂಬ ಹೆಸರಿದೆ.

ಇದು ಗಣಿತದ ಸೂತ್ರ ಎನಿಸುತ್ತದೆ. ಭೂಮಿಯ ಮೇಲೆ ಕುಳಿತಿರುವ ನಮಗೆ ಈ ಕಾಲ್ಪನಿಕ ಬಿಂದುಗಳ ಅನುಭವ ಹೇಗೆ ಆಗುತ್ತದೆ? ಇದನ್ನು ಮೊದಲು ಕಂಡುಕೊಂಡ ಪೂರ್ವಜರು ಆಮೇಲೆ ಗಣಿತದ ಮೊರೆ ಹೊಕ್ಕರು. ಮಾರ್ಚ್ ೨೧ ಮತ್ತು ಸೆಪ್ಟೆಂಬರ್ ೨೨ ಈ ಎರಡು ದಿನಗಳಲ್ಲಿ ಸೂರ್ಯ ಭೂಮಧ್ಯ ರೇಖೆಗೆ ನೇರವಾಗಿ ಬಿಸಿಲು ಹಾಯಿಸುತ್ತಾನೆ. ಹಗಲು ರಾತ್ರಿಗಳ ಅವಧಿ ಸಮವಾಗಿರುತ್ತದೆ. ಉತ್ತರ ಭೂಭಾಗದಲ್ಲಿ ಇಲ್ಲಿಂದ ಮುಂದೆ ಹಗಲಿನ ಅವಧಿ ಹೆಚ್ಚು. ವಸಂತದ ಆಗಮನದ ಸುಳಿವೇ ಇದಾದ್ದರಿಂದ ಯುಗಾದಿ ಎಂಬುದು ಅನ್ವರ್ಥನಾಮ. (ಕೆಲವು ಪಂಚಾಂಗಗಳಲ್ಲಿ ಸೆಪ್ಟೆಂಬರ್ ೨೨ರ ವಿಷುವ ಬಿಂದುವಿಗೆ ಮಹತ್ವ ಉಂಟು. ಅಂದು ಯುಗಾದಿ ಆಗುತ್ತದೆ.)

ಚಾಂದ್ರಮಾನ ಪಂಚಾಂಗಗಳಲ್ಲಿ ಅಮಾವಾಸ್ಯೆಯ ಮುಂದಿನ ದಿನ ಪ್ರಾಮುಖ್ಯತೆ ಪಡೆಯುವುದರಿಂದ ನಮ್ಮ ಯುಗಾದಿ ಹಬ್ಬ ಮುಂದಕ್ಕೆ ಹೋಗಿದೆ. ಈ ವರ್ಷ ಯುಗಾದಿಗೆ ಅವಸರವಾಗಿದೆ. ಸೂರ್ಯ ೨೦ರಂದು ೧೩:೦೫ ಗಂಟೆಗೇ ವಿಷುವ ಬಿಂದುವನ್ನು ದಾಟುತ್ತದೆ. ಸೂರ್ಯನ ಸ್ಥಾನವನ್ನು ಖಗೋಳದಲ್ಲಿ ಸೂಚಿಸುವ ಈ ಕಾಲ್ಪನಿಕ ಬಿಂದುವಿಗೆ ಮೇಷರಾಶಿಯ ಪ್ರಥಮ ಬಿಂದು ಎಂಬ ಹೆಸರಿದೆ. ಕಾಲ್ಪನಿಕ ಏಕೆ? ಏಕೆಂದರೆ ಆ ಬಿಂದುವಿನಲ್ಲಿ ಯಾವ ನಕ್ಷತ್ರವೂ ಇಲ್ಲ. ಮೇಷರಾಶಿಯೂ ಇಲ್ಲ; ಈ ಬಿಂದು ಇರುವುದು ಮೀನರಾಶಿಯಲ್ಲಿ ! ಅಂದರೆ ಮಾರ್ಚ್ ೨೧ರ ಸಂಜೆ ಸೂರ್ಯ ಮುಳುಗುವಾಗ ಮೀನರಾಶಿಯೂ ಮುಳುಗುತ್ತಿರುತ್ತದೆ. ಮೂರು ತಿಂಗಳ ಹಿಂದೆ ನೆತ್ತಿಯಲ್ಲಿದ್ದ ಪೆಗಸಸ್, ಕಾಸಿಯೋಪಿಯ - ಮುಂತಾದ ರಾಶಿಗಳೆಲ್ಲ ಈಗ ಕಾಣಲು ಸಿಗುವುದಿಲ್ಲ. ಇನ್ನೊಂದು ವಿಷುವ ಬಿಂದು ಕನ್ಯಾರಾಶಿಯಲ್ಲಿರುವುದು ಉದಯಿಸುತ್ತಿರುತ್ತದೆ.







ರಾತ್ರಿಯ ಆಕಾಶದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಈ ರಾಶಿಗಳು ಅದೇ ಕ್ರಮದಲ್ಲಿ ಕಾಣುತ್ತವೆ. ನೆತ್ತಿಯ ಮೇಲೆ ಕಂಗೊಳಿಸುವುದು ಪ್ರಕಾಶಮಾನ ನಕ್ಷತ್ರಗಳ ಸುಂದರ ವಿನ್ಯಾಸ. ಒರೈಯನ್ (ಮಹಾವ್ಯಾಧ), ಆರಿಗ (ವಿಜಯ ಸಾರಥಿ), ದೊಡ್ಡ ನಾಯಿ ಅಥವಾ ಮಹಾಶ್ವಾನ (ಕ್ಯಾನಿಸ್ ಮೇಜರ್), ಚಿಕ್ಕನಾಯಿ ಅಥವಾ ಲಘುಶ್ವಾನ (ಕ್ಯಾನಿಸ್ ಮೈನರ್), ಲೆಪಸ್ (ಮೊಲ) ಮತ್ತು ಮಿಥುನ (ಜೆಮಿನಿ). ಒರೈಯನ್‌ನಲ್ಲಿ ಕೆಂಪು ನಕ್ಷತ್ರ ಆರಿದ್ರ, ಯೋಧನ ಸೊಂಟದ ಪಟ್ಟಿಯ ಮೂರು ನಕ್ಷತ್ರಗಳು, ದಕ್ಷಿಣ ತುದಿಯ ರೀಗಲ್(ವ್ಯಾಧಪೃಷ್ಠ) ಇವನ್ನು ಗುರುತಿಸಬಹುದು. ಪಂಚಕೋಣಾಕೃತಿಯ ಆರಿಗದ ಪ್ರಕಾಶಮಾನ ನಕ್ಷತ್ರ ಕಪೆಲ್ಲಾ (ಬ್ರಹ್ಮಹೃದಯ). ಮಹಾಶ್ವಾನದಲ್ಲಿ ಸಿರಿಯಸ್(ಲುಬ್ಧಕ) ಮಿಥುನದ ಪುನರ್ವಸು ಜೋಡಿ ನಕ್ಷತ್ರಗಳು. ಹೀಗೆ ಈ ಭಾಗವನ್ನು ದುರ್ಬೀನಿನಿಂದ ಗಮನಿಸಿದರೆ ಇನ್ನೂ ಅನೇಕ ನಕ್ಷತ್ರಗಳು ಕಾಣುತ್ತವೆ. ಕ್ಷೀರ ಪಥದ ಭಾಗ ಇದು.

ದಕ್ಷಿಣದಲ್ಲಿ ಅಗಸ್ತ್ಯ (ಕನೋಪಸ್); ಪೂರ್ವದಲ್ಲಿ ಮಘ (ರೆಗುಲಸ್) ಗುರುತಿಸಬಹುದು. ಮಘ ಇರುವುದು ಸಿಂಹರಾಶಿಯಲ್ಲಿ. ನೆತ್ತಿಯ ಮೇಲಿನ ಮಿಥುನರಾಶಿಗೂ, ಸಿಂಹರಾಶಿಗೂ ಮಧ್ಯೆ ಖಾಲಿ ಜಾಗವೇನೋ ಎಂದು ಸಂಶಯ ಬರುವಷ್ಟು ಕ್ಷೀಣ ನಕ್ಷತ್ರಗಳಿವೆ. ಇದು ಕಟಕ ರಾಶಿ. ದುರ್ಬೀನಿನಿಂದ ಹುಡುಕಿದಲ್ಲಿ ಒಂದು ಕ್ಷೀಣ ನಕ್ಷತ್ರ ಸಮೂಹವೂ ಕಾಣುವುದು. ಚಂದ್ರನಿಲ್ಲದ ರಾತ್ರಿಗಳಲ್ಲಿ, ನಗರದ ವಿದ್ಯುದ್ದೀಪಗಳ ಹಾವಳಿ ಇಲ್ಲದ ಸ್ಥಳಗಳಿಂದ, ಇದನ್ನು ಬರಿಗಣ್ಣಿನಿಂದ ಗುರ್ತಿಸಬಹುದು. ಪ್ರೆಸಿಪಿ ಎಂದಿದರ ಹೆಸರು.

ಸಿಂಹರಾಶಿಯ ಮಘನಕ್ಷತ್ರದ ಪೂರ್ವಕ್ಕೆ ಇನ್ನೊಂದು ಸ್ವಲ್ಪ ಕ್ಷೀಣವಾದ ನಕ್ಷತ್ರವಿದೆ. ಅದು ಫಲ್ಗುಣಿಗಳಲ್ಲೊಂದು, ಇದನ್ನು ಗುರುತಿಸಲು ನಮ್ಮ ಮಾರ್ಗದರ್ಶಿಯ ಸಹಾಯ ಪಡೆಯೋಣ.

ತಿಂಗಳ ಆರಂಭದಲ್ಲಿ ಚಂದ್ರ ಬೆಳಗಿನ ಝಾವ ಕಾಣುತ್ತದೆ. ೩ನೇ ತಾರೀಖು ಬೆಳಗಿನ. ಝಾವ ದುರ್ಬೀನಿನ ಮೂಲಕ ಚಂದ್ರನ ಆಸುಪಾಸನ್ನು ನೋಡಿ ಗುರುತಿಟ್ಟುಕೊಳ್ಳಿ.

ನೆಪ್ಚೂನ್‌ಗ್ರಹ ಚಂದ್ರನ ಹಿಂದೆ ಮರೆಯಾಗಿರುತ್ತದೆ. ೪ ರಂದು ಬೆಳಗಿನ ಝಾವ ಅದೇ ಸ್ಥಳವನ್ನು ಪರೀಕ್ಷಿಸಿ, ನೆಪ್ಚೂನ್ ಕಾಣುತ್ತದೆ. ಪೂರ್ವಕ್ಕೆ ಸರಿದ ಚಂದ್ರ ಮಂಕಾಗಿರುತ್ತದೆ.

೬ ರಂದು ಬೆಳಿಗ್ಗೆ ೧೦ ಗಂ. ೪೭ ನಿಮಿಷಕ್ಕೆ ಅಮವಾಸ್ಯೆ. ಬಾಲಚಂದ್ರನನ್ನು ಕಾಣುವ ಸಾಧ್ಯತೆ ಎಂಟರಂದೇ. ಆ ದಿನ ಪಶ್ಚಿಮದಂಚಿನಲ್ಲಿ ಬಾಲಚಂದ್ರನ ಪಕ್ಕದಲ್ಲಿರುವುದೇ ಮಂಗಳ ಗ್ರಹ. ಅದರಿಂದ ಮೇಲೆ ಗುರು, ಇನ್ನೂ ಮೇಲೆ ಶನಿ. ಒಂಭತ್ತರಂದು ಗುರುವನ್ನು ದಾಟುವ ಚಂದ್ರ೧೦ ರಂದು ಶನಿಯನ್ನು ದಾಟುವುದು.

೨೦ ರಂದು ೧೦ ಗಂ. ೧೪ ನಿಮಿಷಕ್ಕೆ ಹುಣ್ಣಿಮೆ. ಅಂದು ಚಂದ್ರನ ಸಮೀಪ ಇರುವ ನಕ್ಷತ್ರವೇ ಫಲ್ಗುಣಿ. (ಉತ್ತರಾ ಎಂದು ಪಂಚಾಂಗಗಳಲ್ಲಿ ಸೂಚಿಸಿರುತ್ತಾರೆ. ಪೂರ್ವ ಫಲ್ಗುಣಿ-ಪುಬ್ಬ; ಉತ್ತರ ಫಲ್ಗುಣಿ-ಉತ್ತರಾ). ಆದ್ದರಿಂದ ಈ ತಿಂಗಳ ಹೆಸರು ಫಾಲ್ಗುಣ. ೩೦ರಂದು ಪುನಃ ನೆಪ್ಚೂನ್ ಚಂದ್ರನಿಂದ ಅರ್ಧ ಡಿಗ್ರಿ ಅಂತರದಲ್ಲಿರುತ್ತದೆ. ೩೧ರಂದು ಯುರೇನಸ್ ಸಹ ಅರ್ಧ ಡಿಗ್ರಿ ಅಂತರದೊಳಗೇ ಕಾಣುತ್ತದೆ.

ಬುಧಗ್ರಹವನ್ನು ಕಾಣುವ ಅವಕಾಶ ೧೪ರಂದು ಇದೆಯಾದರೂ ಶುಕ್ರ, ಬುಧಗಳೆರಡೂ ಅಂದು ಸಂಧ್ಯಾಪ್ರಕಾಶದಲ್ಲಿ ಕರಗಿಹೋಗುವ ಸಾಧ್ಯತೆಯೇ ಹೆಚ್ಚು.

ಸಂಜೆಯ ಆಕಾಶದಿಂದ ಗ್ರಹಗಳು ಜಾರುತ್ತಿರುವ ಭಾವನೆ ಉಂಟಾಗುವುದು ಈ ತಿಂಗಳಲ್ಲೇ. ತಿಂಗಳ ಮೊದಲರ್ಧದಲ್ಲಿ ದೂರದೂರಕ್ಕೆ ಪೋಣಿಸಿದ ಮಾಲೆಯಂತೆ ಪಶ್ಚಿಮದಲ್ಲಿ ಕಂಗೊಳಿಸುವ ಇವು, ತಿಂಗಳ ಕೊನೆಯಲ್ಲಿ ಒತ್ತರಿಸಿ ಕಟ್ಟಿದ ಮಾಲೆಯಂತೆ ಪಶ್ಚಿಮದ ಅಂಚಿಗೆ ಸರಿಯುವುವು. ಶನಿ, ಗುರು ಮತ್ತು ಮಂಗಳಗಳ ಈ ಓಟವನ್ನು ಸ್ಪಷ್ಟವಾಗಿ ಗುರುತಿಸಬಹುದು.

೧೪ರಂದು ಚಂದ್ರನ ದೂರ ಕನಿಷ್ಠ, ೨೭ರಂದು ಗರಿಷ್ಠ. ಈ ವ್ಯತ್ಯಾಸವನ್ನು ಬರಿಗಣ್ಣಿಂದ ಗುರುತಿಸಬಲ್ಲಿರಾ?

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಬೆಂಗಳೂರು

## ಇಂದಿರ ಕಂಡ ಚಂದಿರ

*ಡಿಸೆಂಬರ್ ೨೨ರ ಹುಣ್ಣಿಮೆಯ ವಾಸ್ತವಾಂಶ ಇಲ್ಲಿದೆ.*

*ಚಂದ್ರ ಭೂಮಿಯನ್ನು ಸುತ್ತುವ ಕಕ್ಷೆ ವೃತ್ತಾಕಾರವಲ್ಲ; ದೀರ್ಘವೃತ್ತ. ಅಂದರೆ ಚಂದ್ರ ಕೆಲವೊಮ್ಮೆ ಭೂಮಿಗೆ ಸಮೀಪವಾಗಿದ್ದರೆ (೩೬೦,೦೦೦ ಕಿ. ಮೀ.) ಕೆಲವೊಮ್ಮೆ ದೂರದಲ್ಲಿರಬಹುದು (೪೦೦,೦೦೦ ಕಿ. ಮೀ.ಗಳು). ಈ ವ್ಯತ್ಯಾಸದಿಂದ (ಭೂಮಿಯಿಂದ ಕಂಡಂತೆ) ಚಂದ್ರನ ಗಾತ್ರ ವ್ಯತ್ಯಾಸವಾಗುವುದು ನಿಜ. ಆದರೆ ಬರಿಗಣ್ಣು ಇದನ್ನು ಗುರುತಿಸಲಾರದು. ಪ್ರತಿ ತಿಂಗಳೂ ನಡೆಯುವ ಈ ಘಟನೆಗಳನ್ನು ಕಡಲ ತೀರದ ಬೆಸ್ತರು ಉಬ್ಬರ ಇಳಿತಗಳ (ದೈನಂದಿನ) ಗರಿಷ್ಠ-ಕನಿಷ್ಠಗಳಿಂದ ಕಂಡು ಹಿಡಿದುಕೊಂಡಿರುತ್ತಾರೆ. ಚಂದ್ರನ ಕಲೆಗಳಿಗೂ ಇದಕ್ಕೂ ಯಾವುದೇ ಸಂಬಂಧವಿಲ್ಲ. ಝೂಮ್ ಲೆನ್ಸ್ ಅಥವಾ ಟೆಲಿಸ್ಕೋಪ್ ಉಪಯೋಗಿಸಿ ಚಂದ್ರನ ಚಿತ್ರವನ್ನು ತಿಂಗಳುದ್ದಕ್ಕೂ ತೆಗೆದು, ಹದಿನೈದು ದಿನ ಅಂತರದ ಎರಡು ಚಿತ್ರಗಳನ್ನು ಹೋಲಿಸಿದಾಗ ಸೂಕ್ಷ್ಮ ವ್ಯತ್ಯಾಸ ಕಂಡುಬರುತ್ತದೆ. ಇಂತಹ ಚಿತ್ರಗಳನ್ನು ನಾನು ವಿದ್ಯಾರ್ಥಿಗಳಿಗೆ ಅಳತೆ ಮಾಡಲು ಕೊಟ್ಟು ತನ್ಮೂಲಕ ಚಂದ್ರಕಕ್ಷೆ ದೀರ್ಘವೃತ್ತ ಎಂದು ಸಾಧಿಸುವುದನ್ನು ಹೇಳಿಕೊಡುತ್ತಿದ್ದೇನೆ.*

*ಡಿಸೆಂಬರ್‌ನಲ್ಲಿ ನಡೆದ ವಿಶೇಷವೆಂದರೆ ಚಂದ್ರ ಕನಿಷ್ಠ ದೂರದಲ್ಲಿದ್ದಾಗ ಹುಣ್ಣಿಮೆಯಾದದ್ದು. ಹುಣ್ಣಿಮೆ ಎಂಬುದು ದಿನವಲ್ಲ. ಒಂದು ಕ್ಷಣಿಕ ಘಟನೆ. ಹೀಗೆಯೇ ಕನಿಷ್ಠ ದೂರದ ಬಿಂದು (ಪುರಭೂ ಎಂದು ಇದಕ್ಕೆ ಹೆಸರು)ವನ್ನು ದಾಟುವುದೂ ಒಂದು ಕ್ಷಣಿಕ ಘಟನೆ. ಇವೆರಡರ ಅಂತರ ಆ ದಿನ ಕೇವಲ ಹತ್ತು ಗಂಟೆಗಳಷ್ಟಿತ್ತು. ಈ ದೃಷ್ಟಿಯಿಂದ ೧೯೮೦ರ ಡಿಸೆಂಬರ್ (೪೩ ಗಂಟೆಗಳ ಅಂತರ)ಮತ್ತು ೧೯೯೧ರ ಡಿಸೆಂಬರ್(೨೩ ಗಂಟೆಗಳ ಅಂತರ) ಹುಣ್ಣಿಮೆಗಳು ಇದೇ ಮಹತ್ವ ಪಡೆಯುತ್ತವೆ. ಇನ್ನು ಕನಿಷ್ಠ ದೂರದ ಮಾತು. ೧೮೬೬ರ ಡಿಸೆಂಬರ್ ೨೧ (೩೫೭,೨೮೯ ಕಿ. ಮೀ.),೧೮೯೩ರ ಡಿಸೆಂಬರ್ ೨೩ (೩೫೬,೩೯೬ ಕಿ. ಮೀ.), ೧೯೧೨ರ ಜನವರಿ ೪ (೩೫೬,೩೭೫), ೧೯೩೦ರ ಜನವರಿ ೧೫ (೩೫೬,೩೯೭ ಕಿ. ಮೀ.) ಇವುಗಳಿಗೆ ಹೋಲಿಸಿದಾಗ ೧೯೯೯ರ ಡಿಸೆಂಬರ್ ೨೨ (೩೫೬,೬೫೪) ಕನಿಷ್ಠ ಎಂಬ ಪಟ್ಟ ಪಡೆಯುವುದಿಲ್ಲ. ಈ ದಿನಗಳಲ್ಲೂ ಹುಣ್ಣಿಮೆ ಆಗಿತ್ತು. ಅಂದರೆ ೧೬೦ ವರ್ಷಗಳಿಗೊಮ್ಮೆ ಅಥವಾ ಪತ್ರಿಕೆಗಳು ಪ್ರಕಟಿಸಿದ ೧೩೩ ಎಂಬ ಸಂಖ್ಯೆಗೆ ಮಹತ್ವ ಎಲ್ಲಿಂದ ಬಂದಿತು?*

*ಈ ವಾಸ್ತವಿಕ ಅಂಶಗಳನ್ನು ಪತ್ರಿಕೆಗಳವರು ಪೂರ್ತಿಯಾಗಿ ಪ್ರಕಟಿಸದೇ ಆಯ್ದ ಭಾಗಗಳನ್ನು ಪ್ರಕಟಿಸಿದರು. ಇಂಟರ್‌ನೆಟ್‌ನಲ್ಲಿ ಹರಡಿದ ಸುದ್ದಿ "ಹೈಪ್" ಆಯಿತು. ವಾಸ್ತವಾಂಶ ಜನರಿಗೆ ಮುಟ್ಟಲಿಲ್ಲ.*

*ಡಿಸೆಂಬರ್ ೨೨ರ ಹುಣ್ಣಿಮೆ ಮೋಡ ಮುಚ್ಚಿ ಕಾಣದಾಯಿತು. ಜನವರಿ ತಿಂಗಳ ಹುಣ್ಣಿಮೆ ಪುರಭೂನಿಂದ ೩೧ ಗಂಟೆಗಳ ಅಂತರದಲ್ಲಿ ಉಂಟಾಗಿ ಶುಭ್ರ ನೀಲಿ ಆಕಾಶದಲ್ಲಿ ಕಂಗೊಳಿಸಿತು. ಈ ಎರಡು ಹುಣ್ಣಿಮೆಗಳಲ್ಲಿ ಚಂದ್ರನ ಬೆಳಕಿನ ವ್ಯತ್ಯಾಸವಾಗಲೀ, ಗಾತ್ರದ ವ್ಯತ್ಯಾಸವಾಗಲೀ ಬರಿಗಣ್ಣಿಗೆ ಗೋಚರವಾಗಿರುವುದು ಖಂಡಿತಾ ಸಾಧ್ಯವಿಲ್ಲ. ಮಾರ್ಚ್ ತಿಂಗಳ ೧೪ರಂದು ಪುರಭೂವನ್ನು ದಾಟುವ ಚಂದ್ರ, ೨೭ರಂದು ಗರಿಷ್ಠ ದೂರದ ಅಪಭೂವನ್ನು ದಾಟುತ್ತದೆ. ಆಸಕ್ತಿ ಇರುವವರು ಈ ಎರಡೂ ದಿನಗಳಲ್ಲಿ ಚಂದ್ರನ ಗಾತ್ರವನ್ನು ಅಳತೆ ಮಾಡಿ ವಾಸ್ತವಾಂಶವನ್ನು ಪರೀಕ್ಷಿಸಬಹುದು.*

*ಆದೇನೆ ಇರಲಿ, ಡಿಸೆಂಬರ್ ತಿಂಗಳ ಗುಲ್ಲು ಅನೇಕರನ್ನು ಮೊದಲಬಾರಿ ತಲೆ ಎತ್ತಿ ಚಂದ್ರನನ್ನು ನೋಡುವಂತೆ ಮಾಡಿತು. ಯಾವ ಹುಣ್ಣಿಮೆಯನ್ನೂ ಗಮನಿಸದಿದ್ದವರಿಗೆ ಅಂದು ಚಂದ್ರ ಪ್ರಕಾಶಮಾನವಾಗಿ ಕಂಡಿರುವುದು ಸಹಜ. ಒಟ್ಟಿನಲ್ಲಿ, ಹುಣ್ಣಿಮೆಯ ದಿನ ಚಂದ್ರನ ಬೆಳಕು ಹೆಚ್ಚು ಎಂದು ತಿಳಿಯಲು ಪತ್ರಿಕೆಗಳ ಪ್ರಚಾರ ಬೇಕಾಯಿತು ಎಂಬುದೇ ವಿಪರ್ಯಾಸ.*

– ಬಿ. ಎಸ್. ಶೈಲಜಾ


## STATEMENT OF OWNERSHIP

| | | |
|---|---|---|
| 1 | Place of Publication | Bangalore |
| 2 | Periodicity of its Publication | Monthly |
| 3. | Printer's Name<br>Whether Citizen of India<br>Address | R. S. Rajaram<br>Yes<br>Navakarnataka Publications (P) Ltd. Embassy Centre No. 11, Crescent Road, Bangalore-1 |
| 4 | Publisher's Name<br>Whether Citizen of India<br>Address | R. S. Rajaram<br>Yes<br>Navakarnataka Publications (P) Ltd. Embassy Centre No. 11, Crescent Road, Bangalore-1 |
| 5 | Editor's Name<br>Whether Citizen of India<br>Address | Dr. G. Ramakrishna<br>Yes<br>Navakarnataka Publications (P) Ltd. Embassy Centre No. 11, Crescent Road, Bangalore-1 |
| 6 | Names and Addresses of individuals who own the newspaper and partners and share holders, holding more than one percent of the total capital | Navakarnataka Publications (P) Ltd Embassy Centre No. 11, Crescent Road, Bangalore-1 Sole Proprietors |

I, R. S. Rajaram, hereby declare that the particulars given above are true to the best of my knowledge and belief

Sd/-
R. S. Rajaram
Publisher

Date 28-2-2000

# ಯೋಗಪ್ರವೇಶ-೮

ಜಿ. ರಾಮಕೃಷ್ಣ

**ಯೋ**ಗಶಾಸ್ತ್ರ ಗ್ರಂಥಗಳನ್ನು ಓದಿಕೊಂಡು ಯೋಗಾಭ್ಯಾಸದ ಅನೇಕ ಮಗ್ಗುಲುಗಳ ಬಗ್ಗೆ ಬೇಕಾದಷ್ಟು ಮಾತನಾಡಬಹುದು, ಆಧುನಿಕ ಮನೋವಿಜ್ಞಾನ ಹಾಗೂ ಶರೀರ ವಿಜ್ಞಾನಗಳ ಸಹಾಯದಿಂದ ವ್ಯಾಖ್ಯಾನಿಸಬಹುದು. ಆದರೆ ನಿಜವಾದ ಅಭ್ಯಾಸಕ್ಕೆ ಅದು ಪೂರಕವಾಗಬೇಕೇ ವಿನಾ ಪರ್ಯಾಯವಾಗಬಾರದು. ಪ್ರಾಯೋಗಿಕತೆ ಇಲ್ಲದ ಯೋಗಜ್ಞಾನ ನಿರರ್ಥಕ. ಆದ್ದರಿಂದ ಈವರೆಗೆ ನಾವು ತಿಳಿದು ಕೊಂಡ ದೇಹ ಮನಸ್ಸುಗಳ ಸಾಂಗತ್ಯ ಹಾಗೂ ಅವುಗಳ ನಿಯಂತ್ರಿತ ಉತ್ತಮಗೊಳಿಸುವಿಕೆಯತ್ತ ಹೊರಳೋಣ.

ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು, ಆಕಾಶವಾಣಿಯು ವಟಗುಟ್ಟುವಂತೆ 'ಭಕ್ತಿಗೀತೆಗಳ ಕಾರ್ಯಕ್ರಮ' ನಡೆಸಿ, ಆಮೇಲೆ ಯೋಗಾಭ್ಯಾಸದಲ್ಲಿ ತೊಡಗಬೇಕೆಂಬ ಮೂಢ ಶ್ರದ್ಧೆ ನೈಜ ಅಭ್ಯಾಸಿಗೆ ಅನಗತ್ಯ. ಯಾರಿಗೆ ಯಾವಾಗ ಅನುಕೂಲವೋ ಆಗ ಅದನ್ನು ಅಭ್ಯಾಸ ಮಾಡಲು ಅಡ್ಡಿಯಿಲ್ಲ. ಜಪಾನಿನಲ್ಲಿ ಕೆಲವರು ರಾತ್ರಿ ೧ ಗಂಟೆಯಿಂದ ೨ರವರೆಗೆ ಟೆನಿಸ್ ಆಡುತ್ತಾರಂತೆ; ಏಕೆಂದರೆ ಅವರ ಕೆಲಸದ ವೇಳಾಪಟ್ಟಿಯಲ್ಲಿ ಬಿಡುವು ದೊರೆಯುವುದು ಆಗಲೇ! ಇದಕ್ಕಿರುವುದು ಒಂದೇ ಷರತ್ತು. ಅದೇನೆಂದರೆ ಆಹಾರ ಸೇವಿಸಿದ ನಂತರ ಎರಡು - ಎರಡೂವರೆ ಗಂಟೆಗಳ ಕಾಲ ಕಳೆದಿರಬೇಕು ಎಂಬುದು. ಅದು ಪಚನ ಕ್ರಿಯೆಗೆ ಸಂಬಂಧಿಸಿದ ಷರತ್ತಾದ್ದರಿಂದ ಅದನ್ನು ಉಲ್ಲಂಘಿಸುವುದು ಆರೋಗ್ಯಕರವಲ್ಲ. ರಕ್ತ ಸಂಚಲನೆಯ ನಿಯಮವನ್ನು ತುಂಡರಿಸಿದರೆ ಅದರಿಂದ ಬಾಧೆ ಉಂಟಾಗುವುದು ಸಹಜ.

ಅಲ್ಲಮಪ್ರಭುದೇವನಂತಹ ಹತ್ತಾರು ಯೋಗಿವರ್ಯರು ಹಾಕಿಕೊಟ್ಟ ಮಾರ್ಗದಲ್ಲಿ ಹಠಯೋಗದ ಅಭ್ಯಾಸ ಮಾಡಬೇಕೆಂದು ನಿರ್ದೇಶಿಸುವ ಸ್ವಾತ್ಮಾರಾಮನ ''ಹಠಯೋಗ ಪ್ರದೀಪಿಕೆ'' ಅದಕ್ಕೆ ಯೋಗ್ಯವಾದ ಜಾಗದ ಸೂಚನೆಯನ್ನು ಕೊಟ್ಟಿದೆ. ('ಹಠ' ಎನ್ನುವ ಪದ ಇರುವುದರಿಂದ ಇದರಲ್ಲೇನೋ ಹಠ ಸಾಧಿಸುವುದಿದೆ, ಅದು ಸ್ವಲ್ಪ ಕಠಿಣವಿರಬೇಕು, ಅದರಲ್ಲಿ ದೇಹ ದಂಡನೆಯೂ ಸೇರಿರುತ್ತದೆ ಎಂಬ ಕಲ್ಪನೆ ಬೇಡ. ಇದು ಹಠಯೋಗ, ಹಟ ಯೋಗವಲ್ಲ. ಆ 'ಹಠ'ದ ನಿರ್ವಚನ ಇಲ್ಲಿ ಅನಗತ್ಯ.) ಆಯ್ಕೆಮಾಡಿಕೊಳ್ಳುವ ಪ್ರಶಸ್ತವಾದ ಜಾಗ ಹೀಗಿರಬೇಕಂತೆ:

*ಸುರಾಜ್ಯೇ ಧಾರ್ಮಿಕೇ ದೇಶೇ ಸುಭಿಕ್ಷೇ ನಿರುಪದ್ರವೇ ।*
*ಧನುಃಪ್ರಮಾಣಪರ್ಯಂತಂ ಶಿಲಾಗ್ನಿ ಜಲವರ್ಜಿತೇ ।*
*ಏಕಾಂತೇ ಮಠಿಕಾಮಧ್ಯೇ ಸ್ಥಾತವ್ಯಂ ಹಠಯೋಗಿನಾ ॥ (೧.೧೨)*

ಇದನ್ನು ಕಟ್ಟುನಿಟ್ಟಾಗಿ ಪಾಲಿಸಹೊರಟರೆ ಭಾರತದಲ್ಲಂತೂ ಯೋಗಾಭ್ಯಾಸ ಮಾಡುವಂತಿಲ್ಲ. ಸುರಾಜ್ಯ, ಸುಭಿಕ್ಷೆ, ಉಪದ್ರವರಾಹಿತ್ಯ ಇವು ನಮ್ಮ ಧರ್ಮಭೀರುಗಳ ಆಡಳಿತದಲ್ಲಿ ಈವರೆಗೆ ಸಿದ್ಧಿಸಿಲ್ಲ. ಅಭ್ಯಾಸ ಮಾಡುವ ಜಾಗದಿಂದ ಸುತ್ತಲೂ ನಾಲ್ಕು ಮೊಳ ದೂರದವರೆಗೆ ನೀರು, ಬೆಂಕಿ, ಇರಬಾರದೆಂಬ ನಿಯಮವನ್ನು ಪಾಲಿಸಲು ಅಡಚಣೆ ಇರಬಾರದು. ಅದು ಕ್ಷೇಮ ಕೂಡ. ಎಲ್ಲರೂ ಏಕಾಂತವಾಸಕ್ಕೆ ಯೋಗ್ಯವಾದ ಸ್ಥಳವನ್ನು ಹಿಡಿಯ ಹೊರಟರೆ ತಂಗುದಾಣಗಳ ಅಭಾವ ಮೂಡುವುದು ಸಹಜ. ಹೆದ್ದಾರಿಗಳ ನಿರ್ಮಾಣದ ಉತ್ಸಾಹದಲ್ಲಿ ಕೃಷಿಗೇ ಭೂಮಿ ಕಡಿಮೆಯಾಗುತ್ತಿರುವಾಗ ಎಲ್ಲರಿಗೂ ಏಕಾಂತ ವಾಸ ಎಲ್ಲಿಂದ ತರೋಣ! ಹಾಗೆ ಹುಡುಕುತ್ತಾ ಹೊರಟರೆ ಕಡೆಗೆ ದಕ್ಷಿಣ ಧ್ರುವದ ಬಳಿ ಕೂಡ ತಂಗುದಾಣಗಳ ದಟ್ಟಣೆ ಉಂಟಾದೀತು. ಆದ್ದರಿಂದ ಸಾಮಾನ್ಯವಾಗಿ ಹೀಗೆನ್ನಬಹುದು: ಇದ್ದಿದ್ದರಲ್ಲಿ ಸ್ವಲ್ಪ ವಿಶಾಲವಾದ, ಗದ್ದಲವಿಲ್ಲದ, ಮಾಲಿನ್ಯವಿಲ್ಲದ (ಅಥವಾ ಕಡಿಮೆ ಇರುವ) ಜಾಗವನ್ನು ಆಯ್ಕೆ ಮಾಡಿಕೊಳ್ಳಬೇಕು.

ನಾವು ನಿರೀಕ್ಷಿಸುತ್ತಿರುವ ಅಭ್ಯಾಸವೆಂತಹುದೆಂದರೆ ಅದು ಬೇರೆಲ್ಲ ಶ್ರಮದ ದುಡಿಮೆಯ ಜೊತೆಯಲ್ಲಿ ಇರುತ್ತದೆ. ಕೇವಲ ಯೋಗಾಭ್ಯಾಸವೇ ವ್ಯಕ್ತಿಯ ದುಡಿಮೆಯಾಗಿಬಿಡುವ ಸಂದರ್ಭವಲ್ಲ. ಏಕೆಂದರೆ, ಬೇರೆ ದುಡಿಮೆ ಮಾಡದ ಯೋಗಾಭ್ಯಾಸಿ ಒಬ್ಬ ಪರತಂತ್ರಜೀವಿ ಆಗಿಬಿಡುತ್ತಾನೆ. ಅವನನ್ನು ಸಾಕಲು ಬೇರೆಯವರು ಅಗತ್ಯಕ್ಕಿಂತ ಹೆಚ್ಚು ದುಡಿದು ಅವರ ಶ್ರಮದ ಫಲವನ್ನು ಇವನಿಗೆ ಬಳುವಳಿ



ಯಾಗಿ ನೀಡಬೇಕಾಗುತ್ತದೆ. ದುಡಿಮೆ ಮಾಡದವನು ಸ್ವಾಭಿಮಾನಿಯಾಗಿರಬಾರದವನು; ಅವನಿಗೆ ಯೋಗಾಭ್ಯಾಸ ಬೇರೆ ದಂಡ! ಅಂತಹವನ ರಾಜಕೀಯ ದುಡಿಮೆ (ಭಾಗವಹಿಸುವಿಕೆ) ಸಹ ಬೇರೆ ತ್ರಿಶೂಲಧಾರಿಗಳು ನಿರ್ಧರಿಸುತ್ತಾರೆ. ಆರೋಗ್ಯಕರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕಾದ ಶ್ರಮಜೀವಿಯ ಯೋಗಾಭ್ಯಾಸ ಇದಕ್ಕಿಂತ ಭಿನ್ನವಾದುದು, ಉನ್ನತ ಮಟ್ಟದ್ದು. ಅವನು ದೇಹ ಮತ್ತು ಮನಸ್ಸುಗಳನ್ನು ಸಮತೋಲನದಲ್ಲಿರಿಸಿಕೊಳ್ಳಲು ಮೊದಲಿಗೆ ಸಿದ್ಧಾಸನ ಮತ್ತು ಉಜ್ಜಾಯೀ ಎಂಬುವನ್ನು ಅಭ್ಯಾಸ ಮಾಡಬಹುದು. ಆತುರವಿಲ್ಲದೆ ಅಭ್ಯಾಸದಲ್ಲಿ ತೊಡಗಬೇಕಾದ್ದು ಅತಿ ಮುಖ್ಯ. ವೇಳೆಯ ಒತ್ತಡ ಮನಸ್ಸನ್ನು ಬಾಧಿಸುತ್ತಿದ್ದರೆ ಏಕಾಗ್ರತೆ ಹೇಗೆ ಸಿದ್ಧಿಸುತ್ತದೆ? ಆದ್ದರಿಂದ ಪ್ರಾರಂಭಕ್ಕೆ ಅಭ್ಯಾಸಿಯು ಸುಮಾರು ಮೂವತ್ತು ನಿಮಿಷಗಳ ಕಾಲ ವೇಳೆಯ ಒತ್ತಡದಿಂದ ಮುಕ್ತವಾಗಿರುವಂತಹ ಮನಃಸ್ಥಿತಿಯನ್ನು ತಂದುಕೊಳ್ಳಬೇಕು.

ಸಿದ್ಧಾಸನದಲ್ಲಿ ಕುಳಿತಿರುವವರ ಚಿತ್ರವನ್ನು ನೋಡಿ. ನೀವೂ ತಲೆಯನ್ನು ಹಾಗೆಯೇ ಬಗ್ಗಿಸಿ ಕುಳಿತುಕೊಳ್ಳಬೇಕೆಂಬ ಒತ್ತಾಯಕ್ಕೆ ಮಣಿಯಬೇಕಾಗಿಲ್ಲ. ತಲೆಯನ್ನು ನೇರವಾಗಿ ನಿಲ್ಲಿಸಿಕೊಳ್ಳಬಹುದು; ಆದರೆ ಅದು ಆ ಕಡೆ, ಈ ಕಡೆ ವಾಲುವಂತಿರಬಾರದು. ಹಿಂದೆಯೇ ಹೇಳಿದ್ದಂತೆ ನಾವು ಅಭ್ಯಾಸಕ್ಕೆ ಕುಳಿತಾಗ 'ಸಮ ಕಾಯ ಶಿರೋ ಗ್ರೀವ' ಸ್ಥಿತಿ ಅತ್ಯಗತ್ಯ. ಹಾಗೆ ಕುಳಿತಾಗ ಗುರುತ್ವಾಕರ್ಷಣ ಕೇಂದ್ರ ಎಲ್ಲಿರುತ್ತದೆಂಬುದನ್ನು ಯಾರಾದರೂ ಭೌತಶಾಸ್ತ್ರ ಪಂಡಿತರನ್ನು ಕೇಳಿ ತಿಳಿದುಕೊಳ್ಳಿ. ತಲೆ ವಾಲಿಸಿದಾಗ ಆ ಬಿಂದುವೂ ಆ ಕಡೆ ಈ ಕಡೆ ಸರಿಯುತ್ತದಾದ್ದರಿಂದ ಒಂದು ರೀತಿಯ ನಿಶ್ಚಲತೆ ಸಾಧ್ಯವಾಗುವುದಿಲ್ಲ. ಹಾಗೆ ಸಿದ್ಧಾಸನದಲ್ಲಿ ಕುಳಿತು ಉಸಿರಾಟವನ್ನು ಒಂದು ನಿರ್ದಿಷ್ಟ ಕ್ರಮದಲ್ಲಿರುವಂತೆ ನೋಡಿಕೊಳ್ಳುವುದು 'ಉಜ್ಜಾಯೀ' ಎನಿಸಿಕೊಳ್ಳುತ್ತದೆ. ಆ ಕ್ರಮವನ್ನು ಕ್ರಮೇಣ ತಿಳಿದುಕೊಳ್ಳೋಣ. ಅದಕ್ಕೆ ಮೊದಲು ಕುಳಿತುಕೊಳ್ಳುವ ರೀತಿಯನ್ನು ಸಿದ್ಧಿಸಿಕೊಳ್ಳೋಣ. ಸಿದ್ಧರು ಹಾಗೆ ಕುಳಿತುಕೊಳ್ಳುತ್ತಾರೆಂದೋ ಏನೋ ಇದಕ್ಕೆ ಸಿದ್ಧಾಸನವೆಂಬ ಹೆಸರು ಬಂದಿದೆ.

ನಾವು ತಗ್ಗಿ, ಬಗ್ಗಿ, ವಾಲಿ, ಅಂಗಾಂಗಗಳನ್ನು ಎತ್ತಿ ಅದುಮಿ, ಸರಿಸಿ, ಎಷ್ಟೊಂದು ಬಗೆಗಳಲ್ಲಿ ಶರೀರವನ್ನು ತಿರುಚಬಹುದು, ರೂಪ - ಕೊಡಬಹುದು, ಊಹಿಸಿ. ''ಆಸನಾನಿ ತು ತಾವಂತಿ ಯಾವಂತೋ ಜೀವಜಾತಯಃ'' ಎನ್ನುತ್ತಾರೆ. ಅಂದರೆ, ಜೀವಜಾತಿಗಳಲ್ಲಿ ಎಷ್ಟು ವೈವಿಧ್ಯವಿದೆಯೋ ನಾವು ಧರಿಸಬಹುದಾದ ಆಸನಗಳಲ್ಲಿ ಅಷ್ಟು ವೈವಿಧ್ಯವಿದೆ, ಎಂದರ್ಥ. ಕೋತಿ, ಕೋಳಿ, ಆಮೆ, ಕಪ್ಪೆ, ಚೇಳು, ಹಾವು, ನವಿಲು, ಮಿಡತೆ, ಮೊಸಳೆ, ಹೀಗೆ ವಿಧವಿಧವಾದ ಪ್ರಾಣಿಗಳ ಆಕಾರಗಳನ್ನು ಹೋಲುವಂತೆ ನಮ್ಮ ಶರೀರವನ್ನು ಬಗ್ಗಿಸಬಹುದು, ಕುಗ್ಗಿಸಬಹುದು. ಆದರೆ ಬಲವಂತವಾಗಿ ಒಂದೇ ದಿನದ ಅಭ್ಯಾಸದಿಂದ ದೇಹಕ್ಕೆ ಅದನ್ನು ಕಲಿಸಲು ಹೊರಟರೆ ಶರೀರಕ್ಕೆ ಪ್ರಯಾಸವಾಗುತ್ತದೆ, ತ್ರಾಸ ಉಂಟಾಗುತ್ತದೆ, ತ್ರಾಣ ಉಳಿಯುವುದಿಲ್ಲ. ನಿಧಾನ, ಸಹನೆ, ಸುಲಭ ಚಲನೆ, ಇವು ಯೋಗಾಭ್ಯಾಸದ ಮೂಲಮಂತ್ರ. ನಮ್ಮ ಸ್ನಾಯುಗಳು ಜೀತದಾಳುಗಳಲ್ಲ; ಅವಕ್ಕೆ ಗೌರವ ನೀಡಿ ಮುದದಿಂದ ಬಾಳುವಂತೆ, ಬದಲಾಗುವಂತೆ ಮಾಡಬೇಕು. ಹೊಡೆದು ಬಡಿದು ಮಾಡಿದರೆ ಜೀತದಾಳು ಸಹ ಒಂದು ದಿನ ನಿಮಿರಿ ನಿಲ್ಲುತ್ತಾನೆ, ತಿರುಗಿ ಹೊಡೆಯುತ್ತಾನೆ. ಇನ್ನು ಸ್ನಾಯುಗಳನ್ನು ಕೇಳಬೇಕೆ! ಅವು ಸ್ವಾಯತ್ತವಾದುವು, ನಿಧಾನವಾಗಿ ಒಲಿಸಿಕೊಳ್ಳಬೇಕು. ಒಮ್ಮೆ ಮುನಿದರೆ ಅವನ್ನು ಮತ್ತೆ ಒಲಿಸಿಕೊಳ್ಳಲು ದೀರ್ಘಕಾಲ ವ್ಯರ್ಥವಾಗಬಹುದು. ದೇಶದ ಸಾರ್ವಭೌಮತ್ವವನ್ನು ನೀಗಿಕೊಳ್ಳುವ ಅಯೋಗ್ಯ ಕೆಲಸ ಮಾಡುವವರಿದ್ದಾರೆಂದ ಮಾತ್ರಕ್ಕೆ ಶರೀರದ ಅಂಗಗಳ ಸಾರ್ವಭೌಮತ್ವವನ್ನು ತೂರಿಬಿಡಲಾಗುತ್ತದೆಯೆ? ಅದು ಸಿದ್ಧಾಸನವಿರಲಿ, ಬುದ್ಧಾಸನವಿರಲಿ, ಸ್ನಾಯುಗಳು ತಮ್ಮ ಸಹಜ ಸ್ವಭಾವವನ್ನು ದೂರಮಾಡಿ ನಮ್ಮ ಇಚ್ಛೆಯಂತೆ ಒಮ್ಮೆಗೇ ಪುಟಿಯಬೇಕೆಂದು ನಿರೀಕ್ಷಿಸುವಂತಿಲ್ಲ.

ಸಿದ್ಧಾಸನ ಮತ್ತು ಉಜ್ಜಾಯೀಗಳ ಅಭ್ಯಾಸ ಕ್ರಮವನ್ನು ವಿವರವಾಗಿ ಮುಂದೆ ತಿಳಿಯೋಣ. ಸದ್ಯಕ್ಕೆ ಇಲ್ಲಿರುವ ಚಿತ್ರವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅಂಗಾಂಗಗಳ ಸ್ಥಾನ ಮತ್ತು ರೂಪಗಳನ್ನು ಮನನ ಮಾಡಿಕೊಳ್ಳಿ, ಹಾಗೆ ಹದಿನೈದು-ಇಪ್ಪತ್ತು ನಿಮಿಷಗಳ ಕಾಲ ಸ್ಥಿರವಾಗಿ, ಸುಖವಾಗಿ ಕುಳಿತಿರಲು ಯತ್ನಿಸಿ.

○○

# ಪವಾಡಗಳು ನಡೆದರೆ ಮಾತ್ರ

ಪ್ರಾಚೀನ ಕಾಲದಿಂದಲೂ ಜಗತ್ತಿನಲ್ಲಿ ವಿವರಿಸಿ, ಪ್ರತ್ಯಕ್ಷ ಸಿದ್ಧಪಡಿಸಿ ತೋರಿಸಲಾರದ ವಿಸ್ಮಯಗಳು ಜರುಗುತ್ತಲೇ ಇವೆ. ಇವುಗಳಲ್ಲಿ ತನಗೆ ಸಾಧ್ಯವಿದ್ದುದನ್ನು ವಿಜ್ಞಾನವು ಪರಿಶೋಧಿಸಿ, ಈಗ ಅವುಗಳಿಗೆ ಕಾರಣಗಳನ್ನು ಕಂಡುಕೊಂಡಿದೆ. ಆದರೆ ಅದೆಷ್ಟೋ ವಿಚಾರಗಳು ಇನ್ನೂ ನಮ್ಮ ಜ್ಞಾನಕ್ಕೆ ನಿಲುಕದೆ ನಿಗೂಢವಾಗಿಯೇ ಇವೆ. ಹಿಂದೆ ಮನುಷ್ಯ ಇವುಗಳಿಗೆಲ್ಲ ತನ್ನದೇ ಆದ ಕಲ್ಪನೆಗಳನ್ನು ಹೆಣೆದುಕೊಳ್ಳುತ್ತಿದ್ದ. ಕಾಲ ಸಂದಂತೆ ತನ್ನ ಕಲ್ಪನೆಗಳು ಸರಿಯಲ್ಲ ಎಂದು ಕಂಡುಕೊಂಡ.

ಹಿಂದೆ ಭೂಮಿ ಚಪ್ಪಟೆ ಎಂದೇ ಭಾವಿಸಲಾಗಿತ್ತು. ಆಗ ಸೂರ್ಯ ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಮುಳುಗುತ್ತಿದ್ದ. ಕ್ರಮೇಣ ಈ ಭೂಮಿ ಗೋಲಾಕಾರವಾಗಿದೆ ಎಂದೂ, ಅದೇ ಸೂರ್ಯನನ್ನು ಸುತ್ತುತ್ತದೆಂದೂ ತಿಳಿಯಲಾಯ್ತು.

ಹಿಂದೆ ಚಪ್ಪಟೆಯಾಗಿದ್ದ ಭೂಮಿ ಗೋಲಾಕಾರವಾದಾಗ, ನಮ್ಮ ಹಿಂದಿನ ನಂಬಿಕೆಗಳೆಲ್ಲ ತಲೆಕೆಳಗಾದವು. ರಾಹು – ಕೇತುಗಳೆಂಬ ಗ್ರಹಗಳು ಕೇವಲ ಸೂರ್ಯ ಚಂದ್ರರು ಹಾದುಹೋಗುವ ಪಥಗಳಷ್ಟೇ ಆಗಿಹೋದವು. ಚಂದ್ರನೂ ನಕ್ಷತ್ರವಲ್ಲ, ಬದಲಾಗಿ ಗ್ರಹವೆಂದೂ, ಹಗಲು ವೇಳೆ ನಕ್ಷತ್ರಗಳು ಆಕಾಶದಲ್ಲೇ ಇದ್ದರೂ ಕಾಣುವುದಿಲ್ಲವೆಂದೂ, ಭೂಮಿಗೆ ತನ್ನ ಅಚ್ಚಿನಲ್ಲಿ ತಿರುಗುವುದು, ಸೂರ್ಯನಿಗೆ ಸುತ್ತುಬರುವುದು, ಮುಂತಾದ ಚಲನೆಗಳಿವೆ ಎಂದೂ ತಿಳಿಯಲಾಯ್ತು. ಅಮವಾಸ್ಯೆ, ಹುಣ್ಣಿಮೆಗಳು ಹೇಗಾಗುತ್ತವೆಂಬ ಅರಿವು ಮೂಡಿತು. ಹೀಗೆ ಪ್ರಾಪಂಚಿಕ ಜ್ಞಾನ ವಿಸ್ತರಿಸುತ್ತಾ ಹೋದಾಗ ನಮ್ಮ ಕಲ್ಪನೆಗಳೆಲ್ಲಾ ಬದಲಾದವು.

ಹಿಂದೆ ಅವು ಯಾವುದೋ ಕಾಣದ ಶಕ್ತಿಯ ಕೈವಾಡವೆಂದು ಭಾವಿಸಿದ್ದಾಗ ಅದು ನಮಗೆ ಯಾವ ಅನಾಹುತಗಳನ್ನು ತಂದೊಡ್ಡುತ್ತದೋ ಎಂದು ತಿಳಿಯುತ್ತಿದ್ದೆವು. ಅದರಿಂದಾಗುವ ಪರಿಣಾಮಗಳಿಂದ ಪಾರಾಗಲು ಅದನ್ನು ಆರಾಧಿಸಿ ನಮ್ಮನ್ನು ರಕ್ಷಿಸೆಂದು ಗೋಗರೆಯುತ್ತಿದ್ದೆವು. ಇದರಿಂದಾಗಿ ನಮ್ಮಿಂದ ಉಪಾಸಿಸಲ್ಪಡುವ ಹಲವಾರು ಅಗೋಚರ ಶಕ್ತಿಗಳು, ನಮ್ಮಿಂದಲೇ ಇಡಲ್ಪಟ್ಟ ನಾನಾ ಹೆಸರುಗಳನ್ನು ಹೊತ್ತು ನಿಂತವು. ನಮಗೆ ವಿವರಿಸಲಾಗದ ಯಾವುದೋ ಶಕ್ತಿಯ ಪ್ರೀತಿಗೆ ಪಾತ್ರರಾಗುವುದೇ ಬದುಕಲು ಸುಗಮವಾದ ದಾರಿ ಎಂದು ತಿಳಿದು ಅವುಗಳಲ್ಲಿರುವ ಮಹಿಮೆಗಳನ್ನು ಗುರುತಿಸಿ ಪೂಜಿಸುವುದಕ್ಕೆ ತೊಡಗಿದೆವು. ಜನ ಇದಕ್ಕೆ ಆಸ್ತಿಕತೆ ಎಂದು ಹೆಸರಿಟ್ಟು, ಇದರಲ್ಲಿ ನಂಬಿಕೆ ಇಲ್ಲದೆ ಪ್ರಶ್ನಿಸುವವರನ್ನು ನಾಸ್ತಿಕರು ಎಂದು ಕರೆದರು. ಅಂಥಾ ನಾಸ್ತಿಕರನ್ನು ತಮ್ಮೆಡೆಗೆ ಸೆಳೆಯುವ ಸಲುವಾಗಿ, ಇಲ್ಲದ ಪವಾಡಗಳನ್ನು ಉಂಟೆಂದು ಸಾಧಿಸಿ ಪ್ರಚಾರ ಮಾಡುವ ಹವ್ಯಾಸವೂ ಮುಂದುವರೆಯತೊಡಗಿತು. ನಮ್ಮ ಆಸ್ತಿಕತೆ ನಿಂತುದೇ ಮಹಿಮೆ ಪವಾಡಗಳನ್ನು ಆಶ್ರಯಿಸಿ. ಅವುಗಳಿಲ್ಲದಿರುತ್ತಿದ್ದರೆ, ಜನ ಎಂದೋ ಅದರ ಮೇಲಿನ ನಂಬಿಕೆಯನ್ನು ಕಳಕೊಳ್ಳುತ್ತಿದ್ದರು. ಪ್ರತಿಯೊಂದು ಧರ್ಮವೂ ತನ್ನ ಪ್ರಭಾವವನ್ನು ವಿವರಿಸಲು ಇಂಥಾ ಅಲೌಕಿಕ ಘಟನೆಗಳ ಆಶ್ರಯ ಪಡೆಯದೆ ಇಲ್ಲ. ಈ ಆಸ್ತಿಕ ಮಹಿಮೆಗಳನ್ನು ಜನರಲ್ಲಿ ಬಿತ್ತಿ ಅವರನ್ನು ಶ್ರದ್ಧಾ ಭಕ್ತಿ ಯುಕ್ತರನ್ನಾಗಿ ಮಾಡಲಾಗುತ್ತಿತ್ತು. ಆದರೆ ಕಾಲ ಸಂದಂತೆ, ವಿಜ್ಞಾನ ಬೆಳೆದಂತೆ, ಜನರಲ್ಲಿರುವ ಆಸ್ತಿಕ ನಂಬಿಕೆಗಳ ಪವಾಡಗಳ ರಹಸ್ಯ ಬಯಲಾದಂತೆ, ಸತ್ಯದ ಅರಿವಾಗಿ, ಅವುಗಳಲ್ಲಿ ಹಿಂದಿದ್ದ ವಿಶ್ವಾಸ ನಶಿಸತೊಡಗಿತು. ಆದರೆ ಹಿಂದಿನ ನಂಬಿಕೆಗಳನ್ನು ಬಿಡಲಿಕ್ಕಾದೇ ಅದಕ್ಕೆ ಹೊಸ ಹೊಸ ಅರ್ಥಗಳನ್ನು ಕಂಡುಕೊಳ್ಳುತ್ತಾ ಜನ ಬಾಳತೊಡಗಿದರು. ಹಿಂದಿನಷ್ಟು ವಿಶ್ವಾಸವು ಈಗಿಲ್ಲದೇ ಹೋದರೂ, ಹಿಂದಿನಂತೆ ನಡೆದುಕೊಂಡು ಬಂದಿದೆ ಎಂಬಷ್ಟೇ ಕಾರಣಕ್ಕೆ ಅವು ಆಚರಣೆಯಲ್ಲಿ ಉಳಿದುಬಂದವು.

ಇದರಿಂದಾಗಿ ನಾವು ಹಿಂದೆ ಯಾವುದಕ್ಕೆ ಭಯಭೀತರಾಗಿ ನಡೆಯುತ್ತಾ ಅನ್ಯಾಯ ಮಾಡುವುದಕ್ಕೆ ಅಂಜುತ್ತಿದ್ದೆವೋ ಅಂಥಾ ಹೆದರಿಕೆ ಈಗಿಲ್ಲವಾಗಿಹೋಯಿತು. ಆದ್ದರಿಂದ ನಮ್ಮ ನೈತಿಕ ಮೌಲ್ಯಗಳನ್ನು ಉಳಿಸುವುದಕ್ಕೆ ಈ ಆಸ್ತಿಕತೆಯಿಂದ ಈಗ ಸಾಧ್ಯವಾಗುತ್ತಿಲ್ಲ.

ಇನ್ನು ದೇವರಿದ್ದಾನೆಂದು ಪ್ರತಿಪಾದಿಸುತ್ತಾ ಹೋದರೂ, ನಮ್ಮಲ್ಲಿ ದೇವರ ಅಸ್ತಿತ್ವದ ಬಗ್ಗೆ ಉದ್ಭವಿಸುವ ಅನೇಕ ಪ್ರಶ್ನೆಗಳಿಗೆ ಉತ್ತರಗಳೇ ಸಿಗುವುದಿಲ್ಲ. ಈ ದೇವರು ಇರುವುದೇ ಹೌದಾದರೆ, ಆತ ಸರ್ವಾಂತರ್ಯಾಮಿ ಸರ್ವಶಕ್ತನೇ ಆಗಿದ್ದರೆ, ಜಗತ್ತಿನಲ್ಲಿ ಇಷ್ಟೊಂದು ದೈವಿಕ ಕಲ್ಪನೆಗಳು ಹುಟ್ಟಿಕೊಳ್ಳುವುದಕ್ಕೆ ಸಾಧ್ಯವಿರಲಿಲ್ಲ. ನಿಜವಾಗಿ ಇರುವ ದೇವರನ್ನು ಸಮರ್ಥಿಸಿಕೊಳ್ಳುವುದಕ್ಕೆ ಯಾವ ಕಸರತ್ತೂ ಬೇಕಾಗುವುದಿಲ್ಲ. ಇಲ್ಲದ ದೇವರನ್ನು ಉಂಟೆಂದು ಹೇಳುವುದಕ್ಕೇ ಎಲ್ಲ ಮತಧರ್ಮಗಳೂ ತಮ್ಮ ಕಾಲ ಮತ್ತು ಶಕ್ತಿಯನ್ನು ವ್ಯಯ ಮಾಡುತ್ತಿವೆ.

ಅವರವರು ಕಂಡಂತೆ ದೇವರನ್ನು ರೂಪಿಸಿದ್ದಾರೆಂದು ನಾವು ಸಮಾಧಾನ ಪಟ್ಟುಕೊಳ್ಳಬಹುದಾದರೂ, ಒಂದೇ ದೇವರ ಕುರಿತಾದ ಅನೇಕ ಕಲ್ಪನೆಗಳು ಆಯಾ ಧರ್ಮಗಳ ಶಾಸ್ತ್ರಗ್ರಂಥಗಳಲ್ಲಿ ಪ್ರತಿಪಾದನೆಯೊಂದಿಗೆ, ವೈರುಧ್ಯಗಳೊಂದಿಗೆ ಕಂಡುಬರುವುದು ಸಾಧ್ಯವಿರಲಿಲ್ಲ. ದೇವರ ಕುರಿತಾಗಿಯೇ ಆಗಿರುವ, ಆಗುತ್ತಿರುವ ಅನೇಕ ರಕ್ತಪಾತಗಳು ಘರ್ಷಣೆಗಳು ಬಹುಶಃ ಇನ್ಯಾವುದರಿಂದಲೂ ಆಗಿರುವುದು ಇತಿಹಾಸದಲ್ಲಿ ಕಂಡುಬರುವುದಿಲ್ಲ.

ಇಂಥಾ ಧರ್ಮ ದೇವರುಗಳನ್ನು ಕಟ್ಟಿಕೊಂಡು ನಮಗೆ ಸುಖ, ನೆಮ್ಮದಿಯ ಬಾಳು ಸಾಧ್ಯವಿಲ್ಲವೆನ್ನುವುದು ಈಗ ಶ್ರುತವಾಗಿಬಿಟ್ಟಿದೆ. ಆದ್ದರಿಂದ ಇದಕ್ಕೆ ಶುಭ ವಿದಾಯ ಹೇಳುವುದಕ್ಕೆ ಇದು ಸಕಾಲವೆನ್ನುವುದನ್ನು ಈಗ ಪ್ರಾಜ್ಞರೆಲ್ಲರೂ ಕಂಡುಕೊಂಡಿದ್ದಾರೆ.

ನಾವು ದೇವರಲ್ಲಿ ಆರೋಪಿಸಿರುವ ಗುಣವಿಶೇಷಗಳನ್ನು ನೋಡುವಾಗ, ಆತನ ಕಾರ್ಯ ಸಾಮರ್ಥ್ಯವನ್ನು ಅವಲೋಕಿಸುವಾಗ, ನಮಗೆಲ್ಲ ಕಾಣುವುದು ಇದು: ಹೌದು! ನಿಜವಾಗಿಯೂ ದೇವರೆನ್ನುವವನೊಬ್ಬ ಇರಬೇಕಿತ್ತು. ಆದರೆ ಆತ ಇಲ್ಲವೆನ್ನುವ ಹಾಗೆ ಆತ ಏಕೆ ವರ್ತಿಸುತ್ತಾನೆನ್ನುವುದಕ್ಕೆ ನಮ್ಮ ಧರ್ಮಶಾಸ್ತ್ರದಲ್ಲೆಲ್ಲೂ ಸಮರ್ಪಕವಾದ ಉತ್ತರ ಸಿಗುತ್ತಿಲ್ಲ. ಇದೇ ನಮಗೆಲ್ಲ ಅತ್ಯಂತ ಹೆಚ್ಚು ಚಿಂತೆಗೀಡುಮಾಡುವ ವಿಷಯ.

ಇಂದು ಯಾರಿಗೂ ದೇವರಿಲ್ಲ ಎಂದು ಖಂಡ ತುಂಡವಾಗಿ ಹೇಳಿ ತಮ್ಮ ಹೊಸ ಪಂಥವನ್ನು ಸ್ಥಾಪಿಸುವ ಹುಮ್ಮಸ್ಸು ಇಲ್ಲ. ಆದರೆ ಜಗತ್ತಿನಲ್ಲಿ ನಡೆಯುವ ಅನೇಕ ದುಷ್ಕಾರ್ಯಗಳನ್ನು ದೇವರಿದ್ದಾನೆ ಎಂಬ ನಂಬಿಕೆಯಿಂದಾಗಿ ತಡೆಯುವ ಶಕ್ತಿಯನ್ನು ನಾವೆಲ್ಲ ಕಳಕೊಂಡಿದ್ದೇವಲ್ಲ, ಅದಕ್ಕಾಗಿ ನಾವೆಲ್ಲ ಮರುಗಬೇಕಾಗಿದೆ.

ನಮ್ಮಲ್ಲಿ ಇನ್ನೊಂದು ವಿಧದಿಂದ ಆಲೋಚನೆ ಮಾಡುವ ವರ್ಗ ಒಂದಿದೆ. ದೇವರಿದ್ದಾನೆ, ಇಲ್ಲ, ಎಂಬ ಜಿಜ್ಞಾಸೆ ನಮಗೆ ಬೇಡ. ಇದ್ದಾನೆಂಬ ನಂಬಿಕೆಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ನಮ್ಮಲ್ಲಿ ದೇವರಿದ್ದಾನೆಂದು ಎಷ್ಟು ಸಮರ್ಥನೆಗಳನ್ನು ಕೊಡಬಹುದೋ, ಅಷ್ಟೇ ಸಮರ್ಥನೆಗಳನ್ನು ದೇವರಿಲ್ಲ ಎಂಬುದಕ್ಕೂ ಕೊಡಬಹುದು. ಅದು ಬರೇ ವಾದ ವಿವಾದ ವಿಚಾರಕ್ಕೆ ಮಾತ್ರ ಸೀಮಿತವಾಯಿತು. ಇಂದು ದೇವರಿದ್ದಾನೆಂದೇ ನಂಬುವುದರಿಂದ ಹಿತವಿದೆ. ಇಲ್ಲವೆನ್ನುವುದರಿಂದ ನಾವೆಲ್ಲ ಅನಾಥರಾಗುತ್ತೇವೆ, ತಬ್ಬಲಿಗಳಾಗುತ್ತೇವೆ. ಆಸ್ತಿಕರ ಕೆಂಗಣ್ಣಿಗೆ ಬಲಿಯಾಗುತ್ತೇವೆ, ಅದಕ್ಕಾಗಿ ಗುಂಪಿನಲ್ಲಿ ಗೋವಿಂದಾ ಅನ್ನುತ್ತಾ ಹತ್ತರೊಡನೆ ಹನ್ನೊಂದಾಗೋಣ ಅನ್ನುವವರಿದ್ದಾರೆ.

ಇದು ಮಾತ್ರ ಪಲಾಯನವಾದ. ಹೊರಗೆ ಮಾತ್ರ ಆಸ್ತಿಕತೆಯಲ್ಲಿ ಮೆರೆದು ಒಳಗೆ ಮಾತ್ರ ನಾಸ್ತಿಕನಾಗಿ ಬದುಕುವುದು ಆತ್ಮವಂಚನೆ. ಇದು ಗೋಮುಖ ವ್ಯಾಘ್ರತನ. ಇದು ಅತ್ಯಂತ ಹೀನ ಕೃತ್ಯ. ಈಗ ಆಗಿರುವುದು ಇದೇ.

ಇಂದು ಜಗತ್ತಿನಲ್ಲಿ ದೇವರುಂಟು ಎಂದು ಹೇಳುತ್ತಾ ಬದುಕುವ, ಅದರಿಂದ ಆಗುವ ಒಳ್ಳೆಯ ಪರಿಣಾಮಗಳ ಕಾಲ ಸಂದುಹೋಗಿದೆ. ಈಗ ಯಾವುದೇ ಒಂದು ಬಹು ದೊಡ್ಡ ಕ್ರಾಂತಿಯಾಗಿ ''ದೇವರಿಲ್ಲ'' ಎಂಬ ಸಿದ್ಧಾಂತ ಅನುಷ್ಠಾನಕ್ಕೆ ಬಂದಿತೆಂದು ಭಾವಿಸುವ. ಆಗ ಇಲ್ಲಿ ಜನ ಜೀವನದಲ್ಲಿ ಅಂಥಾ ಬಲುದೊಡ್ಡ ಬದಲಾವಣೆಗಳಾಗುವ ಸಂಭವ ಇಲ್ಲ. ಮತ ಕಲಹಗಳಿಗೆಲ್ಲ ಅಂಕದ ಪರದೆ ಬಿದ್ದು, ಜನ ಹೊಸತೊಂದು ಜೀವನ ಧರ್ಮಕ್ಕೆ ಹೊಂದಿಕೊಳ್ಳಬಹುದು. ವಿಜ್ಞಾನದ ಪರಿಣಾಮವಾಗಿ ಇಂದು ಜಗತ್ತೇ ಸಂಕುಚಿತಗೊಂಡು, ಇಡೀ ವಿಶ್ವವೇ ಒಂದು ಕುಟುಂಬವಾಗಿ ಬಾಳಬೇಕಾದ ಪರಿಸ್ಥಿತಿ ಎದುರಾಗುತ್ತಿರುವ ಇಂದಿನ ಕಾಲ ಘಟ್ಟದಲ್ಲಿ ವಿವಿಧ ದೇವರು, ಧರ್ಮಗಳನ್ನು ಪ್ರತಿಪಾದಿಸುವ ಬದಲು, ವಿಶ್ವಧರ್ಮದತ್ತ ದೃಷ್ಟಿ ಹರಿಸಬೇಕಾಗಿದೆ.

ಎಂ. ಕೃಷ್ಣರಾಜ ಕೆದಿಲಾಯ
'ವಿವೇಕ ವಿಹಾರ' ಸಾಮೆತ್ತಡ್ಕ , ಪುತ್ತೂರು-೫೭೪ ೨೦೧ ದ.ಕ.


Registered with the Registrar of News Papers for India under No.11308/99. Postal REGISTERED CPMG/KA/BG-7/2000

